# ಗೀತೆಯ ಗುಟ್ಟು

ಅಥವಾ

## ಪರಮಾತ್ಮಯೋಗವು

ಶ್ರೀಭಗವದ್ಗೀತೆಯ ಮೂಲ ಶ್ಲೋಕ, ಸರಲ ಕನ್ನಡ ಅರ್ಥ,
ಕಠಿನ ಶಬ್ದಾರ್ಥ, ಟಿಪ್ಪಣಿಗಳು, ಗೀತಾವಿವೇಚನೆ
ಇವುಗಳಿಂದೊಡಗೂಡಿದ್ದು.

ಲೇಖಕ:- ರಂಗನಾಥ ರಾಮಚಂದ್ರ ದಿವಾಕರ

ಪ್ರಥಮಾವೃತ್ತಿ, ೨೦೦೦ ಪ್ರತಿಗಳು

ಶಕ ೧೮೫೯] [ಸನ್ ೧೯೩೮

ಬೆಲೆ ೧ ರೂಪಾಯಿ

ಮನಿಯಾರ್ಡರಿನಿಂದ ೧-೨-೦ ವ್ಹಿ. ಪಿ. ಯಿಂದ ೧-೪-೦

## ಅರ್ಪಣವು

ನಿಜವನರಿತು ಅನುಭವ ಪಡೆದು ಅಲ್ಲಿ ನೆಲೆಯಾಗಿ ನಿಂತು ಆತ್ಮಲೀಲೆಗಾಗಿ ಪರಮಾತ್ಮ ಪ್ರೇರಿತ ವೀರಕರ್ಮವ ಮಾಡುತ ಈ ಭವದಲ್ಲಿಯೆ ಪರಮಾನಂದವನುಣಬೇಕು ಎಂಬ ವರ ಅಂತರ್ಯಾಮಿಗೆ-

ರಂಗನಾಥ

# ಅನುಕ್ರಮಣಿಕೆ

# ಮುನ್ನುಡಿ.

ಈಶ, ಕೇನ, ಕಠ, ಪ್ರಶ್ನ, ಮಾಂಡೂಕ್ಯ, ಮುಂಡಕ, ತೈತ್ತಿರೀಯ ಮತ್ತು ಐತರೇಯ ಎಂಬ ಎಂಟು ಉಪನಿಷತ್ತುಗಳನ್ನು ಕನ್ನಡಿಸಿದ ಮೇಲೆ ಗೀತೆಗೊಂದು ವಿವೇಚನಾರೂಪ ಪ್ರಸ್ತಾವನೆಯನ್ನು ಬರೆದು ಅದನ್ನೂ ಸುಲಭ ಕನ್ನಡದಲ್ಲಿ ಅವತರಿಸಬೇಕೆಂಬ ಬುದ್ಧಿಯು ಹುಟ್ಟಿತು. ಉಪನಿಷತ್ತುಗಳ ಅಭ್ಯಾಸ ಮಾಡುವಾಗ ಯಾವ ಕ್ರಮದಿಂದ ಸಾಗಿದ್ದೆನೊ ಅದೇ ಕ್ರಮದಿಂದ ಗೀತೆಯನ್ನಾದರೂ ಅಭ್ಯಸಿಸಿ ನನ್ನ ಮತ್ತು ನನ್ನಂಥ ವರ ಅಧ್ಯಾತ್ಮಸಾಧನಕ್ಕೆ ಸಹಾಯಭೂತವೆಂದು ಈ ಪುಸ್ತಕವನ್ನು ಬರೆದಿರುವೆನು.

ಈ ಪುಸ್ತಕವು ಸಿದ್ಧರಿಗಾಗಿ ಅಥವಾ ಬದ್ಧರಿಗಾಗಿ ಬರೆಯಲ್ಪಟ್ಟಿಲ್ಲ; ವಿದ್ವಾಂಸರಿಗಾಗಿ ಅಥವಾ ಮೂಢರಿಗಾಗಿ ಬರೆಯಲ್ಪಟ್ಟಿಲ್ಲ. ದ್ವೈತಾದ್ವೈತಗಳ ತಿರುಳು ತಿಳಿಯದೆ ಹುರುಳು ಹೊಳೆಯದೆ ನಾನು ದ್ವೈತಿ ನಾನು ಅದ್ವೈತಿ ಎಂದು ಹೇಳುವ ಹಟವಾದಿಗಳಿಗಾಗಿಯೂ ಬರೆಯಲ್ಪಟ್ಟಿಲ್ಲ. ಆದರೆ ದ್ವೈತಾದ್ವೈತ ಮುಂತಾದವುಗಳ ಮೂಲವಾದ ಅಧ್ಯಾತ್ಮಶಾಸ್ತ್ರದ ಅಭ್ಯಾಸ ಮಾಡುವ ಇಚ್ಛೆ ಇದ್ದ ಸಾಧಕರಿಗಾಗಿ ಒರ್ವ ಸಾಧಕನಿಂದ ಇದು ಬರೆಯಲ್ಪಟ್ಟಿದೆ. ಯಾವ ವಿಷಯದ ಅಭ್ಯಾಸವು ನನಗ ಅತ್ಯಾನಂದವನ್ನುಂಟು ಮಾಡಿರುವುದೊ, ಯಾವುದು ನನಗೆ ಯಾವಾಗಲೂ ಶಕ್ತಿ ಶಾಂತಿ ಸಮಾಧಾನಗಳನ್ನು ಕೊಡುತ್ತಿರುವದೊ, ಯಾವುದು ನವಸ್ಫೂರ್ತಿ ಕೊಟ್ಟು ವೀರಕರ್ಮಗಳನ್ನು ಮಾಡುವ ಸಾಮರ್ಥ್ಯವನ್ನು ರಾಷ್ಟ್ರಕ್ಕೆ ದಯಪಾಲಿಸುವದೆಂದು ನನ್ನ ಭಾವನೆಯೊ ಆ ಗೀತೆ, ಅದರಲ್ಲಿಯ ಅಧ್ಯಾತ್ಮ ಇವುಗಳನ್ನು ಯಥಾಶಕ್ತಿ ಯಥಾಮತಿ ನಾನು ವಿವೇಚಿಸಿರುವೆನು.

ಇನ್ನು ಗೀತೆಯ ಗುರಿಯೇನು ಎಂಬುದನ್ನು ಮುನ್ನುಡಿಯಲ್ಲಿಯೆ ಸ್ವಲ್ಪ ನೋಡುವದು ಅವಶ್ಯವು. ಸದ್ಯಕ್ಕೆ ಈ ಮನ್ವಂತರದಲ್ಲಿ ಮಾನವ ಜಾತಿಯು ಪ್ರಾಣಮಯಕೋಶದ ಭೂಮಿಕೆಯಲ್ಲಿರುವದು. ಅದುದರಿಂದ ಪ್ರಾಣವೆ ಎಲ್ಲಕ್ಕೂ ಪ್ರಬಲವಾಗಿರುವದು. ಅಹಂಕಾರ, ಅದು ನನ್ನದಾಗ

ಬೇಕು ಇದು ನನ್ನದಾಗಬೇಕು ಎಂಬ ಸ್ವಾರ್ಥ, ಇಂದ್ರಿಯಭೋಗದ ಕಾಮನೆಗಳು,ಪ್ರಜೋತ್ಪಾದನಪ್ರವೃತ್ತಿ ಇವೆಲ್ಲ ಈ ಭೂಮಿಕೆಯಲ್ಲಿ ಬಲವತ್ತರವಿರುವವು. ಆದುದರಿಂದಲೆ ಈ ಭೂಮಿಕೆಯಲ್ಲಿ ಪ್ರಾಣದೇವರ ಉಪಾಸನೆಯು ಹೆಚ್ಚು ಅವಶ್ಯಕವು. ಇರಲಿ. ಈಗ ಸ್ವಭಾವತಃ ಮನುಷ್ಯನು ಇಂದ್ರಿಯಭೋಗಗಳನ್ನು ಇಚ್ಛಿಸಿ ಅವುಗಳನ್ನು ಪಡೆದು ಸುಖವನ್ನನುಭವಿಸುವ ಆಶೆಯುಳ್ಳವನು. ಆದರೆ ಗೀತೆಯು, ನೀನು ಜಿತೇಂದ್ರಿಯನಾಗು, ಹೆಚ್ಚಿನ ಸುಖವನ್ನು ಪಡೆಯುವಿ ಎಂದು ಹೇಳುವದು. ವಿಷಯಾನಂದವನ್ನಳಿದು ಆತ್ಮಾನಂದವನ್ನೆ ನಿನ್ನ ಗುರಿಯಾಗಿಟ್ಟುಕೊಳ್ಳು, ಎಂದು ಅಧ್ಯಾತ್ಮದ ಉಪದೇಶವಿರುವದು. ಆದರೆ ಅಹಂಕಾರಾದಿಗಳನ್ನು ಬಿಟ್ಟಮೇಲೆ ಶತ್ರೇರಿತವಾದ ಕರ್ಮವಾದರೂ ಹೇಗೆ ಉಳಿಯುವದು? ಅಮೇಲೆ ಕರ್ಮಸನ್ಯಾಸವೆ ಲೇಸೆಂದು ಕೆಲವರು ಅನ್ನಬಹುದು. ಕುರುಕ್ಷೇತ್ರದ ಸಮರಭೂಮಿಯಲ್ಲಿ ಅರ್ಜುನನಿಗೆ ಎದುರಾದ ಎಷ್ಟೋ ಪ್ರಶ್ನೆಗಳಲ್ಲಿ ಇದೊಂದು ಮಹತ್ವದ ಪ್ರಶ್ನೆಯಾಗಿತ್ತು. ಸ್ವಾರ್ಥವನ್ನು ಬಿಟ್ಟಮೇಲೆನನಗೆ ಈ ಯುದ್ಧವೇಕೆ, ಈ ಕ್ರೂರ ಸಂಹಾರವೇಕೆ, ಈ ಆಪ್ತದ್ರೋಹವೇಕೆ? ಸುಮ್ಮನೆ ಭಿಕ್ಷಾಟನದಿಂದ ಉದರಂಭರಣ ಮಾಡಿಕೊಂಡು ಎಲ್ಲಿಯಾದರೂ ಹೇಗಾದರೂ ಕಾಲಕಳೆದರಾಯಿತು ಎಂಬ ದುರ್ಬಲವಿಚಾರಗಳು ಅವನಲ್ಲಿ ಸೇರಿದವು. ಈ ಪ್ರಶ್ನೆಗೆ ಕೊಟ್ಟ ಉತ್ತರದಲ್ಲಿ ಗೀತೆಯ ಗುರಿಯೂ ಗಹನವಿಚಾರವೂ ಆದರ ಆಧ್ಯಾತ್ಮಿಕತೆಯೂ ವ್ಯಾಪಕದೃಷ್ಟಿಯೂ ಒಡೆದು ಕಾಣಿಸುವವು. ಅಹಂಕಾರಾದಿಗಳನ್ನು ಬಿಟ್ಟಾಕ್ಷಣಕ್ಕೆ ಗ್ರಹವನ್ನು ಬಿಟ್ಟು ಗವಿಯನ್ನು ಸೇರುವ ಅವಶ್ಯಕತೆಯಿಲ್ಲ, ವ್ಯವಹಾರವನ್ನು ಬಿಟ್ಟು ವೇದಾಂತವನ್ನೇ ಅಭ್ಯಸಿಸುವ ಕಾರಣವಿಲ್ಲ, ಕರ್ಮವನ್ನು ಬಿಟ್ಟು ಕರ್ಮಸನ್ಯಾಸವನ್ನು ತಾಳುವದು ಅಗತ್ಯವಿಲ್ಲ. ಗಿರಿಕಂದರಗಳಲ್ಲಿದ್ದು ಗವಿಗುಹೆಳಗನ್ನು ಸೇರಿ ಸಂಗಸಹವಾಸಗಳನ್ನಳಿದು ಅಧ್ಯಾತ್ಮಸಾಧನೆ ಮಾಡಿರೆಂದು ಗೀತೆಯು ಹೇಳುವದಿಲ್ಲ. ಅಧ್ಯಾತ್ಮಸಾಧನದ ಮಾರ್ಗಗಳಲ್ಲಿ ಅದೊಂದು ಮಾರ್ಗವಿದ್ದರೂ ಅದೇ ಶ್ರೇಷ್ಠವೆಂದು ಗೀತೆಯು ಹೇಳುವದಿಲ್ಲ. ಗೀತೆಯು ಗಿರಿಗಂಹ್ವರಗಳಲ್ಲಿ, ಅಟ್ಟಡವಿಯ ಮರಣಮಯ ಶಾಂತಿಯಲ್ಲಿ, ಜಡಪ್ರಾಯವಾದ ನಿಷ್ಕ್ರಿಯತೆಯಲ್ಲಿ ಆತ್ಮಾನಂದವನ್ನು ಹುಡುಕುವದಿಲ್ಲ. ಭಯಂಕರ

ವೆಂದು ಭಾವಿಸಲ್ಪಟ್ಟ ಭವಸಾಗರದ ಈ ಹೆದ್ದೊರೆಯಲ್ಲಿ, ನೋವು ಸಾವು ಗಳ ತವರೂರಾದ ಸಮರರಂಗದಲ್ಲಿ, ಅವ್ಯಾಹತ ಅಖಂಡವಾಗಿ ನಡೆದ ಕರ್ಮಕಂದನದಲ್ಲಿ, ನಾನು ನಿಮಗೆ ಆತ್ಮಶಾಂತಿಯನ್ನು ನೀಡುವೆನು, ಆತ್ಮಾನಂದದ ಮಾರ್ಗವನ್ನು ತೋರುವೆನು ಎಂದು ಗೀತೆಯು ಪಣವನ್ನು ತೊಟ್ಟಿರುವದು. ಆದುದರಿಂದಲೆ, ಉಪರತನಾದ ಅರ್ಜುನನಿಗೆ ಶಾಟಿಯನ್ನು ಡಿಸಿ, ಬೂದಿಯನ್ನು ಬಡಿದು, ದಂಡವನ್ನು ಕೊಟ್ಟು, ಭವಸಾಗರದಿಂದ ಅವನು ಮುಕ್ತನಾದನೆಂಬ ಭ್ರಮವನ್ನುಂಟುಮಾಡದೆ, ಅಜ್ಞಾನ ಮೂಲಕ ಹುಟ್ಟಿದ ಕುಕಲ್ಪನೆಗಳಿಂದ ಗೋಳಿಡುವ ಅವನ ಆತ್ಮನನ್ನು ಮುಕ್ತಮಾಡಿ ಅತ್ಯಂತ ಘೋರವೆಂದೆನಿಸುವ ಸಮರಚೇಷ್ಟೆಗಳನ್ನು ಗೀತೆಯು ಅವನ ಕೈಯಿಂದಲೆ ಮಾಡಿಸಿತು. ಅಂತರಂಗದಲ್ಲಿ ಮುಕ್ತಸಂಗನಾಗಿರು, ಲೋಕ ಸಂಗ್ರಹದ ಸಮಾಜಕಾರ್ಯವನ್ನು ಕೃಷ್ಣಾರ್ಪಣಬುದ್ಧಿಯಿಂದ ಮಾಡು, ಎಂದು ಗೀತೆಯು ಅರ್ಜುನನಿಗೆ ಉಪದೇಶ ಮಾಡಿತು. ಆದರೆ ಹೀಗೆ ಉಪದೇಶಿಸುವಾಗ ಅವನಿಗೆ ಯಾವದೆ ಒಂದು ಯೋಗವನ್ನು ಹೇಳದೆ ಯೋಗಸಮನ್ವಯವಾದ ಪರಮಾತ್ಮಯೋಗವನ್ನುಸುರಿತು. ಪರಮಾತ್ಮನ ಅಸ್ತಿತ್ವದಲ್ಲಿ ದೃಢಶ್ರದ್ಧೆಯನ್ನಿಟ್ಟು ಆತ್ಮನ ಅಮರತ್ವವನ್ನರಿತು ಸ್ವಸಂಕಲ್ಪ ಬಲದಿಂದ ಸರ್ವಶಕ್ತಿ ಸಾಮರ್ಥ್ಯ ಕರ್ಮ ಚಲನವಲನಗಳನ್ನೆಲ್ಲ ಪ್ರತಿಕ್ಷಣ ದಲ್ಲಿಯೂ ಪರಮಾತ್ಮನಲ್ಲಿ ಅರ್ಪಿಸುತ್ತ ಲೋಕಧಾರಣೆಗಾಗಿ ಶ್ರೇಷ್ಠ ವೀರ ಕರ್ಮಗಳನ್ನು ಮಾಡಿರೆಂದು ಗೀತೆಯ ಅಮೃತಮಯ ಗಾನವು ನಮಗೆ ಸಾರುತ್ತಿರುವದು. ಅದನ್ನು ಕೇಳಿದವನು ಧನ್ಯನು, ಮುಕ್ತನು, ಆನಂದ ಸಾಗರದ ನಿತ್ಯನಿವಾಸಿಯು. ಅವನು ಅರಿತವನು. ಅವನು ಪರಮಾತ್ಮ ಯೋಗಿಯು. ಜ್ಞಾನ ಮತ್ತು ಕರ್ಮಯೋಗಗಳ ವ್ಯವಸ್ಥಿತಿಯನ್ನು ಅವನು ಬಲ್ಲವನು. ಆದುದರಿಂದ ಅವನು ಜನರಲ್ಲಿ ಬುದ್ಧಿಭೇದವು ಉಂಟಾಗಬಾರ ದೆಂದೂ ಲೋಕಸಂಗ್ರಹವು ಆಗಬೇಕೆಂದೂ ಸಮಾಜದ ಧಾರಣೆ ಪೋಷಣೆ ಸುಧಾರಣೆಗಳಾಗಬೇಕೆಂದೂ ಜನಕರಾಜನಂತೆ ಅಥವಾ ಶ್ರೀಕೃಷ್ಣನಂತೆ ಅಲಿಪ್ತನಿದ್ದು ಶ್ರೇಷ್ಠಕರ್ಮವನ್ನು ಮಾಡುವನು. ಅವನಿಗೆ ಎಲ್ಲೆಲ್ಲಿಯೂ ವಾಸುದೇವನೆ ಕಾಣುವನು. ಎಲ್ಲರಲ್ಲಿಯೂ ಆತ್ಮೌಪಮ್ಯಬುದ್ಧಿಯುಳ್ಳವ ನವನು, ಸಮದರ್ಶಿಯು. ಸರ್ವಭೂತಹಿತದಲ್ಲಿ ಸದಾರತನು. ಹೀಗಿರುವ

ವನೇ ಸಿದ್ಧನು. ಶ್ರೀಕೃಷ್ಣನು ಅಂಥ ಪರಮಸಿದ್ಧನು. ಪರಮಪವಿತ್ರ ಆಚರಣೆಯುಳ್ಳವನು, ಅನುಕರಣೀಯನು, ಯೋಗೇಶ್ವರನು. ಅಂಥ ಸಿದ್ಧನು ಸುರಿದ ಅಧ್ಯಾತ್ಮಶಾಸ್ತ್ರದ ಗ್ರಂಥವಿದು.

ಈ ರೀತಿ ಶ್ರೀಮದ್ಭಗವದ್ಗೀತೆಯು ನಮ್ಮ ಅಧ್ಯಾತ್ಮಶಾಸ್ತ್ರದ ಸಾರಸರ್ವಸ್ವವು. ಕರ್ನಾಟಕದ ನವಜಾಗೃತಿಯಕಾಲದಲ್ಲಿ ಈ ಗ್ರಂಥದ ಅಭ್ಯಾಸವು ಹೆಚ್ಚಾಗುವದು ಅವಶ್ಯವು. ನಮ್ಮಲ್ಲಿಯ ಜಾಗೃತಿಯು ಯಾವಾಗಲೂ ಆಧ್ಯಾತ್ಮಿಕ ಜಾಗೃತಿಯನ್ನವಲಂಬಿಸಿರುವದು. ಆದುದರಿಂದ ಗೀತೆಯನ್ನು ತಿಳಿಗನ್ನಡದಲ್ಲಿ ಭಾಷಾಂತರಿಸಿ ಅಧ್ಯಾತ್ಮಶಾಸ್ತ್ರದ ರುಚಿಯಿದ್ದ ಕನ್ನಡಿಗರ ಅಲ್ಪಸೇವೆಯನ್ನು ಮಾಡುವ ಭಾವನೆಯಿಂದ ಈ ಪುಸ್ತಕವನ್ನು ಬರೆದಿರುವೆನು. ಕನ್ನಡದಲ್ಲಿ ಎಷ್ಟೋ ಭಾಷಾಂತರಗಳಿರುವವು. ನಾಗರಸ ಕವಿಯ ಪದ್ಯಮಯ ಭಾಷಾಂತರವಂತೂ ಕನ್ನಡವಾಙ್ಮಯಕ್ಕೆ ಭೂಷಣಾಸ್ಪದವಾಗಿದೆ. ಆದರೆ ಸದ್ಯಕ್ಕೆ ನಿತ್ಯಪಾಠಕ್ಕೆ ಉಪಯೋಗವಾಗುವಂಥ, ಸಾಂಪ್ರದಾಯರಹಿತ, ಸರಲ ಭಾಷಾಂತರವಿದ್ದ, ಸುಲಭ ಕ್ರಯಕ್ಕೆ ದೊರೆಯುವ ಚಿಕ್ಕ ಗ್ರಂಥವು ಅವಶ್ಯವೆಂದು ತೋರಿದ್ದರಿಂದ ಈ ಯತ್ನವನ್ನು ಮಾಡಿರುವೆನು. ಸೇವಕನ ಈ ಅಲ್ಪಸೇವೆಯನ್ನು ಸವಿಮಾಡಿಕೊಳ್ಳುವದು ಸಹೃದಯ ಕನ್ನಡಿಗರನ್ನು ಕೂಡಿದೆ.

ಈ ಕಾರ್ಯದಲ್ಲಿ ನನಗೆ ಅನೇಕರು ಅನೇಕ ರೀತಿಯಿಂದ ಸಹಾಯ ಮಾಡಿರುವರು. ವಿಶೇಷತಃ 'ಗೀತೆಯೂ ಕರ್ನಾಟಕವೂ' ಎಂಬ ಪ್ರಕರಣದ ಬಗ್ಗೆ ನಾನು ಶ್ರೀ. ಬೇಂದ್ರೆ ಇವರಿಗೆ ಋಣಿಯಾಗಿರುವೆನು. ಇದಕ್ಕೆ ತಕ್ಕ ಧನ ಸಹಾಯವನ್ನು ಮಾಡಿದವರಿಗೂ ನಾನು ಉಪಕೃತನಿರುವೆನು. ಕೊನೆಗೆ ಅಚ್ಚುಕೂಟದ ಒಡೆಯರು ಈ ಕೆಲಸವನ್ನು ಮನಃಪೂರ್ವಕ ಮಾಡಿದ್ದಕ್ಕಾಗಿ ಅವರ ಅಭಾರಗಳನ್ನೂ ಮನ್ನಿಸಿ ಈ ಮುನ್ನುಡಿಯನ್ನು ಮುಗಿಸುವೆನು.

ಧಾರವಾಡ.
ಮಾಘ ವದ್ಯ ೬, ೧೮೫೮.

ರಂಗನಾಥ ದಿವಾಕರ
ಅಧ್ಯಾತ್ಮ ಕಾರ್ಯಾಲಯ

|| ಓಂ ತತ್ಸತ್ ||

# ಗೀತೆಯ ಗುಟ್ಟು ಅಥವಾ ಪರಮಾತ್ಮಯೋಗವು.

## ಗೀತಾ ವಿವೇಚನೆಯು.

## ೧. ಗೀತೆಯ ಮಹತ್ವವೂ ಮಹಾತ್ಮ್ಯವೂ.

**ಸೂಚನೆ—** ಶ್ರೀಗೀತಾಗ್ರಂಥದ ಮೂಲ ಶ್ಲೋಕಗಳನ್ನು ಮತ್ತು ಕನ್ನಡ ಭಾಷಾಂತರವನ್ನು ಬರೆಯುವದಕ್ಕೂ ಮೊದಲು ಒಂದು ವಿಸ್ತೃತವಾದ ಗೀತಾವಿವೇಚನೆಯನ್ನು ಬರೆಯಬೇಕೆಂಬ ಸಂಕಲ್ಪವನ್ನು ಮಾಡಿಕೊಂಡು ಕೆಳಗಿನ ನಾಲ್ಕು ನುಡಿಗಳನ್ನು ವಾಚಕರೆದುರಿಗೆ ಇಡುತ್ತಿರುವೆನು. ಈ ವಿವೇಚನೆಯಲ್ಲಿ ೧. ಗೀತೆಯ ಮಹತ್ವವೂ, ಮಹಾತ್ಮ್ಯವೂ, ೨. ಗೀತೆ ಮತ್ತು ಸದ್ಯಸ್ಥಿತಿಯು, ೩. ಗೀತೆ ಮತ್ತು ಕರ್ನಾಟಕವು, ೪. ಗೀತೆಯ ಭೂಮಿಕೆ, ೫. ಗೀತೆಯಲ್ಲಿಯ ಸನಾತನ ಧರ್ಮವು, ೬. ಗೀತೆಯಲ್ಲಿಯ ಯುಗಧರ್ಮವು, ೭. ಯೋಗಪಂಚಕವು, ೮. ಯೋಗಸಮನ್ವಯವು, ೯. ಗೀತೆಯ ಗುಟ್ಟುಗುರಿಗಳು, ಎಂಬ ಒಂಭತ್ತು ವಿಷಯಗಳನ್ನು ವಿವೇಚಿಸುವ ವಿಚಾರವಿದೆ. ಮೊದಲನೆಯ ಪ್ರಕರಣದಲ್ಲಿ ಈ ಗೀತಾಗ್ರಂಥದ ಮಹತ್ವವನ್ನೂ ಮಹಾತ್ಮ್ಯವನ್ನೂ ಕುರಿತು ವಿಚಾರಿಸುವ.

**ಮಹಾತ್ಮ್ಯವನ್ನು ಹೇಳುವ ಪದ್ಧತಿ—** ಇದುವರೆಗೆ ಅಚ್ಚಾದ ಗೀತೆಯ ಪ್ರತಿಯೊಂದು ಆವೃತ್ತಿಯ ಆರಂಭದಲ್ಲಿ ಬಹುಶಃ 'ಗೀತಾ ಮಹಾತ್ಮ್ಯ' ವೆಂಬ ಕೆಲವು ಶ್ಲೋಕಗಳು ಇದ್ದೇ ಇರುತ್ತವೆ. ಕೆಲವು ಆವೃತ್ತಿಗಳಲ್ಲಿ 'ಅದ್ವೈತಾಮೃತವರ್ಷಿಣೀಮ್' ಎಂಬ ಮುಂತಾದ ವಾಕ್ಯಗಳಿಂದೊಡಗೂಡಿದ ಸಾಂಪ್ರದಾಯಿಕ ಮಹಾತ್ಮ್ಯವು ಹೇಳಲ್ಪಟ್ಟಿರುತ್ತದೆ. ಎಲ್ಲ ಮಹಾತ್ಮ್ಯಗಳಲ್ಲಿಯೂ ಗೀತಾಭ್ಯಾಸದ ಫಲಶ್ರುತಿಯಂತೂ ತಪ್ಪಿದ್ದಿಲ್ಲ. ಯಾವ ಗ್ರಂಥವನ್ನು ವಾಚಕರ ಕೈಯಲ್ಲಿ ಕೊಡಬೇಕಾಗಿದೆಯೋ ಅದರ ಮಹತ್ವವನ್ನು ಆದಿಯಲ್ಲಿಯೇ ಹೇಳುವ ಪರಿಪಾಠವು ಈ ರೀತಿ ಪರಂಪರಾಗತವಿರುವದೆಂಬುದು ಇದರ ಮೇಲಿಂದ ಸಿದ್ಧವಾಗು

ವದು. ಅದನ್ನೇ ನಾನು ಇಲ್ಲಿ ಅನುಸರಿಸಿರುವೆನು.

**ಆರ್ಯರ ತತ್ವಗ್ರಂಥಗಳು**— ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂಬ ನಾಲ್ಕು ವೇದಗಳು, ತದಂತರ್ಗತವಾದ ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ಪ್ರಶ್ನ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಎಂಬ ದಶೋಪನಿಷತ್ತುಗಳು, ಉಪನಿಷತ್ತುಗಳ ಸಮನ್ವಯಾರ್ಥವಾಗಿ ಬರೆದ ಬ್ರಹ್ಮಸೂತ್ರಗಳು ಮತ್ತು ಶ್ರೀಭಗವದ್ಗೀತೆ ಇಷ್ಟು ಗ್ರಂಥಗಳು ಹಿಂದೂ ಜನರ ತತ್ವಜ್ಞಾನಸರ್ವಸ್ವವನ್ನು ಸಂಗ್ರಹಿಸಿವೆಯೆಂದೆನ್ನಬಹುದು. ಯಾವದೇ ಒಂದು ಶ್ರೇಷ್ಠವಾದ ವ್ಯಕ್ತಿಯು ಈ ಗ್ರಂಥಗಳನ್ನು ಬರೆಯಿತೆಂದು ಈ ಗ್ರಂಥಗಳಿಗೆ ಈಗಿರುವ ಮಹತ್ವವು ಪ್ರಾಪ್ತವಾಗಿಲ್ಲ. ಆದರೆ ಆಯಾ ಗ್ರಂಥಗಳಲ್ಲಿದ್ದ ಜ್ಞಾನವೇ ಅವುಗಳ ಮಹಾತ್ಮ್ಯವನ್ನು ಬೆಳೆಸಲಿಕ್ಕೆ, ಅವುಗಳ ಮಹತ್ವವನ್ನು ಹೆಚ್ಚಿಸಲಿಕ್ಕೆ ಕಾರಣವಾಗಿರುವದು. ಈ ಎಲ್ಲ ಗ್ರಂಥಗಳು ದೈವೀಸ್ಫೂರ್ತಿಯಿಂದ, ಜ್ಞಾನಸ್ಫೂರ್ತಿಯಿಂದ, ಸತ್ಯಸ್ಫೂರ್ತಿಯಿಂದ ಬರೆದವುಗಳಾದುದರಿಂದ ಸಾವಿರಾರು ವರ್ಷಗಳಾಗಿ ಹೋದರೂ ಅವು ಈಗ್ಯೂ ಎಲ್ಲ ಧರ್ಮಗ್ರಂಥಗಳ ಶಿರೋಭಾಗದಲ್ಲಿ ವಿರಾಜಿಸುತ್ತಿರುವುವು.

**ಭಾರತವೂ ಗೀತೆಯೂ**— ಇಲ್ಲಿ ಗೀತಾಗ್ರಂಥವೊಂದೇ ಪ್ರಸ್ತುತವಾಗಿರುವದರಿಂದ ಅದರ ಮಹತ್ವವೂ ಮಹಾತ್ಮ್ಯವೂ ಎಷ್ಟಿರುವದೆಂಬದನ್ನು ನೋಡಿ ಹೀಗಿರುವ ಕಾರಣಗಳನ್ನಾದರೂ ಸ್ವಲ್ಪಮಟ್ಟಿಗೆ ಈ ಪ್ರಕರಣದಲ್ಲಿ ಹೇಳಬೇಕಾಗಿದೆ. ಗೀತೆಯ ವಿಷಯದಲ್ಲಿ ಪ್ರಚಲಿತವಿದ್ದ

> **ಸರ್ವೋಪನಿಷದೋ ಗಾವೋ ।**
> **ದೋಗ್ಧಾ ಗೋಪಾಲನಂದನಃ ॥**
> **ವ್ಯಾಸೋ ವತ್ಸಃ ಸುಧೀರ್ಭೋಕ್ತಾ ।**
> **ದುಗ್ಧಂ ಗೀತಾಮೃತಂ ಮಹತ್ ॥**

ಎಂಬ ಶ್ಲೋಕವಂತೂ ಆಬಾಲವೃದ್ಧರಿಗೂ ಪರಿಚಿತವಿರುವದು. ಶ್ರೀಕೃಷ್ಣನೆಂಬ ಗೌಳಿಗನು ಉಪನಿಷತ್ತುಗಳೆಂಬ ಆಕಳುಗಳನ್ನು ಹಿಂಡಿ ಗೀತಾಮೃತವೆಂಬ ಹಾಲನ್ನು ಅರ್ಜುನನಿಗೆ ಉಣಿಸಿದನೆಂಬುದೇ ಇದರ ಭಾವಾರ್ಥವು. ಗೀತೆಯು ಉಪನಿಷತ್ತುಗಳ ಸಾರಸರ್ವಸ್ವವಿರುವದು, ಗೀತೆಯು

ಉಪನಿಷತ್ತುಗಳನ್ನು ಕಡೆದು ತೆಗೆದ ಬೆಣ್ಣೆಯಿರುವದು, ಎಂಬುದೇ ಇದರ ತಾತ್ಪರ್ಯವು. ಅನೇಕ ಗ್ರಂಥಗಳಲ್ಲಿ ಬೇರೆ ಬೇರೆ ಋಷಿಮುನಿಗಳೂ ವೇದಾಂತಿಗಳೂ ವಿದ್ವಾಂಸರೂ ಗೀತೆಯ ಮಹಾತ್ಮ್ಯವನ್ನು ಪರಿಪರಿಯಿಂದ ವರ್ಣಿಸಿದ್ದಾರೆ. ಅದನ್ನೆಲ್ಲ ಇಲ್ಲಿ ವಿವರಿಸುವ ಕಾರಣವಿಲ್ಲ; ಆದರೆ ಯಾವ ಮಹಾಭಾರತದಲ್ಲಿ ಗೀತೆಯು ಇರುವದೊ ಅದೇ ಗ್ರಂಥದಲ್ಲಿ ಗೀತೆಯ ವಿಷಯಕ್ಕಿದ್ದ ಒಂದು ಮಹತ್ವದ ಉಲ್ಲೇಖವನ್ನು ಇಲ್ಲಿ ಕೊಡುವೆನು. ವೈಶಂಪಾಯನ ಮುನಿಗಳು ಜನಮೇಜಯನಿಗೆ ಗೀತಾ ಮಹಾತ್ಮ್ಯವನ್ನು ಹೇಳುವಾಗ,

ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ |
ಗೀತಾಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ||
ಸರ್ವಶಾಸ್ತ್ರಮಯಿ ಗೀತಾ............ |
ಭಾರತಾಮೃತ ಸರ್ವಸ್ಯ ಗೀತಾಯಾ ಮಥಿತಸ್ಯ ಚ |
ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಹುತಮ್ ||

ಅಂದರೆ, 'ಅನೇಕ ಶಾಸ್ತ್ರಗಳನ್ನು ಸಂಗ್ರಹಿಸುವದಕ್ಕಿಂತ ಗೀತೆಯನು ಚನ್ನಾಗಿ ಅಭ್ಯಸಿಸಬೇಕು. ಗೀತೆಯು ಸರ್ವಶಾಸ್ತ್ರಮಯಿಯಾದುದು. ಭಾರತದ ತಿರುಳನ್ನು ತೆಗೆದು ಗೀತಾ ರೂಪದಿಂದ ಅದನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದನು,' ಎಂದು ಅಂದಿರುವನು. ಇಡೀ ಮಹಾಭಾರತದಲ್ಲಿ ಇನ್ನಾವ ಗ್ರಂಥದ ಬಗ್ಗೆಯೂ ಇಷ್ಟು ಗೌರವಯುಕ್ತವಾದ ಉಲ್ಲೇಖವು ಇಲ್ಲ.

**ಪ್ರಸ್ಥಾನತ್ರಯಿಯು**— ಹಿಂದೂತತ್ವಜ್ಞಾನದ, ಹಿಂದೂಧರ್ಮದ, ಹಿಂದೂ ನೀತಿಶಾಸ್ತ್ರದ ಅತ್ಯಂತ ಶ್ರೇಷ್ಠವಾದ ಆದಿ ಗ್ರಂಥಗಳಲ್ಲಿ ಶ್ರೀಮದ್ಭಗವದ್ಗೀತೆಯು ಒಂದು. ಏನಿಲ್ಲೆಂದರೂ ಇದು ೨೦೦೦ ವರ್ಷಗಳಾಚೆಗಿನದೆಂದು ವಿದ್ವಾಂಸರ ಮತವಿರುವದು. ಕ್ರಿಸ್ತೀಶಕದ ಪೂರ್ವದಲ್ಲಿ ಸುಮಾರು ೩೦೦ ವರ್ಷ ಈ ಗ್ರಂಥಕ್ಕೆ ಸದ್ಯಕ್ಕಿರುವ ರೂಪವು ಕೊಡಲ್ಪಟ್ಟಿತೆಂದು ತಜ್ಞರ ಮತವು. ಆರ್ಯರ ತತ್ವಜ್ಞಾನದ ಮತ್ತು ಧರ್ಮದ ವಿರುದ್ಧ ಎಲ್ಲಕ್ಕೂ ಬಲವಾದ ಮೊದಲನೆಯ ದಾಳಿಯು ನಮ್ಮ ಆರ್ಯಧರ್ಮದಿಂದಲೆ ಭರತಖಂಡದಲ್ಲಿ ಹುಟ್ಟಿದ ಬೌದ್ಧಧರ್ಮದ್ದು. ಆ ದಾಳಿಯನ್ನು ಹಿಮ್ಮೆ

ಟ್ಟಿಸುವಾಗ ಆ ಯುದ್ಧದಲ್ಲಿ ಯಶಸ್ವಿಯಾಗಿ ಬದುಕಿ ಬಾಳುವ ಪ್ರಸಂಗವು ಒದಗಿದಾಗ, ವೈದಿಕಮತದ ಆರ್ಯರು ತಮ್ಮ ಧರ್ಮತತ್ವಗಳ ಪುನಃ ಸ್ಥಾಪನೆ ಮಾಡಬೇಕಾಯಿತು. ಆಗ ತಮ್ಮ ತತ್ವಗಳಿಗೆ ಆಧಾರಭೂತವಾದವುಗಳು ಮೂಲ ಮುಖ್ಯ ಮೂರು ಗ್ರಂಥಗಳು, ಎಂದು ಮನ್ನಿಸಿ ಧರ್ಮಸಂಸ್ಥಾಪಕರಾದ ಆಚಾರ್ಯರು ಅವುಗಳನ್ನವಲಂಬಿಸಿ ಮೃತಪ್ರಾಯವಾದ ಹಿಂದೂಧರ್ಮದಲ್ಲಿ ಜೀವಕಳೆಯನ್ನು ತುಂಬಿದರು. ಆ ಮೂರು ಗ್ರಂಥಗಳಲ್ಲಿ ಗೀತೆಯು ಒಂದು. ದಶೋಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆ ಹೀಗೆ ಮೂರು 'ಪ್ರಸ್ಥಾನತ್ರಯಿ' ಎಂಬ ಉಚ್ಚ ಹೆಸರನ್ನು ಪಡೆದಿರುವವು. ಈ ಮೂರು ಗ್ರಂಥಗಳ ಗಟ್ಟಿಯಾದ ತಳಹದಿಯ ಮೇಲೆ ಆರ್ಯಧರ್ಮದ ಭದ್ರವಾದ ಕೋಟೆಯು ಕಟ್ಟಲ್ಪಟ್ಟಿರುವದು. ಅಂದಿನಿಂದ ಇದುವರೆಗೆ ಗೀತೆಯ ಮಹತ್ವವು ಬೆಳೆಯುತ್ತಲೇ ಬಂದಿರುವದು. ಪ್ರಸ್ಥಾನತ್ರಯಿಯಲ್ಲಿ ಸೇರುವದಕ್ಕೂ ಪೂರ್ವದಲ್ಲಿಯೇ ಗೀತೆಯು ಒಂದು ಒಳ್ಳೆ ಸನ್ಮಾನ್ಯ ಗ್ರಂಥವಾಗಿತ್ತು. ಅದಕ್ಕೆ ಎಷ್ಟೋ ಭಾಷ್ಯಗಳು ಬರೆಯಲ್ಪಟ್ಟಿದ್ದವು. ಅದು ನಿತ್ಯಪಾಠದ ಪವಿತ್ರ ಪುಸ್ತಕವಾಗಿತ್ತು. ಅಧ್ಯಾತ್ಮ ಪ್ರಗತಿಯ ಶ್ರೇಷ್ಠ ಸಾಧನವಾಗಿತ್ತು. ಆದುದರಿಂದಲೇ ಅದಕ್ಕೆ ಪ್ರಸ್ಥಾನತ್ರಯಿಯಲ್ಲಿ ಸ್ಥಾನವು ದೊರಕಿತು. ಅಂದಿನಿಂದ ಇದುವರೆಗೆ ಅಚ್ಚಳಿಯದೆ ಗೀತೆಯು ಆರ್ಯಧರ್ಮಪ್ರಕಾಶವನ್ನು ಬೀರುತ್ತಿರುವುದು. ಜಿಜ್ಞಾಸುಗಳ ಜ್ಞಾನದ ನೀರಡಿಕೆಯನ್ನು ತಣಿಸುತ್ತಿರುವುದು. ಆರ್ಯರನ್ನು ಉದ್ಧರಿಸುತ್ತಿರುವುದು. ಈಗಿನ ನಮ್ಮ ಅಧೋಗತಿಯ ಕಾಲಕ್ಕೆ ಅದರ ಸೊಲ್ಲು ಅಡಗಿದಂತಿದ್ದರೂ ಗಾಳಿ ಬಿಟ್ಟಕೂಡಲೇ ಪ್ರಜ್ವಲಿಸಲನುವಾಗುವ ಬೆಂಕಿಯಂತೆ ಗೀತೆಯ ಜ್ಯೋತಿಯು ಉದಯಕಾಲದಸಂಧಿಗೆ ನಮ್ಮ ಭೂಮಿಯಲ್ಲಿ ಬೆಳಗಿ ನಮಗೆ ಆಗಾಗ್ಗೆ ಜ್ಞಾನ, ಭಕ್ತಿ, ಶಕ್ತಿಗಳನ್ನು ಕೊಟ್ಟು ಕಾಪಾಡುತ್ತಿರುವುದು.

**ಗೀತೆ ಮತ್ತು ಅದರ ಅನುಕರಣವು**— ಇನ್ನು ನಮ್ಮ ಧರ್ಮದ ಆದಿ ಗ್ರಂಥಗಳು ವೇದೋಪನಿಷತ್ತುಗಳೆಂದು ನಾವೆಷ್ಟೇ ಅಭಿಮಾನದಿಂದ ಹೇಳಿದರೂ ನಮ್ಮಲ್ಲಿ ಬಹುಶಃ ಯಾರಿಗೂ ವೇದಗಳೆಂದರೇನು, ಅವುಗಳಲ್ಲಿಯ ಮಂತ್ರಗಳೆಷ್ಟು, ಅವುಗಳ ಕರ್ತೃಗಳು ಯಾರು, ಅವುಗಳ ವಿಷಯ

ವೇನು ಮುಂತಾದವುಗಳನ್ನು ಕುರಿತು ಸ್ಪಷ್ಟಜ್ಞಾನವು ಇಲ್ಲದಿರುವುದು ಶೋಚನೀಯವೇ ಸೈ. ಅಲ್ಲಿ ಇಲ್ಲಿ ಒಬ್ಬಿಬ್ಬರಿಗೆ ಮಾತ್ರ ಈ ಜ್ಞಾನವು ಇರುವದು. ಮಿಕ್ಕವರೆಲ್ಲರೂ ಕೇವಲ ಅಂಧ ಅಭಿಮಾನದಿಂದ ನಮ್ಮ ವೇದಗಳು ಶ್ರೇಷ್ಠ, ಅವು ಹಾಗೆ ಇವೆ, ಹೀಗೆ ಇವೆ, ಎಂದು ಹೇಳಿ ಆತ್ಮ ವಂಚನೆಯನ್ನು ಮಾಡಿಕೊಳ್ಳುತ್ತಿರುವರು. ಆದರೆ ಗೀತಾಗ್ರಂಥದ ಮಾತು ಹಾಗಿಲ್ಲ. ಅದು ಹಿಂದುಗಳಲ್ಲಿ ಆಬಾಲವೃದ್ಧರಿಗೆ ಗೊತ್ತಿದ್ದ ಗ್ರಂಥವು. ಅದರ ವಿಷಯವೂ ಮಹತ್ವವೂ ಕರ್ತೃವೂ ಎಲ್ಲರಿಗೂ ಪರಿಚಿತವಾದವು ಗಳು. ೬ ನೆಯ ಶತಮಾನದಲ್ಲಿ ಕೂಡ ಗೀತೆಯು ನಿತ್ಯಪಾಠದ ಗ್ರಂಥ ವಾಗಿತ್ತೆಂದು ಐತಿಹಾಸಿಕ ಉಲ್ಲೇಖವಿದೆ. ಇಡೀ ಚತುರ್ವೇದಗಳನ್ನೇ ಮುಖೋದ್ಗತ ಮಾಡಿ ಸಾವಿರಾರು ವರ್ಷಗಳ ವರೆಗೆ ಒಂದು ಅಕ್ಷರವು ಸಹ ಅಚ್ಚಳಿಯದಂತೆ ಉಳಿಸಿರುವ ಹಿಂದುಗಳು ಗೀತೆಯಂಥ ಸಣ್ಣ ಪುಸ್ತ ಕವನ್ನು ಪಾಠ ಮಾಡುವದು ದೊಡ್ಡ ವಿಷಯವಲ್ಲ. ಆದರೆ ೬ ನೆಯ ಶತ ಮಾನದಲ್ಲಿ ಕೂಡ ಗೀತೆಯು ಅಷ್ಟೊಂದು ಮಹತ್ವವನ್ನು ಪಡೆದಿತ್ತೆಂದು ಹೇಳುವದೇ ಇಲ್ಲಿ ನನ್ನ ಮುಖ್ಯ ಉದ್ದೇಶವಾಗಿದೆ. ತನ್ನ ಅನೇಕ ಸದ್ಗುಣಗಳ ಮೂಲಕ ಪ್ರಸ್ಥಾನತ್ರಯಿಯಲ್ಲಿ ಪ್ರವಿಷ್ಟವಾದುದಲ್ಲದೆ ಎಲ್ಲ ಜನತೆಯ ನಿತ್ಯಪಾಠದ ಪವಿತ್ರ ಪುಸ್ತಕವಾಗಿ ಮೆರೆದು ಗೀತೆಯು ಬೇರೆ ಅನೇಕ ಋಷಿಮುನಿಗಳಿಗೆ ಸ್ಫೂರ್ತಿಯನ್ನುಂಟು ಮಾಡಿ ತನ್ನಂತೆ ಬೇರೆ ಗ್ರಂಥಗಳನ್ನು ರಚಿಸುವ ಶಕ್ತಿಯನ್ನು ಕೊಟ್ಟಿತು. ಮನುಷ್ಯನು ಅನುಕ ರಣಶೀಲನಿರುವದರಿಂದ ಒಂದು ಗ್ರಂಥವು ದೊಡ್ಡದೆಂಬ ಕೀರ್ತಿಯು ಹಬ್ಬಿದ ಕೂಡಲೆ ಆ ಗ್ರಂಥದಂಥ ಗ್ರಂಥಗಳನ್ನು ಬರೆಯುವ ಲವಲವಿ ಕೆಯು ಕೆಲವರಲ್ಲಿ ಉಂಟಾಗುತ್ತಿದೆ. ಉಪನಿಷತ್ತುಗಳು ಸರ್ವರಿಗೆ ಅತ್ಯಂತ ಲೋಕಪ್ರಿಯವಾದ ಕೂಡಲೆ ಮೂಲ ೧೦-೧೫ ಉಪನಿಷತ್ತುಗ ಳನ್ನು ಕಣ್ಣೆದುರಿಗಿಟ್ಟುಕೊಂಡು ಲೆಕ್ಕವಿಲ್ಲದಷ್ಟು—ಕೆಲವರು ೧೦೮ ಎಂದೆ ನ್ನುವರು, ಕೆಲವರು ೧೫೦ ಎಂದು ಹೇಳಿರುವರು— ಉಪನಿಷತ್ತುಗಳು ಬರೆಯಲ್ಪಟ್ಟವು. ಅದೇರೀತಿ ಗೀತೆಯನ್ನು ಮಾದರಿಗಾಗಿ ತೆಗೆದು ಕೊಂಡು, ರಾಮಗೀತೆ, ಗಣೇಶಗೀತೆ, ಉದ್ಧವಗೀತೆ ಎಂಬ ಮುಂತಾದ ಹೆಸರುಗಳುಳ್ಳ ಅನೇಕ ಗೀತೆಗಳು ಹುಟ್ಟಿದವು. ಈ ಪರಿಯ ಅನುಕರ

ಣವು ಗೀತೆಯ ಲೋಕಪ್ರಿಯತೆಯನ್ನೂ ಅದರ ಮಹತ್ವವನ್ನೂ ಸ್ಪಷ್ಟ ವಾಗಿ ತೋರಿಸುವದು. ಆದರೆ ಉಪನಿಷತ್ತು ಎಂಬ ಅಡ್ಡ ಹೆಸರು ಇಟ್ಟು ಕೊಂಡಾಕ್ಷಣಕ್ಕೆ ಕಲಿಸಂತರಣೋಪನಿಷತ್ತು, ರುದ್ರಾಕ್ಷೋಪನಿಷತ್ತು ಮುಂತಾದ ಅನೇಕ ಉಪನಿಷತ್ತುಗಳು ತಮ್ಮ ಯೋಗ್ಯತೆಯಿಂದ ದಶೋಪನಿಷತ್ತುಗಳನ್ನು ಸರಿಗಟ್ಟಬಲ್ಲವೇ? ಸರ್ವಥಾ ಇಲ್ಲ. ಹಾಗೆಯೆ ಗೀತಾ ಎಂಬ ಅಭಿಧಾನವನ್ನು ಪಡೆದರೂ ಶ್ರೀಮದ್ಭಗವದ್ಗೀತೆಯ ಸಂತರ ರಚಿಸಲ್ಪಟ್ಟ ಗಣೇಶಗೀತಾ, ರಾಮಗೀತಾ ಮುಂತಾದ ಯಾವುದೇ ಗೀತೆ ಯಲ್ಲಿ ಆ ಮೂಲ ಗೀತೆಯ ಗಾಂಭೀರ್ಯವಾಗಲಿ ಮಹತ್ವವಾಗಲಿ ಒಡೆದು ಕಾಣುವದಿಲ್ಲ. ಅಥವಾ ಅಷ್ಟೇ ಏಕೆ, ಗೀತಾಗ್ರಂಥದ ಪಶ್ಚಾತ್ ಹಿಂದೂಜನರ ತತ್ವಜ್ಞಾನದ ವಾಙ್ಮಯದಲ್ಲಿ ಇದುವರೆಗೆ ಅಷ್ಟು ಆಧ್ಯಾ ತ್ಮಿಕ ತೇಜಸ್ಸುಳ್ಳ, ಅಷ್ಟು ಲೋಕಪ್ರಿಯವಾದ, ಅಷ್ಟು ಸ್ಫೂರ್ತಿಯುಕ್ತ, ಅಷ್ಟು ಅಧಿಕಾರಪೂರ್ಣವಾದ ಮತ್ತೊಂದು ಗ್ರಂಥವೇ ನಿರ್ಮಾಣವಾಗಿಲ್ಲ ವೆಂದು ಸ್ಪಷ್ಟವಾಗಿ ಹೇಳಬಹುದು. ನಕ್ಷತ್ರರಾಶಿಗಳಲ್ಲಿ ಏಕಮೇವಾ ದ್ವಿತೀಯವಾಗಿ ರಾರಾಜಿಸುವ ಚಂದ್ರಮಂಡಲದಂತೆ ಮುತ್ತುಗಳ ಮೊತ್ತ ದಲ್ಲಿ ಮಿರಿಮಿರಿ ಮಿಂಚಿ ಮೆರೆಯುವ ವಜ್ರಗೋಲಕದಂತೆ ನಮ್ಮ ಗ್ರಂಥ ರಾಶಿಗಳಲ್ಲಿ ಗೀತೆಯು ಅನ್ಯಾದೃಶವಾದ, ಅಸಮಾನವಾದ ವರ್ಚಸ್ಸಿನಿಂದ ಈಗ್ಯೂ ಬೆಳಗುತ್ತಿರುವದು.

**ಗೀತೆಯ ಮಹಾತ್ಮ್ಯದ ಕಾರಣಗಳು**–ಗೀತೆಗೆ ಈ ತರದ ಮಹತ್ವವು ಬರಲಿಕ್ಕೆ ಈ ರೀತಿ ಗೀತೆಯ ಮಹಾತ್ಮ್ಯವು ಬೆಳೆಯಲಿಕ್ಕೆ ಅಂಥ ವಿಶೇಷ ಕಾರಣಗಳೂ ಇರುವವು. ಕಾರಣವಿರದೇ ಕಾರ್ಯವಾಗದು. ಕಾರ್ಯ ಕಾರಣ ಸಂಬಂಧವಿಲ್ಲದ ಯಾವ ಸಂಗತಿಯೂ ಈ ಜಗತ್ತಿನಲ್ಲಿ ಸಂಭವಿಸ ಲಾರದು. ಆದುದರಿಂದ ವಿಮರ್ಶಿಸಿ ನೋಡಿದರೆ ನಮಗೆ ಗೀತೆಯ ಲೋಕ ಪ್ರಿಯತೆಯ ಗುಟ್ಟು ಚನ್ನಾಗಿ ತಿಳಿಯುವದು.

**ಅದು ತತ್ವಗ್ರಂಥವು**–ಗೀತೆಯು ಇಷ್ಟು ಮಹತ್ವವನ್ನು ಪಡೆಯಲಿಕ್ಕೆ ಅನೇಕ ಕಾರಣಗಳಿರುವವು. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಬರೆಯು ತ್ತೇನೆ. ಗೀತೆಯು ಸರ್ವತತ್ವಗಳನ್ನು ವಿವೇಚಿಸುವ ಗ್ರಂಥವು. ಆದರೆ ಅದು ಕೇವಲ ತರ್ಕಪ್ರಧಾನವಿಲ್ಲ. ಹಾಗೆ ಅದು ಬರಿಯ ಬುದ್ಧಿಯನ್ನು

ತೃಪ್ತಿಬಡಿಸುತ್ತಿದ್ದರೆ ಅದಕ್ಕೆ ಈಗ ಬಂದಿರುವ ಮಹತ್ವವು ಎಂದಿಗೂ ಬರುತ್ತಿರಲಿಲ್ಲ. ಗೀತೆಯು ಆಧ್ಯಾತ್ಮಿಕ ಅನುಭವದ ಗ್ರಂಥವು. ಅನುಭವಜನ್ಯ ಮತ್ತು ಅನುಭವಯುಕ್ತವಾದ ತತ್ವಜ್ಞಾನವು ಅದರಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ಅದು ಅನುಭಾವಿಗಳ ಪಠ್ಯಪುಸ್ತಕವಿರುವದು. ಕೇವಲ ಶಬ್ದಾವಡಂಬರದಿಂದ, ವಾಕ್ಚಾಪಲ್ಯದಿಂದ, ಕೇಳುವವನು ಸ್ತಿಮಿತನಾಗಬಹುದು, ನಿರ್ದೋಷವಾಗಿರುವ ತಾರ್ಕಿಕ ಕೋಟಿಕ್ರಮದಿಂದ ಜನರ ಬುದ್ಧಿಯು ಕುಂಠಿತವಾಗಬಹುದು, ಮೃದುಮಧುರ ಮುದ್ದುಮಾತುಗಳಿಂದ ಮನುಷ್ಯನ ಕೋಮಲ ಮನಸು ಕರಗಿ ನೀರಾಗಬಹುದು. ಇಷ್ಟೆಲ್ಲ ಆದರೂ ಅವನಿಗೆ ದೊರೆಯತಕ್ಕ ಶಾಂತಿಯು, ಅವನಿಗೆ ಸಿಕ್ಕತಕ್ಕ ಸಮಾಧಾನವು ಕೇವಲ ಇವುಗಳಿಂದ ಎಂದಿಗೂ ಸಾಧಿಸಲಿಕ್ಕಿಲ್ಲ. ಆ ಶಾಂತಿಯು ಸಿಗಬೇಕಾದರೆ, ಆ ಸಮಾಧಾನವು ಪ್ರಾಪ್ತವಾಗಬೇಕಾದರೆ, ಆ ಸಂತೋಷವು ಉಂಟಾಗಬೇಕಾದರೆ ಅಂತರಾತ್ಮನು ಆತ್ಮಾನುಭವದಿಂದ ಸಂತೃಪ್ತನಾಗಲಿಕ್ಕೆಬೇಕು, ಅಂತರ್ಯಾಮಿಯು ಆಂತರಿಕ ಆನಂದದಿಂದ ಲೋಲಾಡಲಿಕ್ಕೆಬೇಕು. ಆತ್ಮನು ತೃಪ್ತನಾದನೆಂದರೆ ಬುದ್ಧಿ, ಅಂತಃಕರಣ ಮುಂತಾದವುಗಳು ತಮ್ಮಿಂದ ತಾವೇ ತೃಪ್ತವಾಗಿ ಹೋಗುವವು. ಆ ಆತ್ಮನು ತೃಪ್ತನಾಗಲಿಕ್ಕೆ ಆಧ್ಯಾತ್ಮಿಕ ಅನುಭವದ ಹೊರ್ತು, ಆತ್ಯಂತಿಕ ಆನಂದಾನುಭವದ ಹೊರ್ತು ಬೇರೊಂದುಪಾಯವಿಲ್ಲ. ಗೀತೆಯು ಆ ಬಗೆಯ ಆನಂದವನ್ನು ಕೊಡುವ ಪರಿಪೂರ್ಣವಾದ ಅಧ್ಯಾತ್ಮವಿದ್ಯೆಯ ಭಾಂಡಾರವು. ಅದು ಸತ್ಯಸಾಕ್ಷಾತ್ಕಾರದ ಸವಿಯಾದ ಸೊಲ್ಲು. ಋಷಿಮುನಿಗಳು ಅನಾದಿಕಾಲದಿಂದ ಯಾವ 'ನಿಜ'ವನ್ನು ಕಂಡುಹಿಡಿದು ಅದನ್ನು ಸುಲಭ, ಸರಲ, ಸುಂದರ ಶಬ್ದಗಳಿಂದ ವ್ಯಕ್ತಮಾಡಬೇಕೆಂದಿದ್ದರೋ ಅದೇ ರೂಪುಗೊಂಡು ಗೀತಾಗ್ರಂಥವಾಗಿ ಕಂಗೊಳಿಸುತ್ತಿರುವುದು. ಅದುದರಿಂದಲೆ ದೇವತೆಗಳ ಮನಸು ಅಮೃತಕಲಶಕ್ಕೆಳಸಿದಂತೆ ನಮ್ಮ ಮನಸು ಈ ಗೀತೆಯ ಕಡೆಗೆ ಎಳಸುವದು; ಅದುದರಿಂದಲೆ ಆ ಪರಂಜ್ಯೋತಿಯನ್ನು ಪಡೆಯುವ ಪಂಥವನ್ನು ತೋರಿಸುವ ಗೀತೆಯ ಕಡೆಗೆ ನಮ್ಮ ಮನಸು ಇಷ್ಟು ಧಾವಿಸುವದು. ಅಧ್ಯಾತ್ಮಿಕ ಅನುಭವವನ್ನು ಸೂತ್ರರೂಪವಾಗಿ ಹೇಳಿ ಅಷ್ಟಕ್ಕೆ ಬಿಡದೆ

ಗೀತೆಯು ತತ್ವಜ್ಞಾನದ ಅಂಗೋಪಾಂಗಗಳನ್ನು ಉತ್ತಮವಾಗಿ ವಿವೇಚಿಸುವದು. ತತ್ವಜ್ಞಾನದ ಮುಖ್ಯ ವಿಷಯಗಳಾದ ಜೀವ, ಜಗತ್, ಈಶ್ವರ, ಇವರ ಸ್ವಭಾವ ಮತ್ತು ಸಂಬಂಧಗಳು ಪುರುಷ, ಪ್ರಕೃತಿ, ಕರ್ಮ, ತ್ರಿಗುಣ ಎಂಬವುಗಳ ವರ್ಣನೆ, ಸತ್ಯ, ಅಹಿಂಸೆ, ತ್ಯಾಗ, ದಾನ ಮುಂತಾದ ನೀತಿತತ್ವಗಳ ವಿವರಣೆ, ಬ್ರಾಹ್ಮಣ ಕ್ಷತ್ರಿಯಾದಿ ವರ್ಣಗಳ ಧರ್ಮದ ಉಲ್ಲೇಖ, ಹೀಗೆ ಎಲ್ಲ ಮಹತ್ವದ ವಿಷಯಗಳ ವಿವೇಚನೆಯು ಗೀತೆಯಲ್ಲಿ ನಿಚ್ಚಳವಾಗಿ ಮಾಡಲ್ಪಟ್ಟಿರುವುದು. ಇದಲ್ಲದೆ ಅಧ್ಯಾತ್ಮಸಾಧನೆಗೆ ಅವಶ್ಯವಾಗಿರುವ ಯೋಗಶಾಸ್ತ್ರದ ರೂಪರೇಷೆಯಾದರೂ ಗೀತೆಯಲ್ಲಿರುವುದು. ಈ ಪರಿಯಾಗಿ ಅಧ್ಯಾತ್ಮ, ಧರ್ಮ, ನೀತಿ, ಯೋಗ ಈ ನಾಲ್ಕು ಶಾಸ್ತ್ರಗಳ ಉತ್ತಮವಾದ ತಾತ್ವಿಕ ಪ್ರತಿಪಾದನವು ಗೀತಾಗ್ರಂಥದಲ್ಲಿ ಬಂದಿರುವುದು. ಅಂದಮೇಲೆ ಆ ಗ್ರಂಥವು ಇಷ್ಟೊಂದು ಸರ್ವಮಾನ್ಯವೂ ಪೂಜ್ಯವೂ ಆದುದು ಆಶ್ಚರ್ಯವೇ?

**ಅದು ಚಿಕ್ಕದು—** ಇನ್ನು ಇಷ್ಟೆಲ್ಲ ವಿಷಯಗಳನ್ನೊಳಗೊಂಡ ಗ್ರಂಥವು ಒಳ್ಳೆ ದೊಡ್ಡ ಹೊತ್ತಿಗೆಯಾಗಿರಬಹುದೆಂದು ಯಾರಾದರೂ ಕಲ್ಪಿಸಬಹುದು. ಆದರೆ ಹಾಗಿಲ್ಲ. ಯಾಕಂದರೆ ಮಹತ್ವದ ಎಲ್ಲ ತತ್ವವಿಷಯಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ಗೀತೆಯು ಎಷ್ಟು ಯಶಸ್ವಿಯಾಗಿದೆಯೋ ಅದಕ್ಕೂ ಹೆಚ್ಚು ಆ ವಿಷಯಗಳನ್ನು ಸಂಕ್ಷೇಪದಿಂದ ಸೂತ್ರೀಕರಿಸಿ ಸುಲಭವಾಗಿ ಹೇಳುವುದರಲ್ಲಿ ಅದು ಯಶಸ್ವಿಯಾಗಿರುವುದು. ಸರ್ವತತ್ವಸಂಗ್ರಹ, ಸೂತ್ರರೂಪ ಸಂಕ್ಷೇಪ, ಬಾಲರಿಗೆ ಸಹ ಬೋಧವಾಗುವಂತೆ ಸುಲಭತೆ ಇವುಗಳನ್ನು ಏಕಕಾಲಕ್ಕೆ ಒಂದೇ ಗ್ರಂಥದಲ್ಲಿ ನೋಡಬೇಕಾದರೆ ಗೀತಾಗ್ರಂಥದಲ್ಲಿಯೆ ನೋಡಬೇಕೆಂದು ನಾವು ಹೇಳಬಹುದು. ಮೇಲೆ ಕಾಣಿಸಿದ ಎಲ್ಲ ವಿಷಯಗಳು ೭೦೦ ಶ್ಲೋಕಗಳಲ್ಲಿ ಅಡಕವಾಗಿವೆ. ಸಾವಕಾಶವಾಗಿ ಓದಿದರೂ ಒಂದೇ ಪ್ರಹರದಲ್ಲಿ ಪಠಿಸಿಬಿಡುವಷ್ಟು ಈ ಗ್ರಂಥವು ಚಿಕ್ಕದಿದೆ.

**ಅದರ ಸುಲಭತೆಯು—** ಆಬಾಲವೃದ್ಧರಲ್ಲಿಯೂ ಸ್ತ್ರೀಪುರುಷರಲ್ಲಿಯೂ ಸಾರ್ವತ್ರಿಕವಾಗಿ ನೆಲೆಗೊಳ್ಳಲು ಯೋಗ್ಯವಾದ ಅದರ ಸಂದೇಶಕ್ಕೆ ಗೀತೆಯ ಸುಲಭತೆಯು ಶೋಭಿಸುವಂತಹದಿದೆ. ೭೦೦ ಶ್ಲೋಕ

ಗಳಲ್ಲಿ ಮೂರು ನಾಲ್ಕಾಂಶಕ್ಕಿಂತ ಹೆಚ್ಚು ಶ್ಲೋಕಗಳು ಅನ್ನಲಿಕ್ಕೆ ಬಹು ಸುಲಭವಾದ ಅನುಷ್ಟುಪ್ ಛಂದವೆಂಬ ಛಂದದಲ್ಲಿ ಬರೆಯಲ್ಪಟ್ಟಿವೆ. ಕ್ಲಿಷ್ಟ ಪದಗಳು ಎಲ್ಲಿಯೂ ಇಲ್ಲವೆಂದರೂ ಸಲ್ಲುವದು. ಸಂಸ್ಕೃತದ ಸ್ವಲ್ಪ ಜ್ಞಾನ ವಾದವನು ಸಹ ಗೀತೆಯ ಶಬ್ದಾರ್ಥಗಳನ್ನು ತಿಳಿದುಕೊಳ್ಳಲಿಕ್ಕೆ ಸಮರ್ಥ ನಾಗುವನೆಂಬಲ್ಲಿ ಯಾವ ಸಂಶಯವೂ ಇಲ್ಲ. ವೇದಗಳು ನಮ್ಮ ಗ್ರಂಥ ಗಳಲ್ಲಿ ಎಲ್ಲಕ್ಕೂ ಶ್ರೇಷ್ಠವಾದವುಗಳು. ಉಪನಿಷತ್ತುಗಳು ವೇದದ ಅಂತ್ಯ ಭಾಗಗಳು. ಆದರೆ ಈಗಿನ ಜನರಿಗೆ ಅವುಗಳಲ್ಲಿಯ ಭಾಷೆ, ಶಬ್ದಗಳು, ರಚನಾಶೈಲಿ, ಪರಿಭಾಷೆ ಇವು ಸ್ವಲ್ಪ ಅಪರಿಚಿತವೇ ಆಗಿರುವವು. ಆದು ದರಿಂದ ಅವು ಕಠಿನವಾಗಿ ಕಂಗೊಳಿಸುತ್ತಿರುವುವು. ಇದಲ್ಲದೆ ಕೇವಲ ಉಪನಿಷತ್ತುಗಳನ್ನು ಓದುವವನಿಗೆ ಅವು ಕೆಲವೆಡೆಗೆ ಪರಸ್ಪರವಿರೋಧಿ ಗಳಾಗಿರುವವೊ ಏನೋ ಎಂಬ ಭಾಸವು ಉಂಟಾಗುವಂತಿದೆ. ಇನ್ನು ಅವುಗಳ ಏಕವಾಕ್ಯತೆಯನ್ನು ಮಾಡಲೆತ್ನಿಸಿದ ಬ್ರಹ್ಮಸೂತ್ರಗಳು ಬಹಳೇ ಕಠಿಣವಾದವುಗಳು. ಸೂತ್ರರೂಪವಿರುವುದರಿಂದ ಭಾಷ್ಯಗಳ ಸಹಾಯ ವಿಲ್ಲದೆ ವಿದ್ವಾಂಸರಿಗೆ ಸಹ ಅವು ಬಗೆಹರಿಯುವಂತಿಲ್ಲ. ಇದಲ್ಲದೆ ತರ್ಕ ಪ್ರಧಾನವಾಗಿರುವುದರಿಂದ ಅವು ಸಾಕಷ್ಟು ಚಿತ್ತಾಕರ್ಷಕವಿಲ್ಲ. ಆದು ದರಿಂದ ಪ್ರಸ್ಥಾನತ್ರಯಿಯಲ್ಲಿ ಉಪನಿಷತ್ತುಗಳೂ ವೇದಾಂತಸೂತ್ರಗಳೂ ಎಷ್ಟೇ ಮೇಲಾದವುಗಳೂ ಮೌಲಿಕವೂ ಇದ್ದರೂ ಅವು ಸಾಮಾನ್ಯ ಜನ ರಲ್ಲಿ ಗೀತೆಯಷ್ಟು ಪ್ರಚಾರಗೊಂಡು ಲೋಕಪ್ರಿಯವಾಗುವದು ಸಾಧ್ಯ ವಾಗಲಿಲ್ಲ. ಅವು ಪಂಚಪಕ್ವಾನ್ನದಂತೆ ಕೆಲವರಿಗೆ ಪ್ರಸಂಗವಶಾತ್ ದೊರ ಕುವ ಭೋಜನವಿದ್ದಂತೆ. ಆದರೆ ಗೀತೆಯು, ಎಲ್ಲರ ಜೀವನಕ್ಕೂ ಆಧಾರ ವಾಗಿರುವ ತಾಯಿಯ ಹಾಲಿನಂತೆ ಸರ್ವರಿಗೂ ಸಾಧ್ಯವಿದ್ದು, ಅದರಷ್ಟೆ ಅಮೃತೋಪಮವೂ ಆರೋಗ್ಯಕರವೂ ಇರುವದು.

**ಅದು ಸಂವಾದರೂಪವು—** ಗೀತೆಯು ಸಂವಾದರೂಪವಾಗಿರು ವುದರಿಂದ ಅದು ಹೆಚ್ಚು ಸುಲಭವಿರಲಿಕ್ಕೆ ಅನುಕೂಲವಾಗಿದೆ. ಗೀತೆಯ ಲ್ಲಿಯ ತತ್ವಗಳನ್ನೆ ಬೇರೆ ಸೂತ್ರರೂಪವಾಗಿ ಹೇಳಿದ್ದರೆ ಅವು ಇಷ್ಟು ಸುಲಭವಾಗುತ್ತಿರಲಿಲ್ಲ. ಆದರೆ ಅವು ಪ್ರಶ್ನೋತ್ತರರೂಪವಾಗಿ ಹೇಳಲ್ಪ ಟ್ಟದ್ದರಿಂದ ವಾಚಕರ ಮನಸ್ಸು ಅಲ್ಲಲ್ಲಿ ನಿರ್ದಿಷ್ಟವಾದ ಪ್ರಶ್ನೆಗಳ ಕಡೆಗೆ

ಏಕಾಗ್ರವಾಗಿ ಆ ವಿಷಯವು ಸಂಪೂರ್ಣವಾಗಿಯೂ ಚನ್ನಾಗಿಯೂ ತಿಳಿಯುವದು. ಇನ್ನು ಸಂವಾದರೂಪವಿರುವದರಿಂದ ಗೀತೆಯಲ್ಲಿ ಪುನರುಕ್ತಿ ದೋಷವು ಸೇರಿದೆ. ಆದರೆ ವಿಷಯವು ಗಹನವಿರುವುದರಿಂದ ಅದು ದೋಷವೆನಿಸದೆ ಗುಣವೇ ಎನಿಸುವದೆಂದು ಹೇಳಬಹುದು. ಉಪನಿಷತ್ತುಗಳಲ್ಲಿ ಪ್ರಶ್ನೋಪನಿಷತ್ತು ಸಂವಾದರೂಪವಿರುವದರಿಂದ ಹೇಗೆ ಹೆಚ್ಚು ನಿಚ್ಚಳವೂ ಸ್ಪಷ್ಟವೂ ಇರುವದೋ ಹಾಗೆಯೆ ಗೀತೆಯಲ್ಲಿ ಸಂಶಯಾಸ್ಪದ ಸ್ಥಳಗಳು ಇಲ್ಲೇ ಇಲ್ಲವೆಂದರೂ ಸಲ್ಲುವದು. ಇದಲ್ಲದೆ ಅರ್ಜುನನಂಥ ಭಕ್ತನೂ ಜಿಜ್ಞಾಸುವೂ ಪ್ರಶ್ನೆಗಳನ್ನು ಕೇಳಿರುವುದರಿಂದ ಯಾವುದನ್ನೂ ಮುಚ್ಚಿಡದೆ ಶ್ರೀಕೃಷ್ಣನು ಎಲ್ಲ ತತ್ವಾರ್ಥವನ್ನು ಬಿಚ್ಚಿ ಒಡೆದು ಹೇಳಿರುವನು. ಸಂವಾದರೂಪ ವಿವೇಚನೆಯಲ್ಲಿ ಇನ್ನೊಂದು ವಿಶೇಷವೇನಂದರೆ ಅದು ಜನರಿಗೆ ಹೆಚ್ಚು ಮನೋವೇಧಕವೆನಿಸುತ್ತಿದೆ. ಯಾಕಂದರೆ ಅಲ್ಲಿ ಪ್ರಶ್ನೆಕೇಳುವವರ ಮತ್ತು ಉತ್ತರಹೇಳುವವರ ಮೂರ್ತಿಗಳು ಕಣ್ಣೆದುರಿಗೆ ನಿಲ್ಲುತ್ತಿವೆ ಮತ್ತು ಆ ಪ್ರಶ್ನೆಗಳನ್ನು ವಾಚಕರು ತಾವೇ ಕೇಳಿ ತಾವೇ ಉತ್ತರಗಳಿಗೆ ಕಿವಿಗೊಡುತ್ತಿರುವರು ಎಂಬ ಭಾವನೆಯು ಉಂಟಾಗುತ್ತಿದೆ.

**ಗೀತೆಯಲ್ಲಿಯ ಕಾವ್ಯವು**— ಗೀತೆಯು ಸರ್ವಜ್ಞಾನಸಂಪೂರ್ಣವಿರುವದು, ಅದು ಚಿಕ್ಕದಿರುವದು, ಸುಲಭವಿರುವದು ಎಂದು ಹೇಳಿದ್ದಾಯಿತು. ಇನ್ನು ಅದರಲ್ಲಿಯ ಕಾವ್ಯಸೌಂದರ್ಯವನ್ನು ನೋಡಿದರೆ ವಜ್ರಕ್ಕೆ ಚಿನ್ನದ ಒಪ್ಪಿಟ್ಟಂತೆ ಕಂಗೊಳಿಸುವದು. ಮಹಾಭಾರತ ಗ್ರಂಥವನ್ನು ರಚಿಸಿದ ವ್ಯಾಸಮುನಿಗಳ ವಾಗ್ಝರಿಯು ಗೀತೆಯಲ್ಲಿ ವಿಶೇಷ ವರ್ಚಸ್ಸಿನಿಂದ ಹರಿಯುವದೆಂದು ಹೇಳಬಹುದು. ಗೀತೆಯಲ್ಲಿಯ ಹಲಕೆಲವು ಮಹತ್ವದ ವಾಕ್ಯಗಳು ಕಾವ್ಯದ ದೃಷ್ಟಿಯಿಂದ ಬಹಳೇ ಮನೋರಮವಾಗಿರುವವೆಂದು ಎಲ್ಲ ಸಾಹಿತ್ಯ ಪ್ರೇಮಿಗಳೂ ವಿಮರ್ಶಕರೂ ಒಪ್ಪಬೇಕಾಗುವದು. ಗೀತೆಯಲ್ಲಿಯ, ವಾಸಾಂಸಿ ಜೀರ್ಣಾನಿ, ವಾಯುರ್ನಾವಮಿವಾಂಭಸಿ, ಪದ್ಮಪತ್ರಮಿವಾಂಭಸಾ, ಸಮುದ್ರಮಾಪಃ ಪ್ರವಿಶಂತಿ ಯದ್ವತ್, ಮುಂತಾದ ಉಪಮೆಗಳು ಅತ್ಯಂತ ಯಥಾರ್ಥವಿದ್ದು ಹೃದಯಂಗಮವಾಗಿವೆ. ೧೧ ನೆಯ ಅಧ್ಯಾಯದಲ್ಲಿಯ ವಿಶ್ವರೂಪದ ವರ್ಣನೆಯು ಬಹಳೇ ಗಂಭೀರವೂ ಪ್ರೌಢವೂ ಇದ್ದು ಪರಮಾತ್ಮನ ಆ ದಿವ್ಯ ಭವ್ಯ

ಸ್ವರೂಪದ ಕಲ್ಪನಾಚಿತ್ರವನ್ನು ರೇಖಿಸಿ ನಮ್ಮ ಕಣ್ಣುಮುಂದೆ ಕಟ್ಟುತ್ತಿದೆ. ಅನಿತ್ಯಂ ಅಸುಖಂ ಲೋಕಂ ಇಮಂ ಪ್ರಾಪ್ಯ ಭಜಸ್ವಮಾಮ್, ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ, ಮಚ್ಚಿತ್ತಃ ಸರ್ವ ದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ, ಮುಂತಾದ ಒಂದೊಂದೇ ಉಜ್ವ ವಚನಗಳು ವಾಚಕರ ಮನದಲ್ಲಿ ನೆಲೆಯಾಗಿ ನಿಂತು ಅವರಿಗೆ ಯಾವಾಗಲೂ ಭಕ್ತಿ ಶಕ್ತಿಸ್ಫೂರ್ತಿಗಳನ್ನು ಕೊಡುವಂತಹವು ಇರುವವೆಂಬುದನ್ನು ಎಲ್ಲರೂ ಅನುಭವದಿಂದ ತಿಳಿಯತಕ್ಕ ಸಂಗತಿಯಾಗಿದೆ. ಗೀತೆಯಂಥ ತತ್ವ ಗ್ರಂಥವು ಸಂಪೂರ್ಣ ಕಾವ್ಯಮಯವಿರುವದು ಅಶಕ್ಯವು. ಆದರೆ ಒಳ್ಳೆ ಕಲಾಕೋವಿದನು ನೇಯ್ದ ಒಂದು ಜರದ ಶುಭ್ರಬಟ್ಟೆಯು ಅಲ್ಲಲ್ಲಿ ಹೊಂಬಣ್ಣದ ಗೆರೆಗಳಿಂದ ಹೊಳೆಯುವಂತೆ ಗೀತೆಯು ಕಾವ್ಯದ ಮಿಂಚಿನಿಂದ ಅಲ್ಲಲ್ಲಿ ನಮ್ಮನ್ನು ನಿಲ್ಲಿಸಿ ಮನಸೋಲಿಸುವದು.

**ಕೃಷ್ಣಾರ್ಜುನರ ಲೋಕಪ್ರಿಯತೆ**—ಗೀತೆಯು ಇಷ್ಟು ಲೋಕಪ್ರಿಯವಾಗಲಿಕ್ಕೆ ಇನ್ನೂ ಕೆಲವು ಕಾರಣಗಳಿರುವವು. ಗೀತೆಯು ಮಹಾಭಾರತದಂಥ ಶ್ರೇಷ್ಠವಾದ ಕಥಾನಕದ ಒಂದು ಭಾಗವಾಗಿರುವುದರಿಂದಲೂ ಕೃಷ್ಣಾರ್ಜುನರು ಅದರಲ್ಲಿಯ ಪಾತ್ರಗಳಾಗಿರುವದರಿಂದಲೂ ಅದು ಜನರಿಗೆ ಹೆಚ್ಚು ರುಚಿಕಟ್ಟಾಗಿರುವುದು. ಮಹಾಭಾರತ ಗ್ರಂಥವು ಭಾರತೀಯ ಯುದ್ಧದ ಕಥೆಯು, ಹೇಳುವವರು ವ್ಯಾಸರು. ಅಂದಮೇಲೆ ಕಥೆಗೆ ಕಳೆಯೇರದೆ ಇನ್ನೇನು ಮಾಡೀತು? ಸಾಮಾನ್ಯವಾಗಿ ನಮ್ಮಲ್ಲಿ ಮಹಾಭಾರತವು ಗೊತ್ತಿಲ್ಲದ ಸ್ತ್ರೀಪುರುಷರಿಲ್ಲ, ಕೃಷ್ಣಾರ್ಜುನರ ಪರಿಚಯವಿಲ್ಲದ ಜನರಿಲ್ಲ. ಶ್ರೀಕೃಷ್ಣನು ಪರಮಾತ್ಮನ ಅವತಾರವೆಂದು ಎಲ್ಲ ಹಿಂದುಗಳೂ ಒಪ್ಪುವರು. ಇಷ್ಟೇ ಅಲ್ಲ, ಭರತಖಂಡದಲ್ಲಿ ಕೃಷ್ಣಾಷ್ಟಮಿ, ಭಾಗವತ ಗ್ರಂಥ, ರಾಧಾಕೃಷ್ಣರ ಭಕ್ತಿ ಇವು ಆಸೇತುಹಿಮಾಚಲ ಸರ್ವರಲ್ಲಿಯೂ ಸೇರಿ ಈಗ ಸಾವಿರಾರು ವರ್ಷ ಪ್ರಚಾರದಲ್ಲಿವೆ. ಶ್ರೀಕೃಷ್ಣನು ಕೋಟ್ಯಾನುಕೋಟಿ ಜನರ ಇಷ್ಟದೇವತೆಯಾಗಿದ್ದಾನೆ. ಅರ್ಜುನನು ಪರಮಭಕ್ತರಲ್ಲಿ ಒಬ್ಬನೆಂದು ಎಲ್ಲರ ಗ್ರಹಿಕೆಯಿದೆ. ಹೀಗಿರುವದರಿಂದ ಕೃಷ್ಣಾರ್ಜುನಸಂವಾದರೂಪವಾಗಿರುವ ಗೀತೆಯ ಕಡೆಗೆ ಎಲ್ಲರ ಮನಸು ಹೆಚ್ಚು ಎಳೆಯುವದು ಏನಾಶ್ಚರ್ಯವು? ಮನುಷ್ಯನಿಗೆ ಸಗುಣಭಕ್ತಿಯು

ಪ್ರಿಯವು. ನಿರ್ಗುಣನಿರಾಕಾರ ದೇವರಿಗಿಂತ, ಸಗುಣ, ಸಕ್ರಿಯ, ಸರೂಪ ದೇವರೇ ಜನರಿಗೆ ಇಷ್ಟನು. ನಮ್ಮನ್ನು ನೋಡುವ, ನಮ್ಮೊಡನಾಡುವ, ನಮ್ಮ ಸುಖದುಃಖಗಳನ್ನು ಕೇಳಿ ಅವುಗಳನ್ನು ನೀಗಿಸುವೆನೆಂದು ಹೇಳುವ ದೇವರೇ ಎಲ್ಲರಿಗೂ ಬೇಕಾಗುವನು. ಆ ದೃಷ್ಟಿಯಿಂದ ಶ್ರೀಕೃಷ್ಣನು ಸರ್ವರಿಗೂ ಪರಿಚಿತನು, ಸರ್ವರಿಗೂ ಪ್ರಿಯನು. ಆದುದರಿಂದ ಆವನು ಭಾರತೀಯ ಯುದ್ಧದಂಥ ಕಠಿನಪ್ರಸಂಗದಲ್ಲಿ ತನ್ನ ಪರಮಭಕ್ತನಾದ ಅರ್ಜುನನಿಗೆ ಹೇಳಿದ ಗೀತೆಯನ್ನು ಎಲ್ಲರೂ ವಿಶೇಷ ಪ್ರೇಮಾದರಪೂರ್ವಕವಾಗಿ ಓದುವರು, ಕೇಳುವರು, ಮನ್ನಿಸುವರು.

**ಸರ್ವರಿಗೂ ಉಪಯುಕ್ತವು—** ಗೀತಾಗ್ರಂಥವು ಇನ್ನೊಂದು ದೃಷ್ಟಿಯಿಂದ ಬಹಳೇ ಮಹತ್ವದ್ದಿರುವದು. ಸ್ತ್ರೀಶೂದ್ರರು 'ಶ್ರುತಿಬಾಹ್ಯ' ರಿರುವದರಿಂದ ವೇದೋಪನಿಷತ್ತುಗಳನ್ನಾಗಲಿ ಬ್ರಹ್ಮಸೂತ್ರಗಳನ್ನಾಗಲಿ ಓದಕೂಡದು, ಕೇಳಕೂಡದು, ಅಭ್ಯಸಿಸಕೂಡದು ಎಂದು ಧರ್ಮಶಾಸ್ತ್ರಕಾರರು ಹೇಳುವರು. ಈ ನಿರ್ಬಂಧವು ವೇದೋಪನಿಷತ್ತುಗಳ ಕಾಲದಲ್ಲಿರಲಿಲ್ಲವೆಂಬುದು ಸ್ಪಷ್ಟವಿದೆ. ಈ ಪರಂಪರೆಯು, ಈ ಪ್ರಬಂಧವು, ಹೇಗೆ ಮತ್ತು ಯಾವ ಕಾಲಕ್ಕೆ, ಯಾವ ಕಾರಣದಿಂದ ಪ್ರಾರಂಭವಾಯಿತೆಂಬದು ಬೇರೆ ವಿಷಯವು. ಸ್ವತಂತ್ರ ವಿಚಾರಿಗಳು ಈ ಕಟ್ಟನ್ನು ಬಪ್ಪದಿದ್ದರೂ ಆಧುನಿಕ ಸುಶಿಕ್ಷಿತರು ಇದು ಅನ್ಯಾಯವೆಂದು ನಾರುತ್ತಿದ್ದರೂ ಈ ಪರಂಪರೆಯು ಬಹಳ ಪುರಾತನಕಾಲದಿಂದ ನಡೆಯುತ್ತ ಬಂದಿರುವದೆಂಬುದು ನಿರ್ವಿವಾದವು. ಆದುದರಿಂದ ಆ ಗ್ರಂಥಗಳು ಈಗ ಆ ಜನರ ಅಭ್ಯಾಸಕ್ಕೆ ಅನುಪಯುಕ್ತವಾಗಿವೆ ಎಂದು ಹೇಳಬಹುದು. ಆದರೆ ಗೀತೆಯ ಸಂಗತಿಯು ಹಾಗಿಲ್ಲ. ಗೀತೆಯು ಮಹಾಭಾರತವೆಂಬ ಪುರಾಣದ ಭಾಗವು; ಶ್ರುತಿಬಾಹ್ಯವಿದ್ದವರ ಸಲುವಾಗಿಯೆ, ಅವರ ಉದ್ಧಾರಾರ್ಥವಾಗಿಯೆ ಮಹಾಭಾರತವೆಂಬ 'ಪಂಚಮವೇದ'ದ ಅವತಾರವಾಗಿರುವುದು. ಆದುದರಿಂದ ಅದರ ಅಭ್ಯಾಸ ಮಾಡಲಿಕ್ಕೂ ತದಂತರ್ಗತವಾದ ಗೀತೆಯ ಅಭ್ಯಾಸ ಮಾಡಲಿಕ್ಕೂ ಸ್ತ್ರೀಶೂದ್ರರಿಗೆ ಯಾವ ನಿರ್ಬಂಧವೂ ಇಲ್ಲ. ವೇದಾದಿಗಳು ಸಾಮಾನ್ಯರಿಗ ಅಗಮ್ಯವಿದ್ದರೂ ಅವುಗಳಲ್ಲಿಯ ತಿರುಳುತಿಳಿದ ಋಷಿಮುನಿಗಳು ಅದನ್ನು ಎಲ್ಲರಿಗೂ ತಿಳಿಸಲಿಕ್ಕೆಂದು ಕಾಲ

ಕಾಲಕ್ಕೆ ಅನೇಕ ಉಪಾಯಗಳನ್ನು ಯೋಜಿಸಿರುವರು. ಮಹಾಭಾರತವು ಅಂಥ ಉಪಾಯಗಳಲ್ಲಿ ಒಂದು ಮಹಾ ಉಪಾಯವು. ಹೀಗೆ ಬೇರೆ ಗ್ರಂಥಗಳನ್ನು ಬರೆಯುವಾಗ ಲೇಖಕರು ಎರಡು ರೀತಿ ಎಚ್ಚರ ಪಡುತ್ತಿದ್ದರು. ಅವರು ಮೂಲ ವೇದದಲ್ಲಿಯ ಎಲ್ಲ ತತ್ವವನ್ನು ಆಯಾ ದೇಶ ಕಾಲಕ್ಕೆ ಯೋಗ್ಯವಾಗುವಂತೆ ಹೇಳುತ್ತಿದ್ದರು ಮತ್ತು ಅದು ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ವಿವೇಚಿಸುತ್ತಿದ್ದರು. ವ್ಯಾಸಮುನಿಗಳು ಮಹಾಭಾರತವನ್ನು ಈ ಎರಡು ವಿಚಾರಗಳನ್ನು ಮುಂದಿಟ್ಟುಕೊಂಡು ಬರೆದಿರುವರೆಂಬುದು ನಿರ್ವಿವಾದವು. ಆದುದರಿಂದಲೆ ಮಹಾಭಾರತವು ಪಂಚಮ ವೇದವೆಂದೂ, ಮಹಾಭಾರತದಲ್ಲಿಲ್ಲದ್ದು ಜಗತ್ತಿನಲ್ಲಿಯೆ ಇಲ್ಲವೆಂದೂ ಈಗ ಅನ್ನುವ ಪರಿಪಾಠವು ಬಿದ್ದಿದೆ. ಈ ರೀತಿ ಗೀತೆಯು ಸಾಮಾನ್ಯರ ಉದ್ಧಾರಕ್ಕಾಗಿ ಬರೆಯಲ್ಪಟ್ಟ ಗ್ರಂಥವು ಎಲ್ಲರಿಗೂ ತಿಳಿಯಬೇಕು, ಎಲ್ಲರೂ ಅಧ್ಯಾತ್ಮವಿದ್ಯೆಯ ಅಭ್ಯಾಸ ಮಾಡಬೇಕು, ಎಲ್ಲರಿಗೂ ಅತ್ಯುಚ್ಚ ಧ್ಯೇಯದ ದರ್ಶನವಾಗಬೇಕು, ಎಲ್ಲರೂ ಪರಮಶಾಂತಿಯ ಸವಿಗಾಣಬೇಕು ಎಂದು ವ್ಯಾಸಮುನಿಗಳು ಮಾಡಿದ ಪ್ರಯತ್ನವು. ವ್ಯಾಸರು ಶ್ರೀಕೃಷ್ಣಾರ್ಜುನರ ಸಂವಾದವನ್ನು ಸುಲಭ ಸಂಸ್ಕೃತದಲ್ಲಿ ರೂಪುಗೊಳಿಸಿದ್ದು ಇದೇ ಸದುದ್ದೇಶದಿಂದ, ಇದೇ ಪರೋಪಕಾರ ಬುದ್ಧಿಯಿಂದ.

**ಮಹತ್ವವು ವ್ಯಕ್ತಿಗಳನ್ನವಲಂಬಿಸಿಲ್ಲ—** ಇನ್ನು ಗೀತಾಗ್ರಂಥವು ಪರಮಾತ್ಮನ ಅವತಾರವಾದ ಭಗವಾನ್ ಶ್ರೀಕೃಷ್ಣನಿಂದ ಹೇಳಲ್ಪಟ್ಟಿರುವುದರಿಂದಲೇ ಇಷ್ಟು ಮಹತ್ವವನ್ನು ಪಡೆದಿದೆ ಎಂದು ಕೆಲವರು ಅನ್ನಬಹುದು. ಗೀತೆಯು ಶ್ರೀಕೃಷ್ಣೋಕ್ತಿಯಿರುವದರಿಂದ ಹಿಂದುಗಳಲ್ಲಿ ಅದು ಸ್ವಲ್ಪ ಹೆಚ್ಚು ಮಹತ್ವವನ್ನು ಹೊಂದಿದೆ ಎಂಬ ಮಾತು ನಿಜವಿದ್ದರೂ ಆ ಮಾತ್ರದಿಂದಲೆ ಆ ಗ್ರಂಥವು ಇಷ್ಟೊಂದು ಮಾನ್ಯತೆಯನ್ನು ಹೊಂದಿಲ್ಲವೆಂಬುದನ್ನು ಎಲ್ಲರೂ ಲಕ್ಷದಲ್ಲಿಡತಕ್ಕದ್ದು. ಭಾರತೀಯರ ಧರ್ಮವು ಅಥವಾ ಅವರ ಗ್ರಂಥಗಳು ವ್ಯಕ್ತಿಗಳಿಗೆ ವಿಶೇಷ ಮಹತ್ವವನ್ನು ಕೊಡುವದಿಲ್ಲ. ನಮ್ಮ ಧರ್ಮದಲ್ಲಿ ತತ್ವಕ್ಕೆ, ಅನುಭೂತಿಗೆ ಹೆಚ್ಚು ಮಹತ್ವವು. ವೇದೋಪನಿಷತ್ತುಗಳನ್ನು ಬರೆದವರ ಹೆಸರುಗಳು ಸಹ ಯಾರಿಗೂ ಗೊತ್ತಿರದಿದ್ದರೂ ಅವುಗಳಲ್ಲಿ ಪ್ರತಿಪಾದಿಸಿದ ತತ್ವಗಳ ಮೂಲಕ ಅವು

ನಮ್ಮ ಧರ್ಮದ ಅತ್ಯಂತ ಶ್ರೇಷ್ಠವಾದ ಆಧಾರಗ್ರಂಥಗಳಾಗಿ ಕುಳಿತಿವೆ. ಅದೇ ರೀತಿಯಲ್ಲಿ ಗೀತೆಯು ಸಹ ತನ್ನ ತತ್ವಗಳ ಸ್ವಯಂಪ್ರಕಾಶದಿಂದ ಭಾರತದಲ್ಲಿ ಬೆಳಗುತ್ತಿರುವದು. ಅದನ್ನು ಹೇಳಿದವನು ಶ್ರೀಕೃಷ್ಣನು, ಬರೆದವರು ವ್ಯಾಸಮುನಿಗಳು ಇರುವುದರಿಂದ ಅದಕ್ಕೆ ವಿಶೇಷ ಶೋಭೆ ಯುಂಟಾಗಿದೆ. ಆದರೆ ಅವರು ಬರೆದರೆಂದು ಆ ಗ್ರಂಥವು ದೊಡ್ಡದಲ್ಲ. ಆ ಗ್ರಂಥವು ಸ್ವಯಂ ತಾನೇ ಮಹಾಶ್ರೇಷ್ಠವಿರುವುದು. ಹೀಗಿರುವುದ ರಿಂದ ಅವತಾರವಾದದಲ್ಲಿ ವಿಶ್ವಾಸವಿಲ್ಲದವರು, ಭಾರತೀಯರಲ್ಲದವರು, ಹಿಂದೂಧರ್ಮವನ್ನು ಹಿಯಾಳಿಸುವವರು ಸಹ ಗೀತೆಯ ಮಹತ್ವವನ್ನು ವರ್ಣಿಸುವರು. ಶ್ರೀಕೃಷ್ಣನು ಅವತಾರನೆಂದು ಎಣಿಸದಿದ್ದರೂ ಅವ ನೊರ್ವ ಮಹಾಯೋಗಿಯೆಂದು ಎಣಿಸಿ ಪರಧರ್ಮದವರು ಗೀತೆಯನ್ನು ಓದುವರು. ಗೀತಾ ಗ್ರಂಥವು ನಮ್ಮ ಭರತಖಂಡದಲ್ಲಿ ಹುಟ್ಟಿದ್ದಾದರೂ ಸಧ್ಯಕ್ಕೆ ಅದರ ಪ್ರಚಾರವು ಸುಧಾರಿಸಿದ ಎಲ್ಲ ರಾಷ್ಟ್ರಗಳಲ್ಲಿಯೂ ಆಗಿರು ವದು. ಇಂಗ್ಲೀಷ, ಫ್ರೆಂಚ, ಜರ್ಮನ್, ರಶಿಯನ್, ಇಟಾಲಿಯನ್, ಗ್ರೀಕ, ಪರ್ಶಿಯನ್, ಮುಂತಾದ ಎಲ್ಲ ಉತ್ತಮೋತ್ತಮ ಭಾಷೆಗಳ ಲ್ಲಿಯೂ ಅದರ ಭಾಷಾಂತರಗಳಾಗಿರುವವು. ಈ ಲೋಕದ ಎಲ್ಲ ವಿದ್ವಾಂ ಸರು ಒಂದು ಬಗೆಯಿಂದಿಲ್ಲ ಒಂದು ಬಗೆಯಿಂದ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಗೀತಾಗ್ರಂಥದ ಗಹನ ವಿಚಾರದೊಂದಿಗೆ ಪರಿಚಿತರಾಗಿ ರುವರು. ಸೃಷ್ಟಿಯ ಗೂಢ ಪ್ರಶ್ನೆಗಳನ್ನು ಬಿಡಿಸಲಿಕ್ಕೆ ಗೀತೆಯ ಉಪ ಯೋಗವು ಎಲ್ಲ ಸಾಧಕ ಶ್ರೇಷ್ಠರಿಗೂ ಆಗುತ್ತಿರುವುದು. ಇದನ್ನೆಲ್ಲ ನೋಡಿದರೆ ಗೀತೆಯು ಭಗವಂತನಿಂದ ಹೇಳಲ್ಪಟ್ಟದ್ದರಿಂದ ಮಹತ್ವವನ್ನು ಪಡೆದಿದೆ, ಎಂಬ ವಿಧಾನವು ಅಷ್ಟೊಂದು ನಿಜವಲ್ಲೆಂದು ಕಂಡುಬರುವದು. ಅದು ಕೇವಲ ಹಿಂದೀಯರ ಗ್ರಂಥವಲ್ಲ. ಅದು ಬರಿಯ ಭಾರತೀಯರಿ ಗಾಗಿ ಹೇಳಿದ ಉಪದೇಶವಲ್ಲ. ಇಡೀ ಮಾನವ ಜಾತಿಗೆ ಮಾಡಿದ ಉಪ ದೇಶವದು. ಇಡೀ ಮಾನವೀ ಕುಟುಂಬಕ್ಕೆ ಸಾಮಾನ್ಯವಾಗುವಂಥ ಒಂದು ಧರ್ಮಪುಸ್ತಕವನ್ನು ನೇಮಿಸಬೇಕಾಗಿದ್ದರೆ ಗೀತೆಯೇ ಅಂಥ ಉತ್ತಮ ವಾದ ಗ್ರಂಥವು. ಅರ್ಜುನನೆಂಬ ವ್ಯಕ್ತಿಯನ್ನುದ್ದೇಶಿಸಿ ಗೀತೆಗೆ ಪ್ರಾರಂಭ ವಾಗಿದ್ದರೂ ಮುಂದೆ ಜಾತಿ, ವಂಶ, ದೇಶ, ಕಾಲ ಮುಂತಾದವುಗಳ

ಮೇರೆ ಮೀರಿ ಅಖಿಲ ಮಾನವರನ್ನು ವ್ಯಾಪಿಸುವಂತೆ ಗೀತಾಮೃತದ ನಿರ್ಮಲ ನಿರ್ಝರವು ಅತ್ಯುಚ್ಚ ಆಧ್ಯಾತ್ಮಿಕ ಅನುಭವಶಿಖರದಿಂದ ಹೊರಟು ಈ ಲೋಕದಲ್ಲಿ ಹರಿಯುತ್ತಿರುವುದು. ಆದುದರಿಂದ 'ಮಾನವೀಯ ಧರ್ಮ' ಅಥವಾ 'ವಿಶ್ವಧರ್ಮ'ದ ವಿಚಾರಮಾಡುವವರು ಈ ಗ್ರಂಥವನ್ನು ಪರಿಶೀಲಿಸುವದು ಅತ್ಯಗತ್ಯವಿರುವದು.

**ಗೀತೆಯ ಸಂಕಲ್ಪವು—** ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿರುವ ಸಂಕಲ್ಪವನ್ನು ನೋಡಿದರೆ ಗೀತೆಯ ಮಹತ್ವವು ನಮಗೆ ಮತ್ತಿಷ್ಟು ಹೊಳೆಯುವದು. ಈ ಸಂಕಲ್ಪವು ಮಹಾಭಾರತದಲ್ಲಿಲ್ಲ ಮತ್ತು ಅಲ್ಲಿ ಇರುವ ಕಾರಣವೂ ಇಲ್ಲ. ಅಲ್ಲಿ ಗೀತೆಯು ಪ್ರತ್ಯೇಕ ಗ್ರಂಥವೆಂದು ಹೇಳಲ್ಪಟ್ಟಿಲ್ಲ. ಆದರೆ ಗೀತೆಯ ಮಹತ್ವವನ್ನು ತಿಳಿದು ಅದನ್ನು ಮಹಾಭಾರತದಿಂದೆತ್ತಿ ಸಮಾಜದಲ್ಲಿ ಪ್ರಚಾರಗೊಳಿಸಿದ ಮುನಿಗಳು ಆ ಸಂಕಲ್ಪವನ್ನು ಹಾಕಿರಲಿಕ್ಕೆ ಸಾಕು. ಅದು ಬಹಳೇ ಪುರಾತನವಿರಲಿಕ್ಕೆ ಬೇಕೆಂದು ತೋರುವದು, ಯಾಕಂದರೆ ಅದು ಗೀತೆಯ ಎಲ್ಲಕ್ಕೂ ಹಳೆಯ ಪ್ರತಿಗಳಲ್ಲಿ ಕೂಡ ಇರುವದು. ಆ ಸಂಕಲ್ಪದಲ್ಲಿ 'ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ............' ಎಂಬ ಶಬ್ದಗಳಿರುವವು. ಗೀತೆಯನ್ನು ಸಾಕ್ಷಾತ್ ಭಗವಂತನು ಉಪದೇಶಿಸಿದನು, ಅದೂ ಒಂದು ಉಪನಿಷತ್ತು ಇರುವದು, ಬ್ರಹ್ಮವಿದ್ಯೆಯೇ ಅದರಲ್ಲಿಯ ವಿಷಯವಿರುವದು; ಅದು ಪರಮಾತ್ಮನನ್ನು ಹೇಗೆ ಪಡೆಯಬೇಕು, ಶ್ರೇಷ್ಠವಾದ ಆಧ್ಯಾತ್ಮಿಕ ಉನ್ನತಿಯನ್ನು ಹೇಗೆ ಮಾಡಿಕೊಳ್ಳಬೇಕು, ಎಂಬುದನ್ನು ಹೇಳುವ ಶಾಸ್ತ್ರಗ್ರಂಥವಿರುವದು, ಎಂದು ಆ ಸಂಕಲ್ಪದ ಅರ್ಥವಿರುವದು. ಮೊದಲು ಯೋಗಶಾಸ್ತ್ರವೆಂಬುದೆ, ಆಧ್ಯಾತ್ಮಿಕ ಧ್ಯೇಯಸಾಧನೆಯ ಮಾರ್ಗವೆಂಬುದೆ ಹೆಚ್ಚಿನದು. ಬ್ರಹ್ಮಜ್ಞಾನ ಪ್ರತಿಪಾದನಪೂರ್ವಕವಾಗಿ ಹೇಳಿದ ಅಂಥ ಯೋಗವು ಇನ್ನೂ ಹೆಚ್ಚಿನದು, ಉಪನಿಷತ್ ಅಂದರೆ ಮೋಕ್ಷಶಾಸ್ತ್ರವೆಂಬ ಹೆಸರನ್ನು ಪಡೆದ ಗ್ರಂಥದಲ್ಲಿ ಅದು ಹೇಳಲ್ಪಟ್ಟದ್ದರಂತೂ ಅದಕ್ಕೆ ಬೆಲೆಯೇ ಇಲ್ಲ. ಅಂತಹದನ್ನು ಸ್ವತಃ ಭಗವಂತನ ಬಾಯಿಂದ ಕೇಳುವದೆಂದಮೇಲೆ ಅದಕ್ಕಿನ್ನೇನನ್ನಬೇಕು, ಅದರ ವರ್ಣನೆಯನ್ನು ಇನ್ನಾವ ಶಬ್ದಗಳಿಂದ ಮಾಡಬೇಕು ? ಗೀತೆಯು ಈ ತರಹದ

ಗ್ರಂಥವು, ಉಪನಿಷತ್ತುಗಳಷ್ಟೇ ಯೋಗ್ಯತೆಯುಳ್ಳ ದಿವ್ಯ ಉಪದೇಶಾಮೃತದ ವಾಗ್ಝರಿಯು, ಅಮೃತಾನುಭವದ ಸುವರ್ಣಕಲಶವು.

**ಗೀತಾಭ್ಯಾಸದ ಮಹತ್ವವು**— ಹೀಗೆ ಅನೇಕ ಕಾರಣಗಳ ಮೂಲಕ ಗೀತೆಯು ಅತ್ಯಂತ ಮಹತ್ವದ ಗ್ರಂಥವಿರುವದು. ಅನೇಕ ಕಾರಣಗಳ ಮೂಲಕ ಅದು ಹೆಚ್ಚಿನ ಮಹಾತ್ಮ್ಯವನ್ನು ಪಡೆದಿರುವದು. ಆದರೆ ನಾನು ನನ್ನ ಶಬ್ದಗಳಿಂದ ಎಷ್ಟೇ ಬಣ್ಣಿಸಿದರೂ ಸಾಲದು. ಯಾಕಂದರೆ ಇಂಥ ಗ್ರಂಥಗಳ ನಿಜವಾದ ಮಹತ್ವವು ಅವುಗಳನ್ನು ಓದುವದರಿಂದಲೆ, ಅವುಗಳ ಮನನದಿಂದಲೆ, ಅವುಗಳ ನಿದಿಧ್ಯಾಸದಿಂದಲೆ ತಿಳಿಯುವದು. ನನ್ನಂಥವನು ಮಾಡಿದ ವರ್ಣನೆಗಳು ಕೇವಲ ಹಾದಿ ತೋರಿಸುವ ಕೈಬೆರಳುಗಳು ಅಥವಾ ನಿದರ್ಶಕ ಚಿನ್ಹಗಳು. ಗೀತೆಯ ಮಹತ್ವವನ್ನು ಹೊರಗಣ ಯಾವುದೆ ಅಳತೆಯಿಂದ ಅಳೆಯಲಿಕ್ಕೆ ಬಾರದು. ಆಂತರಿಕ ಶಾಂತಿ, ಆನಂದ, ಇವುಗಳ ಅನುಭವದಿಂದಲೆ ಆ ಮಹತ್ವವನ್ನು ನಾವು ಅಳೆಯಬಹುದಲ್ಲದೆ ಇನ್ನೊಂದು ಮಾರ್ಗವಿಲ್ಲ. ಆದುದರಿಂದ ಸ್ವತಂತ್ರ ಮತ್ತು ಸ್ವಾವಲಂಬಿಯಾದ ಸ್ವಾನಂದ ಸಾಮ್ರಾಜ್ಯದಲ್ಲಿ ಸಮ್ರಾಟರಂತೆ ವಿರಾಜಿಸುವ ಇಚ್ಛೆ ಇದ್ದರೆ ಈ ಗೀತಾಗ್ರಂಥದ ಮಹತ್ವವನ್ನೂ ಮಹಾತ್ಮ್ಯವನ್ನೂ ಕಂಡುಹಿಡಿದು ಅದರಲ್ಲಿಯ ತಿರುಳು ತಿಳುಕೊಂಡು ಅದರ ಗುಟ್ಟನ್ನು ಗುರುತಿಸಿ ಜಿಜ್ಞಾಸುಗಳು ಆಧ್ಯಾತ್ಮಿಕ ಸಾಧನದಲ್ಲಿ ನಿಮಗ್ನರಾಗಬೇಕು, ಸ್ಥಿತಪ್ರಜ್ಞರಾಗಬೇಕು. ಅಂದರೆ ಗೀತೆಯ ನಿಜವಾದ ಮಹತ್ವವು ತಿಳಿಯುವದು, ಅದರ ನಿಜವಾದ ಗುರುತ್ವವು ಗೋಚರವಾಗುವದು.

---

## ೨. ಗೀತೆಯೂ ಸದ್ಯಸ್ಥಿತಿಯೂ.

---

**ಸೂಚನೆ**— ಹೋದ ಪ್ರಕರಣದಲ್ಲಿ ಗೀತೆಯ ಮಹತ್ವವು ಎಷ್ಟಿರುವದು, ಅದರ ಮಹಾತ್ಮ್ಯವು ಬೆಳೆಯಲಿಕ್ಕೆ, ಅದು ಇಷ್ಟೊಂದು ಲೋಕಪ್ರಿಯವಾಗಲಿಕ್ಕೆ ಕಾರಣಗಳೇನು ಎಂಬ ವಿಷಯವನ್ನು ಹೇಳಿದ್ದಾಯಿತು.

ಇನ್ನು ಈ ಪ್ರಕರಣದಲ್ಲಿ ಸದ್ಯಕ್ಕೆ ನಮ್ಮ ಧರ್ಮದ ಮತ್ತು ರಾಷ್ಟ್ರದ ಸ್ಥಿತಿಯು ಏನಿರುವದು, ಗೀತೆಯ ಅಭ್ಯಾಸವು ಇಂಥ ಪ್ರಸಂಗದಲ್ಲಿ ಎಷ್ಟು ಅವಶ್ಯವು, ಜೀವನದಾಯಿಯು ಎಂಬದನ್ನು ಹೇಳಬೇಕಾಗಿದೆ.

**ಸದ್ಯಸ್ಥಿತಿಯು**— ಸದ್ಯಕ್ಕೆ ಹಿಂದುಸ್ಥಾನದೇಶದ ಆಧ್ಯಾತ್ಮಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಮುಂತಾದ ಯಾವದೇ ಪರಿಸ್ಥಿತಿಯ ಕಡೆಗೆ ನೋಡಿದರೂ ಅದು ಅತ್ಯಂತ ಶೋಚನೀಯವೂ ಕರುಣಾಸ್ಪದವೂ ಇರುವದು. ಇಂಥ ದೊಡ್ಡ ದೇಶವು, ಇಂಥ ಮಹಾರಾಷ್ಟ್ರವು, ಇಂಥ ವಿಶಾಲವಾದ ನಾಡು, ಈ ಸ್ಥಿತಿಗೆ ಹೇಗೆ ಇಳಿಯಿತು ಇದೊಂದು ದೊಡ್ಡ ಒಗಟೇ ಸೈ. ಇನ್ನು ಆಫ್ರಿಕದಂತೆ ಇದಾದರೂ ಕಾಡು ಜನರ ದೇಶವಾಗಿದ್ದರೆ ಮಾತು ಬೇರೆ. ಹಾಗಿರದೆ ಈ ದೇಶವು ಸರ್ವವಿಷಯಗಳಲ್ಲಿಯೂ ಸುಸಂಸ್ಕೃತವಾದದ್ದು, ವೈಭವಶಿಖರದ ಮೇಲೆ ನಲಿದಾಡಿ ಮೆರೆದದ್ದು; ಇಂಥ ರಾಷ್ಟ್ರಕ್ಕೆ ಈ ದುರ್ಗತಿಯೆಂದರೆ ಮಹದಾಶ್ಚರ್ಯವು. ಇತಿಹಾಸ ಬರೆಯುವವರು, ಇತಿಹಾಸ ವಿಮರ್ಶಕರು ಈ ವಿಷಯವನ್ನು ಚನ್ನಾಗಿ ವಿಚಾರಿಸಿ ಕಾರ್ಯಕಾರಣ ಸಂಬಂಧವನ್ನು ಹಚ್ಚಿ ಜನರೆದುರಿಗೆ ಇಡುವದು ಅತ್ಯವಶ್ಯವಿದೆ. ಯಾಕಂದರೆ ವ್ಯಕ್ತಿಯಾಗಲಿ ರಾಷ್ಟ್ರವಾಗಲಿ ಪ್ರಗತಿಹೊಂದಬೇಕಾದರೆ ತನ್ನ ಭೂತಕಾಲ, ವರ್ತಮಾನಕಾಲ, ಮತ್ತು ತನ್ನ ಭವಿಷ್ಯತ್ಕಾಲದ ಧ್ಯೇಯ ಇವುಗಳನ್ನೂ ಅವುಗಳಲ್ಲಿಯ ಪರಸ್ಪರ ಸಂಬಂಧವನ್ನೂ ಚನ್ನಾಗಿ ಅರಿತಿರಲಿಕ್ಕೆ ಬೇಕು. ಅಂದರೆ ತನ್ನ ಕರ್ತವ್ಯವು ತಿಳಿದು ಪ್ರಯತ್ನಕ್ಕೆ ಆಸ್ಪದವಾಗುವದು. ಮನುಷ್ಯನು ಯಶಸ್ವಿಯಾಗಲಿಕ್ಕೆ, ಮುಂದೆ ಬರಲಿಕ್ಕೆ ಈ ಬಗೆಯ ಆತ್ಮಜ್ಞಾನವು ಆವಶ್ಯವು.

**ಆಧ್ಯಾತ್ಮಿಕ ಸ್ಥಿತಿಯು**— ಹಿಂದುಸ್ಥಾನದಲ್ಲಿಯ ಜನರ ಸದ್ಯದ ಆಧ್ಯಾತ್ಮಿಕ ಅವಸ್ಥೆಯನ್ನು ನೋಡಿದರೆ ವಿಚಾರವಂತರಿಗೆ, ಶುದ್ಧಾಂತಃಕರಣಿಗಳಿಗೆ, ಅಭಿಮಾನಿಗಳಿಗೆ ಕನಿಕರ ಹುಟ್ಟಿ ಕಣ್ಣೀರು ಬರದೆ ಇರಲಾರವು. ಯಾವ ರಾಷ್ಟ್ರದಲ್ಲಿ ಉಪನಿಷತ್ಕಾರರು ಹುಟ್ಟಿ ಆಧ್ಯಾತ್ಮಿಕ ಅನುಭವದ ಅಮೃತವನ್ನು ತಮ್ಮ ದಿವ್ಯ ವಾಣಿಯಿಂದ ಜನರಿಗೆ ಉಣಿಸಿದರೋ ಅಲ್ಲಿ ಈಗ ಅವುಗಳನ್ನು ತಿಳಿದುಕೊಳ್ಳುವವರು ಸಾವಿರಕ್ಕೊಬ್ಬರು, ಲಕ್ಷ

ಕೊಟ್ಟರು. ಉದ್ದಾಲಕ ಆರುಣಿಯಂಥ, ಯಾಜ್ಞವಲ್ಕ್ಯರಂಥ ತೇಜಸ್ವಿಯಾದ ಬ್ರಾಹ್ಮಣರು ಆಧ್ಯಾತ್ಮಿಕ ವಿಷಯದಲ್ಲಿ ಎಲ್ಲರಿಗಿಂತಲೂ ಮುಂದೆ ಹೋದವರಾದುದರಿಂದ ವಾದವಿವಾದದಲ್ಲಿ ಅನುಭವಜನ್ಯ ಆತ್ಮವಿಶ್ವಾಸದ ವಚನಗಳಿಂದ ಎಲ್ಲರ ಬಾಯಿಕಟ್ಟುತ್ತಿದ್ದರು; ಒಮ್ಮೆ ಸವಿನುಡಿಗಳಿಂದ ಇನ್ನೊಮ್ಮೆ ತಿಳಿಮಾತಿನಿಂದ ಮತ್ತೊಮ್ಮೆ ಕಾವ್ಯದ ಸೊಬಗುಳ್ಳ ಸುಂದರ ಉಪಮೆಗಳಿಂದ ಆಧ್ಯಾತ್ಮವನ್ನು ವಿವೇಚಿಸುತ್ತಿದ್ದರು. ಅವರು ಸ್ಫೂರ್ತಿಗೊಂಡು ಬರೆದಿಟ್ಟ ಉಕ್ತಿಗಳೇ ಆಧ್ಯಾತ್ಮಿಕ ತತ್ವಜ್ಞಾನದಲ್ಲಿ ಈಗ ಆದರ್ಶಭೂತವಾಗಿ ಸರ್ವಲೋಕಕ್ಕೂ ಮಾನ್ಯವಾಗಿವೆ. ಜನಕ, ಅಜಾತಶತ್ರು ಮುಂತಾದ ಕ್ಷತ್ರಿಯಕುಲೋದ್ಭವರು ಬ್ರಾಹ್ಮಣರಷ್ಟೇ ಅಧ್ಯಾತ್ಮದಲ್ಲಿ ಮುಂದುವರಿದವರಿದ್ದರು. ಅಧ್ಯಾತ್ಮದ ಗುತ್ತಿಗೆಯು ಬ್ರಾಹ್ಮಣರಿಗಷ್ಟೇ ಕೊಟ್ಟದೆ ಎಂಬ ಮೂರ್ಖ ಕಲ್ಪನೆಯು ಆಗ ರೂಢವಿರಲಿಲ್ಲ. ಇಷ್ಟೇ ಅಲ್ಲ. ಜೈವಲಿ, ಗಾರ್ಗ್ಯಾಯನಿಯಂಥ ಕ್ಷತ್ರಿಯರೇ ಗುರುಗಳಾಗಿ ಎಷ್ಟೋ ಸಾರಿ ಬ್ರಾಹ್ಮಣರಿಗೆ ಬ್ರಹ್ಮವಿದ್ಯೆಯ ದೀಕ್ಷೆಯನ್ನು ಕೊಟ್ಟಿದ್ದಾರೆಂಬದು ಒಳ್ಳೇ ಮಹತ್ವದ ಸಂಗತಿಯು. ತನ್ನ ಹುರುಕು ಕೆರೆಯುತ್ತ ಕುಳಿತಿರುವ ರೈಕ್ವನಂಥ ಬಂಡೀ ಹೊಡೆಯುವವನಲ್ಲಿ ಕೂಡ ಅಧ್ಯಾತ್ಮವಿದ್ಯೆಯ ವಿಕಾಸವು ಶಕ್ಯವೆಂಬದು ಕಂಡುಬರುವಂತಿದೆ. ಮೈತ್ರೇಯಿ, ವೀರಕನ್ಯೆ ಗಾರ್ಗಿ ಮುಂತಾದ ಆ ಕಾಲದ ಸ್ತ್ರೀಯರ ಆಧ್ಯಾತ್ಮಿಕ ಜಿಜ್ಞಾಸೆಯನ್ನು ನೋಡಿದರೆ ಆಶ್ಚರ್ಯವಾಗುವಂತಿದೆ. ಈಗಿನಂತೆ ಅವರು ಅದನ್ನು ಓದಬಾರದು ಇದನ್ನು ಓದಬಾರದೆಂಬ ನಿರ್ಬಂಧವು ಆಗ ಇದ್ದಂತೆ ತೋರಲಿಲ್ಲ. ಭೃಗು, ಶ್ವೇತಕೇತು, ಆರು ವರುಷದ ಮಗುವಾದ ನಚಿಕೇತ ಇವರಲ್ಲಿಯ ಮುಮುಕ್ಷುತ್ವವೂ ವೈರಾಗ್ಯವೂ ಅತ್ಯಂತ ಸ್ಪೃಹಣೀಯವಾದವುಗಳು. ಈಗಿನ ಆರು ವರುಷದ ಸುಂಬಳಬುರುಕ ಹುಡುಗರಲ್ಲಿ ಯಾವ ವಿಚಾರಗಳು ಇರುತ್ತವೆಂದು ಪರೀಕ್ಷಿಸಿದರೆ ಎರಡು ದುಡ್ಡು ಇಸುಕೊಂಡು ತಿಂಡೀ ತಿನ್ನುವ ಕಾಮನೆಯ ಹೊರ್ತು ಹೆಚ್ಚಿನ ವಿಚಾರವು ಅವರಲ್ಲಿ ಇದ್ದಂತೆ ತೋರಲಿಲ್ಲ. ಜನಕರಾಜನಂಥ ಅರಸರ ಓಲಗದಲ್ಲಿ, ಯಜ್ಞಯಾಗಾದಿಗಳ ಸಮಯದಲ್ಲಿ ಆಧ್ಯಾತ್ಮಿಕ ಚರ್ಚೆಗಳು ತಪ್ಪದೆ ನಡೆಯುತ್ತಿದ್ದವು. ಈಗಿನ ನಮ್ಮ ವ್ಯಸನಾಧೀನ ಸಂಸ್ಥಾನಿಕರ ಓಲಗಗಳನ್ನು ನೋಡಿರಿ!

ಬ್ರಾಹ್ಮಣರು ಕೂಳುಕೂಳೆಂದು ಕೀಸರಿಡುವ ಯಜ್ಞಶಾಲೆಗಳನ್ನು
ನೋಡಿರಿ! ಎಂತಹ ವ್ಯತ್ಯಾಸವಿದು? ಆಬಾಲವೃದ್ಧರೂ ಸ್ತ್ರೀಪುರುಷರೂ
ಅಧ್ಯಾತ್ಮವನ್ನು ಪರಿಶೀಲಿಸುತ್ತಿದ್ದರೆಂದು ಉಪನಿಷತ್ತುಗಳ ಮೇಲಿಂದ
ಗೊತ್ತಾಗುತ್ತಿದೆ. ಅದೇ ಪರಂಪರೆಯು ಮುಂದೆ ಪುರಾಣಾದಿಗಳ ಕಾಲ
ದಲ್ಲಿ ಕೂಡ ನಡೆಯಿತು. ಗೀತೋಪದೇಶವನ್ನು ಮಾಡಿದ ಶ್ರೀಕೃಷ್ಣನು
ಸ್ವತಃ ಕ್ಷತ್ರಿಯಶ್ರೇಷ್ಠನು ಅದನ್ನು ಕೇಳುವವನಾದರೂ ಕ್ಷತ್ರಿಯವೀರನೇ.
ಮಹಾಭಾರತದಲ್ಲಿಯ ವ್ಯಾಧ, ವಿದುರ, ವಿದುಲಾ, ರಾಮಾಯಣದಲ್ಲಿಯ
ಹನುಮಾನಾದಿ ವಾನರರು, ಭಾಗವತದಲ್ಲಿಯ ಉದ್ಧವ, ಮುಂತಾದ ಉದಾ
ಹರಣೆಗಳನ್ನು ನೋಡಿದರೆ ಅಧ್ಯಾತ್ಮಜ್ಞಾನವೂ ಅದರ ಅಭ್ಯಾಸವೂ ಎಲ್ಲ
ಬಗೆಯ ಜನರಲ್ಲಿ ಹಬ್ಬಿತ್ತೆನ್ನಬಹುದು.

ಆದರೆ ಈಗ ಹಿಂದುಸ್ಥಾನದಲ್ಲಿ ಅಧ್ಯಾತ್ಮಜ್ಞಾನವಾಗಲಿ ಅಧ್ಯಾತ್ಮದ
ಅಭ್ಯಾಸವಾಗಲಿ ತೀರ ಹೀನ ಸ್ಥಿತಿಯಲ್ಲಿದೆ. ಅದು ಬರಿಯ ಮುದುಕರ
ಮಾರ್ಗವು ಅಥವಾ ಸಾಧುಗಳೆಂಬ ಹೆಸರಿಟ್ಟುಕೊಂಡು ಬೂದಿಬಡಿದು
ಬೈರಾಗಿಗಳಾಗಿ ಓಡಾಡುವವರ ಕೆಲಸವೆಂದು ಜನರ ಕಲ್ಪನೆಯಾಗಿದೆ.
ಅಧ್ಯಾತ್ಮಜ್ಞಾನದಿಂದ ತಮ್ಮ ಜೀವನವು ಎಷ್ಟು ಉಚ್ಚತರಹದ್ದಾಗ
ಬಹುದು, ಅಧ್ಯಾತ್ಮದಿಂದ ತಮಗೆ ಎಲ್ಲ ಬಗೆಯ ಶಕ್ತಿಯುಕ್ತಿ ಬಲವೀ
ರ್ಯಗಳು ಹೇಗೆ ಬರುವವು ಎಂಬ ವಿಷಯಗಳು ಕಣ್ಣಾರೆಯಾಗಿ ಕಾಣ
ದಂತಾಗಿವೆ. ಅಧ್ಯಾತ್ಮವೇ ಸರ್ವಶಾಸ್ತ್ರಗಳ ಉಗಮಸ್ಥಾನವು, ಅದೇ
ಎಲ್ಲ ಶಾಸ್ತ್ರಗಳಿಗೂ ಯಥಾಯೋಗ್ಯವಾದ ಮಹತ್ವವನ್ನು ಕೊಟ್ಟು ವ್ಯವಸ್ಥೆ
ಮಾಡುವ ಸಾಮರ್ಥ್ಯವುಳ್ಳದ್ದು, ಅದರಿಂದಲೆ ನಮಗೆ ನಿಜವಾದ ಶಾಂತಿಯು
ದೊರಕುವದು, ವಿಶ್ವದ ರಾಜ್ಯವನ್ನು ಘಳಿಸಿ ನಾವು ಅಧ್ಯಾತ್ಮಜ್ಞಾನವನ್ನರಿ
ಯದೆ ಹೋದರೆ ನಾವು ಅಸಂತುಷ್ಟರೇ ಉಳಿಯುವೆವು, ನಾವು ವಿದ್ಯಾ
ರಣ್ಯ ವೀರಬುಕ್ಕರಂತೆ ಒಳ್ಳೇ ವೀರ ವ್ಯವಹಾರವನ್ನು ಮಾಡಬೇಕಾದರೂ
ಅಧ್ಯಾತ್ಮದ ಬೆಂಬಲವು ಬೇಕೇ ಬೇಕು ಎಂಬದನ್ನು ನಾವು ಮರೆತುಬಿಟ್ಟಿ
ದ್ದೇವೆ. ಅಧ್ಯಾತ್ಮವೆಂಬುದು ನಮಗೆ ಸದ್ಯಕ್ಕೆ ತಿಳಿಯದ ವಿಷಯವಾ
ಗಿದೆ. ಅದೊಂದು ನಮ್ಮ ಈ ಜೀವನಕ್ಕೆ ಸಂಬಂಧವಿಲ್ಲದ ವಿಷಯವೆಂದು
ಭಾವನೆಯಾಗಿದೆ. ಯಾರಾದರೂ ನಮ್ಮನ್ನು ಹೀಯಾಳಿಸಿದರೆ ಮಾತ್ರ

ನಾವು ಅಂಥ ಋಷಿಯ ಕುಲದವರು ಇಂಥ ಗೋತ್ರದವರೆಂದು ಅಭಿಮಾನದಿಂದ ಹೇಳಲಸುವಾಗುತ್ತೇವೆ. ಆದರೆ ಯಥಾರ್ಥವಾಗಿ ಅವರ ಯೋಗ್ಯತೆ, ಅವರ ಆಧ್ಯಾತ್ಮಿಕ ತೇಜ ಇವುಗಳ ಕಲ್ಪನೆಯು ಸಹ ನಮಗಿಲ್ಲ. ನಮ್ಮ ದೃಷ್ಟಿಯು ಸಂಕುಚಿತವಾಗಿ ದೇಹಾತ್ಮಬುದ್ಧಿಯು ಬೆಳೆದು ವಿಷಯಲಾಲಸೆಯು ಹೆಚ್ಚಾಗಿ ನಾವು ಪಶುತುಲ್ಯವಾಗತೊಡಗಿರುವೆವು. ಅಧ್ಯಾತ್ಮವಿಷಯದಲ್ಲಿ ಈ ಸ್ಥಿತಿಗೆ ಇಳಿದಿರುವದರಿಂದಲೆ ನಮ್ಮ ಪರಿಸ್ಥಿತಿಯೆಲ್ಲ ಕೆಟ್ಟು ಜಗತ್ತಿನಲ್ಲಿ ಯಾರಿಗೂ ಮೋರೆ ತೋರಿಸದಂಥ ನಿಕೃಷ್ಟಾವಸ್ಥೆಯಲ್ಲಿ ನಾವು ಸದ್ಯಕ್ಕೆ ಕೊಳೆಯುತ್ತಿರುವೆವೆಂದು ನನ್ನ ಅಭಿಪ್ರಾಯವಿರುವದು. ನಮ್ಮ ಸ್ಥಿತಿಯು ನಿಜವಾಗಿ ಸುಧಾರಿಸಬೇಕಾಗಿದ್ದರೆ ನಮ್ಮ ಸುಧಾರಣೆಯು ಘಟ್ಟಿಯಾದ ತಳಹದಿಯ ಮೇಲೆ ನಿಲ್ಲಬೇಕಾಗಿದ್ದರೆ ನಮ್ಮ ಆಧ್ಯಾತ್ಮಿಕ ಪುನರುಜ್ಜೀವನವು, ನಮ್ಮ ಬ್ರಹ್ಮವಿದ್ಯೆಯ ಪುನರುತ್ಥಾನವು ಆಗುವದು ಅವಶ್ಯವೆಂದು ನನ್ನ ಭಾವನೆಯು.

**ರಾಜಕೀಯ ಸ್ಥಿತಿಯು—** ಇದು ನಮ್ಮ ಆಧ್ಯಾತ್ಮಿಕ ಅಧೋಗತಿಯಾಯಿತು. ಇನ್ನು ಭಾರತೀಯರ ರಾಜಕೀಯ ಸ್ಥಿತಿಯ ಕಡೆಗೆ ನೋಡಿದರೆ ಅದೇನಾದರೂ ಸಮಾಧಾನಕಾರಕವೆನ್ನಬೇಕೇ? ಸರ್ವಥಾ ಇಲ್ಲ. ಈ ಭರತಖಂಡವು ಮೂವತ್ತೆರಡು ಕೋಟಿ ಮಾನವರ ರಾಷ್ಟ್ರವು, ಪುರಾತನ ರಾಷ್ಟ್ರವು, ಸಂಸ್ಕೃತರಾಷ್ಟ್ರವು, ಅನಾದಿಯಿಂದ ಸ್ವಾತಂತ್ರ್ಯವನ್ನನುಭವಿಸುತ್ತ ಬಂದ ರಾಷ್ಟ್ರವು, ಐತಿಹಾಸಿಕ ಕಾಲದಲ್ಲಿ ಅನೇಕ ಶೂರ ವೀರ ಕ್ಷತ್ರಿಯರಿಂದ ಬುದ್ಧಿವಂತರಾದ ಮುತ್ಸದ್ದಿಗಳಿಂದ ಶೋಭಿಸುತ್ತಿರುವ ರಾಷ್ಟ್ರವು, ವಿವಿಧ ಕಲಾಕೌಶಲ್ಯ ಶಿಲ್ಪ, ವಿಜ್ಞಾನಗಳಿಂದ ಮುಂದರಿದ ರಾಷ್ಟ್ರವು. ಆದರೆ ಅದರ ಸ್ಥಿತಿಯು ಈಗೇನಿದೆ? ಆ ಕಾಲದ ವೈಭವವನ್ನೂ ಈ ಕಾಲದ ಅಧೋಗತಿಯನ್ನೂ ಒಂದೇ ಕಣ್ಣಿನಿಂದ ನೋಡುವದು ಅಸಾಧ್ಯವು. ವಿಜಯನಗರದ ಆ ಕಾಲದ ಮಹಿಮೆಯನ್ನೂ ಈ ಕಾಲದ ಹಾಳು ಹಂಪೆಯನ್ನೂ ನೋಡಿ ಯಾವನ ಎದೆಯೊಡೆಯಲಿಕ್ಕಿಲ್ಲ? ಈ ಪ್ರಚಂಡ ರಾಷ್ಟ್ರವು ಈಗ ಏಳುಸಾವಿರ ಮೈಲಿನಿಂದ ಬಂದ, ಪರಧರ್ಮೀಯ, ಹೀನ ಸಂಸ್ಕೃತಿಯ, ನಮಗಿಂತ ಒಂದು ಏಳಾಂಶದಷ್ಟು ಸಂಖ್ಯೆಯುಳ್ಳ, ಶ್ವೇತದೀಪದ ನಾಲ್ಕು ಅಧಿಕಾರಿಗಳ ದಾಸಾನುದಾಸರಾಗಿ

ಜೀವನವನ್ನು ಕಳೆಯುತ್ತಿರುವುದು, ಪಾರತಂತ್ರ್ಯದಂಥ ಪರಮಾವಧಿಯ ಪಾಪದಲ್ಲಿ ಕೊಳೆಯುತ್ತಿರುವುದು. ಅವರು ನಮ್ಮನ್ನು ಶಸ್ತ್ರಹೀನ ಮಾಡಿದರು, ನಮ್ಮ ಅಪಮಾನಮಾಡಿದರು, ನಾವು ನಿಮ್ಮ ಗಂಡಂದಿರು ನಿಮ್ಮನ್ನು ಬೇಕಾದ ಹಾಗೆ ಆಳುವವರು ಎಂದು ಸಾರಿದರು. ಆದರೂ ಈ ರಾಷ್ಟ್ರಕ್ಕೆ ತನ್ನ ದುಃಸ್ಥಿತಿಯ ಪರಿವೆಯಿಲ್ಲ. ತನ್ನ ನಿಜಸ್ಥಿತಿಯ ಜ್ಞಾನವಿಲ್ಲ. ನೆರೆಹೊರೆಯ ರಾಷ್ಟ್ರಗಳಲ್ಲಿ ಮೋರೆ ಎತ್ತಿ ಮಾತಾಡಲಿಕ್ಕೆ ಸಹ ಈ ರಾಷ್ಟ್ರಕ್ಕೆ ಅನುವಿಲ್ಲ. ಅನ್ಯದೇಶಗಳಲ್ಲಿ ಇದಕ್ಕೆ ಮಾನವಿಲ್ಲ, ಮರ್ಯಾದೆಯಿಲ್ಲ. ಎಲ್ಲಿ ಹೋದರೂ 'ಇವರು ದಾಸರಾಷ್ಟ್ರದವರು' ಎಂಬ ಹೀಯಾಳಿಕೆ ಮಾತ್ರ ಕಟ್ಟಿಟ್ಟದೆ. ಒಟ್ಟಿಗೆ ಜಗತ್ತಿನಲ್ಲಿ ಈ ರಾಷ್ಟ್ರದ ಸ್ಥಿತಿಯು ಅತ್ಯಂತ ಕರುಣಾಸ್ಪದವಾಗಿದೆ. ಧನ, ಬಗೆಬಗೆಯ ಸಂಪತ್ತು, ವಿವಿಧವಿದ್ಯೆಗಳು, ಅನೇಕ ವೀರರು ಇವೆಲ್ಲ ಇದ್ದರೂ ಇವುಗಳ ಉಪಯೋಗವನ್ನು ರಾಷ್ಟ್ರಹಿತಕ್ಕಾಗಿ ಮಾಡಿಕೊಳ್ಳಲಿಕ್ಕೆ ಅವಶ್ಯವಿರುವ ಸ್ವಾತಂತ್ರ್ಯವಿಲ್ಲ. ಅನೇಕ ರಾಷ್ಟ್ರಗಳಿಗೆ ತಾಯಿಯಂತಿರುವ ಈ ಭಾರತವರ್ಷವು ಈ ಬಗೆಯ ರಾಜಕೀಯ ನರಕದಲ್ಲಿ ತೊಳಲಾಡುತ್ತಿರುವುದು. ಇನ್ನು ಹಿಂದುಸ್ಥಾನದಲ್ಲಿ ರಾಜರೆಂಬವರೂ ಹೇರಳವಾಗಿದ್ದಾರೆ. ಸುಮಾರು ೬೭೫ ಸಂಸ್ಥಾನಗಳಿವೆ ಮತ್ತು ಹಿಂದುಸ್ಥಾನದ ಜನಸಂಖ್ಯೆಯ ಐದಾಂಶದಷ್ಟು ಸಂಖ್ಯೆಯು ಆ ಸಂಸ್ಥಾನಿಕರ ಕೈಕೆಳಗಿದೆ. ಆದರೇನು? ಅವರೆಲ್ಲ ಚದುರಂಗದ ಅರಸರಿಗಿಂತ ಅತ್ತತ್ತಲಿರುವರು. ಅವರಲ್ಲಿ ಬಹುಶಃ ಯಾರಿಗೂ ಸ್ವಾತಂತ್ರ್ಯ ಪಿಪಾಸೆ ಇಲ್ಲ. ಸ್ವಕುಲದಭಿಮಾನವಿಲ್ಲ. ಸ್ವರಾಷ್ಟ್ರದ ಕಲ್ಪನೆಯಿಲ್ಲ. ಸ್ವಜನರ ಹಿತವನ್ನು ಸಾಧಿಸುವ ಆಕಾಂಕ್ಷೆಯಿಲ್ಲ. ಬಹುಶಃ ಎಲ್ಲರಲ್ಲಿ ವ್ಯಸನಾಧೀನತೆ, ಪಾಶ್ಚಾತ್ಯ ಪದ್ಧತಿಗಳ ಮತ್ತು ಡೌಲಿನ ಪ್ರೀತಿ, ರಾಜ್ಯವು ತಮ್ಮ ಸ್ವಂತಸೊತ್ತು ಎಂಬ ಭಾವನೆ, ಪ್ರಜಾಜನರು ತಮಗಿಂತ ಹೀನವಾಗಿರುವರು ಎಂಬ ಕಲ್ಪನೆ, ಬ್ರಿಟಿಶ ಅಧಿಕಾರಿಗಳನ್ನು ಪ್ರೀತಿಸುವ ಲವಲವಿಕೆ, ಅವರ ರೀತಿ ನಡಾವಳಿಗಳ ಅನುಕರಣಶೀಲತೆ ಮುಂತಾದ ದುರ್ಗುಣಗಳು ಮನೆಮಾಡಿಕೊಂಡಿವೆ. ಇದಕ್ಕೆ ಅಪವಾದಾತ್ಮಕವಾಗಿ ಶ್ರೀ ಮಹಿಶೂರ ಮಹಾರಾಜರಂಥವರು ಔಂಧಕರರಂಥವರು ಹಲಕೆಲವರಿರುವರು. ಆದರೆ ಅವರೆಲ್ಲ ಮಹಾಸಾಗರದಲ್ಲಿ ಒಂದು ಹನಿ ಇದ್ದಂತೆ.

ಇತ್ತೀಚೆ ಸಾಮಾನ್ಯ ಜನರಲ್ಲಿ ರಾಜಕೀಯ ಸ್ವಾತಂತ್ರ್ಯದ ಗಾಳಿಯು ಸುಳಿದಾಡುತ್ತಲಿದೆ. ಆದರೆ ವಿಚಾರವಿದ್ದರೂ ಆಚಾರವಿಲ್ಲ, ನುಡಿಯಿದ್ದರೂ ನಡೆಯಿಲ್ಲ. ಕರ್ತೃತ್ವದ ಅಭಾವದ ಹೆಚ್ಚಿನ ಉದಾಹರಣೆಯು ಇಲ್ಲಿ ನೋಡಲು ಸಿಕ್ಕಂತೆ ಇನ್ನೆಲ್ಲಿ ಸಿಗುವದು?

**ಧಾರ್ಮಿಕಸ್ಥಿತಿಯು—** ಭಾರತದ ಧಾರ್ಮಿಕಸ್ಥಿತಿಯಾದರೂ ಹೀಗೆಯೇ ಇದೆ. ಪ್ರಾಚೀನ ಆರ್ಯರು ಆಸೇತುಹಿಮಾಚಲ ಒಂದೇ ಒಂದು ಧರ್ಮವನ್ನು ಹಬ್ಬಿಸಿದರು. ತಮ್ಮ ಆಕ್ರಮಣದಲ್ಲಿ ಅಡ್ಡ ಬಂದ ನಾಗರು, ವಾನರರು, ದ್ರಾವಿಡರು ಮುಂತಾದವರನ್ನು ತಮ್ಮ ಬಲದಿಂದಲೂ ತಮ್ಮ ವರಿಷ್ಠವಾದ ಧರ್ಮದಿಂದಲೂ ಆಕ್ರಮಿಸಿ ಎತ್ತೆತ್ತಲೂ ವೈದಿಕಧರ್ಮವನ್ನೆ ಪ್ರಸ್ಥಾಪಿಸಿದರು. ತಮ್ಮ ಸಂಸ್ಕೃತಿಯಿಂದ ತಮ್ಮ ಸಹಿಷ್ಣುತೆ ಸಮಾಧಾನಗಳಿಂದ ಎಲ್ಲರನ್ನು ತಮ್ಮಂತೆ ಮಾಡಿದರು. ಸಹಿಷ್ಣುತೆಯ ಉದಾಹರಣೆಯನ್ನು ನೋಡಬೇಕಾಗಿದ್ದರೆ ಜೈನರ ಕಡೆಗೆ ನೋಡಬಹುದು. ಇದೇ ಧರ್ಮದಿಂದ ಉದ್ಭವಿಸಿದ ಜೈನಧರ್ಮವು ಇನ್ನೂ ತನ್ನ ೧೨ ಲಕ್ಷ ಅನುಯಾಯಿಗಳೊಂದಿಗೆ ಇದೇ ದೇಶದಲ್ಲಿ ಯಾವ ಅಸಹಿಷ್ಣುತೆಯನ್ನೂ ತೋರಿಸದೆ ಮತ್ತು ವೈದಿಕರಿಂದ ಯಾವ ಆತಂಕವನ್ನೂ ಹೊಂದದೆ ಸುರಕ್ಷಿತವಾಗಿರುವದು. ವೈದಿಕಕರ್ಮಕಾಂಡದ ಪ್ರತಿಕ್ರಿಯಾರೂಪವಾಗಿ ಹೊರಟ ಬೌದ್ಧಧರ್ಮವು ಒಮ್ಮೆ ಹಿಂದುಸ್ಥಾನವನ್ನು ನುಂಗಿಬಿಟ್ಟಿತ್ತು. ಆದರೆ ವೈದಿಕಧರ್ಮವು ತನ್ನ ಪ್ರಭಾವದಿಂದ ಪುನಃ ತನ್ನ ವರ್ಚಸ್ಸನ್ನು ಸ್ಥಾಪಿಸಿ ಬೌದ್ಧಧರ್ಮವನ್ನು ಹಿಂದುಸ್ಥಾನದಿಂದ ಗಡೀಪಾರು ಮಾಡಿತು. ಬೌದ್ಧರು ತಮ್ಮ ಜನ್ಮಸ್ಥಾನದಲ್ಲಿ ನಿರ್ನಾಮವಾದರೂ ದಶದಿಕ್ಕುಗಳಿಗೆ ಹಬ್ಬಿ ಚೀನದಂಥ ಪ್ರಚಂಡ ರಾಷ್ಟ್ರವನ್ನೂ ಜಪಾನದಂಥ ವೀರರಾಷ್ಟ್ರವನ್ನೂ ವ್ಯಾಪಿಸಿಬಿಟ್ಟರು. ಈ ಪ್ರಕಾರ ೯-೧೦ ನೇ ಶತಮಾನದ ವರೆಗೆ ಭಾರತವು ತನ್ನ ಎಲ್ಲ ಧಾರ್ಮಿಕ ಎದುರಾಳುಗಳನ್ನು ಗೆದ್ದು ವಿಜಯಿಯಾಗಿ ಮೆರೆಯುತ್ತಿತ್ತು. ಆಗಿನಿಂದ ಮುಂದೆ ಆ ಧರ್ಮದಲ್ಲಿ ಯಾವ ಕುಂದುಕೊರತೆಗಳು ಹೊಕ್ಕವೋ ಏನೋ. ಮುಸಲ್ಮಾನೀ ಧರ್ಮದ ಪ್ರವೇಶವಾದಂದಿನಿಂದ ಹಿಂದೂಧರ್ಮದ ಬಲವು ಕುಂದುತ್ತ ನಡೆಯಿತು. ಅಥವಾ ಹಿಂದೂಧರ್ಮವು ಕುಂದುತ್ತ ನಡೆದುದರಿಂದದೇ ಮುಸಲ್ಮಾನೀ

ಧರ್ಮಕ್ಕೆ ಎಡೆಯಾಯಿತು. ಈಗ ೩೨ ಕೋಟಿ ಜನರಲ್ಲಿ ಸುಮಾರು ೫೦ ಲಕ್ಷ ಕ್ರಿಶ್ಚನರಾಗಿರುತ್ತಾರೆ. ಪ್ರತಿವರ್ಷ ಆ ಎರಡೂ ಧರ್ಮದವರ ಸಂಖ್ಯೆಯು ಬೆಳೆಯುತ್ತಲಿದೆ. ಕ್ರಿಶ್ಚನರು ವರ್ಷಕ್ಕೊಂದು ಲಕ್ಷದಂತೆ ಹೆಚ್ಚುತ್ತಲಿರುವರು. ಹಿಂದೂಜನರ ಸಂಖ್ಯೆಯು ಕಡಿಮೆಯಾಗುತ್ತಲಿದೆ. ಅನೇಕ ಧರ್ಮಗಳನ್ನು ಒಳಕೊಳ್ಳುವ ಮತ್ತು ಎದುರಾದವುಗಳನ್ನು ಪಚನ ಮಾಡಿಕೊಂಡು ಬಿಡುವ ಹಿಂದೂಧರ್ಮದ ಶಕ್ತಿಯು ಅಳಿದು ಈಗ ತಾನೇ ಹತವೀರ್ಯವೂ ಹತಬಲವೂ ಆಗಿ ಎರಡನೆಯವರ ಆಕ್ರಮಣಕ್ಕೆ ಗುರಿಯಾಗಿದೆ. ಪ್ರಗಮನಶೀಲತೆ ಸತ್ವ ಬಿಡದೆ ದೇಶಕಾಲಾನುವರ್ತನ, ತತ್ವನಿಷ್ಠೆ, ಲೋಕಸಂಗ್ರಹದೃಷ್ಟಿ, ಇವು ಕಡಿಮೆಯಾಗಿ ಪ್ರತಿಗಮನ, ಅಂಧಾನುಕರಣ, ಆಚಾರನಿಷ್ಠೆ, ಜಾತಿಪ್ರತಿಷ್ಠೆ, ವ್ಯಕ್ತಿಮಹಾತ್ಮ್ಯ ಇವೇ ಹೆಚ್ಚಾಗಿಹೋಗಿವೆ. ಸಮಾಜದಕೈಯಲ್ಲಿಯೂ ಪರಿಷತ್ತುಗಳಕೈಯಲ್ಲಿಯೂ ಇದ್ದ ಧರ್ಮಶಾಸ್ತ್ರದ ಮತ್ತು ಧರ್ಮಶಾಸನದ ಸೂತ್ರತಳು ಏಕತಂತ್ರೀ ಮಠಾಧಿಕಾರಿಗಳ ಮತ್ತು ಶಾಸ್ತ್ರಸ್ಥಿತಿಯನ್ನರಿಯದ ಲೋಕಸಂಗ್ರಹವನ್ನರಿಯದ ಸಾಧು ಸ್ವಾಮಿಗಳವರ ಕೈಸೇರಿವೆ. ಒಟ್ಟಿಗೆ ನಮ್ಮ ಧರ್ಮದಲ್ಲಿಯ ಸಮಭಾವವಳಿಯದ ವರ್ಣಾಶ್ರಮಧರ್ಮಗಳೂ, ಸಾಮಾಜಿಕತ್ವವೂ, ವೀರತೆಯೂ, ಏಕದೇವತೆಯ ಪೂಜೆಯೂ, ಹೋಗಿ ಜಾತಿಗಳ ಗೊಂದಲ, ಉಚ್ಚನೀಚಭಾವಗಳ ಭವಣೆ, ವ್ಯಕ್ತಿಧರ್ಮದ ಪ್ರಾಧಾನ್ಯ, ಸಹಿಷ್ಣುತೆ ಅಥವಾ ಸಾಧುತನ ಅಥವಾ ಸಾತ್ವಿಕಭಾವವೆಂಬ ಹೆಸರುಳ್ಳ ಹೇಡಿತನ, ಅನೇಕ ವಿವಿಧ ಹೀನದೇವತೆಗಳ ಪೂಜೆ, ಪುರೋಹಿತವರ್ಗದ ಜುಲುಮೆ, ಮತ್ತು ಪೌರ್ರೋಢಿ ಇವೇ ಕೆಟ್ಟ ಕಾಡಿನಂತೆ ಬೆಳೆದು ನಿಂತಿವೆ.

**ಸಾಮಾಜಿಕ ಸ್ಥಿತಿಯು—** ಆಧ್ಯಾತ್ಮಿಕ, ರಾಜಕೀಯ ಮತ್ತು ಧಾರ್ಮಿಕಸ್ಥಿತಿಯು ಹೀಗೆ ಇದ್ದಮೇಲೆ ಸಾಮಾಜಿಕಸ್ಥಿತಿಯು ಅಳಿಯದೆ ಚನ್ನಾಗಿ ಇರುವ ಬಗೆ ಹೇಗೆ? ಅದೂ ಕೆಟ್ಟು ಹಾಳಾಗಿ ಹೋಗಿದೆ. ಸಮಾಜದಲ್ಲಿ ಉಚ್ಚನೀಚತ್ವದ ಮತ್ತು ಜಾತಿಮತ್ಸರದ ಭಾವನೆಗಳ ಮೂಲಕ ದ್ವೇಷವು ಬೆಳೆದು ನಿಂತಿದೆ. ಇಡೀ ಸಮಾಜದ ಸ್ಥಿತಿಯನ್ನು ಸುಧಾರಿಸಬೇಕೆಂಬ ಭಾವನೆಯು ಅಳಿದು ತಮ್ಮ ತಮ್ಮ ಜ್ಞಾತಿಗಳ ಹಿತವನ್ನು ಸಾಧಿಸುವ ಸಂಕುಚಿತ ಭಾವನೆಗಳಲ್ಲಿಯೆ ಎಲ್ಲರೂ ತೊಡಗಿದಂತೆ

ತೋರುತ್ತಿದೆ. ಸ್ವಜಾತಿಯಲ್ಲಿ ಕೂಡ ಯಾವದೇ ಸುಧಾರಣೆಯನ್ನು ಆರಂಭಿಸಬೇಕೆಂದ ಕೂಡಲೆ ಅಜ್ಞಾನ, ಅಂಧಪರಂಪರೆ, ರೂಢಿಯಬಲ, ಹಿತಾಹಿತಗಳನ್ನು ತಿಳಿಯದೆ ವರ್ತಿಸುವ ಪ್ರವೃತ್ತಿ, ದೈವವಾದ ಮುಂತಾದ ಅನೇಕ ಅಡಚಣಿಗಳು ಎದುರಾಗುತ್ತಿವೆ. ಹಿಂದುಳಿದ ಜಾತಿಯೆನಿಸುವವರ ಕಡೆಗೂ ಸ್ತ್ರೀಯರ ಸ್ಥಿತಿಯ ಕಡೆಗೂ ಅತ್ಯಂತ ದುರ್ಲಕ್ಷವು ಮಾಡಲ್ಪಟ್ಟಿದೆ. ಸಮಾಜಸೇವೆಯನ್ನು ಮಾಡುವದು ತಮ್ಮ ಆದ್ಯಕರ್ತವ್ಯವು ಎಂಬ ಶ್ರೇಷ್ಠ ಭಾವನೆಯು ತೀರ ಸ್ವಲ್ಪ ಜನರಲ್ಲಿ ಕಂಡುಬರುತ್ತಿದೆ. ನೀತಿಬಂಧನವು ಶಿಥಿಲವಾಗಿ ಎತ್ತೆತ್ತಲೂ ಸ್ವೈರಾಚಾರವು ಸುಳಿದಾಡುತ್ತಲಿದೆ. ಚಿಕ್ಕಪುಟ್ಟ ಹಾಗೂ ದೊಡ್ಡ ವ್ಯಸನಗಳು ಉಚ್ಚವರ್ಣದವರಲ್ಲಿ ಕೂಡ ಮಿತಿಮೀರಿ ಬೆಳೆದು ಅಸಹ್ಯವಾಗಿವೆ. ಬಾಲಬಾಲಿಕಾ ವಿವಾಹಗಳು, ಬಾಲಿಕಾವೃದ್ಧ ವಿವಾಹಗಳು ಮುಂತಾದ ಅನಿಷ್ಟ ರೂಢಿಗಳು ಸಮಾಜವನ್ನು ದುರ್ಬಲವನ್ನಾಗಿ ಮಾಡುತ್ತಲಿವೆ. ಹೀಗೆ ಸಮಾಜವೆಲ್ಲ ಅಲ್ಲೋಲಕಲ್ಲೋಲವಾಗಿ ಅಧೋಗತಿಗಿಳಿದಿದೆ.

**ಆರ್ಥಿಕಸ್ಥಿತಿಯು**— ಇನ್ನು ಆರ್ಥಿಕಸ್ಥಿತಿಯ ಕಡೆಗೆ ನೋಡಿದರೂ ಇದೇ ಹಣೆಯಬರಹವು. ಯಾಕೆಂದರೆ ಇಲ್ಲಿ ಲಕ್ಷಾವಧಿ ಜನರು ದಿನಾಲು ಅರಹೊಟ್ಟೆ ಉಂಡು ಕಾಲ ಕಳೆಯುತ್ತಿರುವರು. ಅಮೇರಿಕಾ ಇಂಗ್ಲಂಡ ಮುಂತಾದ ದೇಶಗಳಲ್ಲಿ ಪ್ರತಿಯೊಬ್ಬ ಮನುಷ್ಯನ ವಾರ್ಷಿಕ ಸರಾಸರಿ ಉತ್ಪನ್ನವು ಅನುಕ್ರಮವಾಗಿ ೧೦೮೦ ರೂ. ೭೫೦ ರೂ. ಇದ್ದರೆ ಇಲ್ಲಿ ಅದು ೩೬ ರೂ. ಇರುವದು! ಇದರ ಮೇಲಿಂದ ಇಲ್ಲಿಯವರ ಆರ್ಥಿಕಸ್ಥಿತಿಯ ಸ್ಪಷ್ಟ ಕಲ್ಪನೆಯು ಎಲ್ಲರಿಗೂ ಸಹಜವೇ ಆಗಬಹುದು. ಉದ್ಯೋಗ ಮಾಡಿ ಹೊಟ್ಟೇ ತುಂಬಿಕೊಳ್ಳಬೇಕೆಂದರೆ ಊರಲ್ಲಿ ಉದ್ಯೋಗ ಸಿಕ್ಕುವಂತಿಲ್ಲ. ಇದ್ದ ಉದ್ಯೋಗಗಳೆಲ್ಲ ಪಾಶ್ಚಾತ್ಯರ ಮೇಲಾಟದ ಮೂಲಕ ಹಾಳಾಗಿ ಹೋದವು. ಹೊಸ ಉದ್ಯೋಗಗಳನ್ನು ಆರಂಭಿಸಿದರೂ ಅವು ಪ್ರತಿಕೂಲ ಪರಿಸ್ಥಿತಿಯ ಮೂಲಕ ಊರ್ಜಿತಾವಸ್ಥೆಗೆ ಬರುವಂತಿಲ್ಲ.

**ಆಶೆ ನಿರಾಶೆ**— ಹೀಗೆ ಎಲ್ಲ ವಿಷಯಗಳಲ್ಲಿಯೂ ಜೀವನದ ವಿವಿಧ ವಿಭಾಗಗಳಲ್ಲಿಯೂ ಅಧೋಗತಿ, ಹೀನತೆ, ದುರ್ಬಲತೆ ಇವೇ ಎದ್ದು ಕಾಣಿಸುತ್ತಿರುವವು. ಆದರೂ ಇತ್ತೀಚೆ ಆಗಾಗ್ಗೆ ಈ ಕಗ್ಗತ್ತಲೆಯಲ್ಲಿ ಜಾಗೃ

ತಿಯ ಬೆಳಕಿನ ಮಿಂಚು ಹೊಡೆಯುತ್ತಲಿರುವುದು. ನಮ್ಮ ಸ್ಥಿತಿಯು ಹೀನವಾಗಿರುವುದು ಎಂಬ ಎಚ್ಚರದ ಹೊಚ್ಚ ಹೊಸ ಚಿಗುರು ನಮ್ಮ ಒಣಗಿ ನಿಂತ ರಾಷ್ಟ್ರವೃಕ್ಷಕ್ಕೆ ಒಡೆಯುತ್ತಲಿರುವುದು. ಸುತ್ತಲೂ ಪಸರಿಸಿದ ನಿರಾಶೆಯ ಮರುಭೂಮಿಯಲ್ಲಿ ಆಶೆಯ ಸೆಲೆಯ ಸುಳುವು ಕೇಳುತ್ತಲಿರುವುದು. ಇದನ್ನು ನೋಡಿ ನಮ್ಮ ಭಗ್ನಹೃದಯವು ಮತ್ತೆ ಧೈರ್ಯ ತಾಳಿ ಮುಂದೆ ಹೋಗಬೇಕೆನ್ನುತ್ತಿದೆ. ಆದರೂ ಕಿಂಕರ್ತವ್ಯಮೂಢವಾಗಿ ಕರ್ತೃತ್ವಹೀನಸ್ಥಿತಿಯಲ್ಲಿ ರಾಷ್ಟ್ರವು ತಲ್ಲಣಿಸುತ್ತಲಿದೆ. ಏನು ಮಾಡಿದರೆ ಅಭ್ಯುದಯವಾಗಬಹುದು, ಏನು ಮಾಡಿದರೆ ನಿಃಶ್ರೇಯಸವು ದೊರಕುವದು, ಯಾತರಿಂದ ಆಧ್ಯಾತ್ಮಿಕಶಾಂತಿಯೂ ತೇಜವೂ ದೊರಕುವವು, ಏನು ಮಾಡಲಾಗಿ ರಾಜಕೀಯ ಸ್ವಾತಂತ್ರ್ಯವು ಉದಯಿಸುವುದು, ಯಾವ ಉಪಾಯಗಳಿಂದ ಧರ್ಮಭಾವನೆಗಳ ಜಾಗ್ರತಿಯಾಗುವುದು, ಯಾವ ಬಗೆಯ ಸಮಾಜಸಂಘಟನೆಯಿಂದ ಅನೇಕ ಜಾತಿ ಮತ್ತು ವ್ಯಕ್ತಿಗಳಲ್ಲಿಯ ದುರ್ನಡತೆಗಳೂ ದುರ್ಭಾವನೆಗಳೂ ಹೋಗಿ ಸಮಾಜದಲ್ಲಿ ಶಾಂತಿ ತುಷ್ಟಿ ಪುಷ್ಟಿಗಳು ನೆಲೆಗೊಳ್ಳುವವು, ಯಾವ ಹೊಸ ಹೊಸ ಉದ್ಯೋಗಗಳಿಂದ ಮತ್ತು ಯುಕ್ತಿಗಳಿಂದ ಭಾರತೀಯರಿಗೆ ಹೊಟ್ಟೆ ತುಂಬ ಅನ್ನವೂ ಬೆನ್ನು ತುಂಬ ಬಟ್ಟೆಯೂ ಸಿಗುವದು, ಎಂಬುದು ನಿಚ್ಚಳವಾಗಿ ಕಾಣದಂತಾಗಿದೆ.

**ಗೀತೆಗೂ ಸದ್ಯಸ್ಥಿತಿಗೂ ಸಂಬಂಧವು**— ಭಾರತೀಯರ ಸ್ಥಿತಿಯು ಹೀಗೆ ಇರುವುದಕ್ಕೂ ಗೀತೆಗೂ ಏನು ಸಂಬಂಧವು ಎಂದು ಹಲವರು ಕೇಳಬಹುದು. ನಮ್ಮ ದೃಷ್ಟಿಯಿಂದ ಅತ್ಯಂತ ನಿಕಟಸಂಬಂಧವಿದೆಯೆಂದು ಹೇಳಬಹುದು. ನಾವು ಗೀತೋಪದೇಶವನ್ನು ಅನುಸರಿಸಿ ನಡೆಯದೆ ಇರುವದೇ ನಮ್ಮ ಅಧೋಗತಿಯು ಕಾರಣವು ಎಂಬುದೊಂದು ಸಂಬಂಧವು; ನಮ್ಮ ರಾಷ್ಟ್ರದ ಸದ್ಯದ ಮನಸ್ಥಿತಿಯು ಯುದ್ಧಾರಂಭದಲ್ಲಿ ಅರ್ಜುನನ ಸ್ಥಿತಿಯಿದ್ದಂತೆ ಅತ್ಯಂತ ದುರ್ಬಲವಿದ್ದು ಶ್ರೀಕೃಷ್ಣನಂಥವನ ಉಪದೇಶವನ್ನು ಕೇಳಿ ಆದರಂತೆ ನಡೆಯಬೇಕೆಂಬ ಲವಲವಿಕೆಯುಳ್ಳದ್ದಾಗಿದೆ, ಎಂಬುದು ಎರಡನೆಯ ಸಂಬಂಧವು; ಕ್ಲೈಬ್ಯ, ದಿಙ್ಮೂಢತೆ, ಹೃದಯದೌರ್ಬಲ್ಯ ಇವುಗಳಿಂದೊಡಗೂಡಿದ್ದರೂ ನಾವು ಉಚ್ಚಕುಲದವರು, ಶ್ರೇಷ್ಠರು, ನಮ್ಮ ಕೈಯಿಂದ ಪೂರ್ವದಂತೆ ಶ್ರೇಷ್ಠ ಕರ್ಮಗಳಾಗಬೇಕು,

ಎಂಬ ಆಕಾಂಕ್ಷೆಗಳು ಭಾರತೀಯರಲ್ಲಿ ಜಾಗೃತವಾಗಿವೆ, ಎಂಬುದು ಮೂರನೆಯ ಸಂಬಂಧವು. ಆದುದರಿಂದ ರಾಷ್ಟ್ರವು ಈಗ ಅರ್ಜುನನಂತೆ ಮುಮುಕ್ಷುಸ್ಥಿತಿಯನ್ನು ಪಡೆದು ಶ್ರೀಕೃಷ್ಣನ ಉಪದೇಶಕ್ಕೆ ಯೋಗ್ಯವಾಗಿದೆ. ಈ ಸಮಯಕ್ಕನುಸರಿಸಿ ರಾಷ್ಟ್ರದಲ್ಲಿ ಗೀತೆಯ ಬಗ್ಗೆ ಆದರವೂ ಗೀತಾಜ್ಞಾನದ ಬಗ್ಗೆ ಜಿಜ್ಞಾಸೆಯೂ ಗೀತೆಯ ಪ್ರಚಾರದ ಬಗ್ಗೆ ಪ್ರಯತ್ನಗಳೂ ಸಣ್ಣ ಪ್ರಮಾಣದಿಂದ ಕಂಡುಬರುವವು. ಅವೇ ಹೆಚ್ಚಾಗಿ ಗೀತೆಯೇ ನಮಗೆ ಉದ್ಧಾರಕವಾಗಬಹುದೆಂದು ನಮ್ಮ ನಂಬಿಗೆ.

**ಗೀತಾಭ್ಯಾಸದ ಅವಶ್ಯಕತೆಯು**—ಆದರೆ ಗೀತಾಭ್ಯಾಸದ ಅವಶ್ಯಕತೆಯು 'ನಮಗೆ' ಇನ್ನೂ ಸಾಕಷ್ಟು ಕಂಡುಬಂದಿಲ್ಲ. ಆಧ್ಯಾತ್ಮಿಕ ಗ್ರಂಥಗಳ ಅಭ್ಯಾಸದಿಂದ ರಾಷ್ಟ್ರಗಳ ಅಭ್ಯುದಯವಾಗುವ ಬಗೆ ಹೇಗೆ ಎಂಬ ಸಂಶಯವು ಇನ್ನೂ ಎಷ್ಟೋ ಜನರಲ್ಲಿದೆ. ಆದರೆ ಅವರಿಗೆ ನಾವು ಕೈಯಲ್ಲಿ ಕಡ್ಡಿಕೊಟ್ಟು ಹೇಳುವುದೇನಂದರೆ, ಆಧ್ಯಾತ್ಮಿಕ ಜ್ಞಾನವೆಂದರೆ ಬರಿಯ ಸತ್ತುಹೋದಮೇಲೆ ಶ್ರೇಯಸ್ಸು ಕೊಡುವ ಶಾಸ್ತ್ರವಲ್ಲ. ಆದರೆ ಇಲ್ಲಿದ್ದಾಗ, ಶ್ರೀ, ವಿಜಯ, ಭೂತಿ, ನೀತಿಗಳನ್ನು ಕೊಟ್ಟು ಮನಃಶಾಂತಿಯನ್ನು ಪ್ರಸ್ಥಾಪಿಸಿ ಪರಲೋಕದಲ್ಲಿ ಪರಮಪದವನ್ನು ಕೈಸೇರಿಸುವ ಪ್ರತಿಜ್ಞೆಯನ್ನು ಮಾಡಿದ ಶಾಸ್ತ್ರವದು. ವ್ಯಕ್ತಿಯ ಅಥವಾ ರಾಷ್ಟ್ರದ ನಿಜವಾದ ಏಳಿಗೆಯಾಗಬೇಕಾದರೆ ಆಧ್ಯಾತ್ಮಿಕ ಜಾಗೃತಿಯಾಗದೇ ಅದು ಎಂದೂ ಸಾಧ್ಯವಿಲ್ಲೆಂಬುದು ಕಟ್ಟಿಟ್ಟ ಗಂಟು. ನಮ್ಮ ಮನಸಿನಲ್ಲಿ ಅಭಯ, ಶೌರ್ಯ ವೀರ್ಯಾದಿಗುಣಗಳು ನೆಲೆಗೊಳ್ಳಬೇಕಾದರೆ, ಶುದ್ಧ ಪವಿತ್ರ ವರ್ತನವು ನಮ್ಮ ಕಡೆಯಿಂದ ಆಗಬೇಕಾಗಿದ್ದರೆ, ಪೂರ್ಣ ಆಧ್ಯಾತ್ಮಿಕ ಜ್ಞಾನವನ್ನು ನಾವು ಪಡೆಯಲು ಯತ್ನಿಸಲಿಕ್ಕೆಬೇಕು. ಮನಸು ಸುಧಾರಿಸದ ಹೊರತು ಮನುಷ್ಯನು ಸುಧಾರಿಸುವದಿಲ್ಲ. ಹಾಗೆ ಆತ್ಮಜ್ಞಾನವಾಗದ ಹೊರತು ನಿಜವಾದ ಶಕ್ತಿ ತೇಜಸ್ಸುಗಳು ದೊರೆಯುವದಿಲ್ಲ. ಈ ಆಧ್ಯಾತ್ಮಿಕಮಾರ್ಗವು ನಮಗೆ ತಿಳಿಯಬೇಕಾಗಿದ್ದರೆ ಗೀತಾಗ್ರಂಥದಷ್ಟು ಸುಲಭವೂ ಸ್ಫೂರ್ತಿದಾಯಕವೂ ಇನ್ನಾವುದೂ ಇಲ್ಲ. ಆದುದರಿಂದ ಗೀತೆಯ ಅಭ್ಯಾಸವನ್ನು ನಾವು ರೂಢಮಾಡಿ ಅದರಲ್ಲಿದ್ದ ಬೆಳಕನ್ನು ನಾವು ನಮ್ಮ ಅಂತಃಕರಣದಲ್ಲಿ ಪ್ರತಿಬಿಂಬಿಸಲು ಪ್ರಯತ್ನ ಮಾಡಲಿಕ್ಕೆಬೇಕು.

ಅಂದರೆ ನಮ್ಮ ಜೀವನವು ಉಜ್ವಲವಾಗುವದು, ನಮ್ಮ ಮನಸು ಸಂತೃಪ್ತ ವಾಗುವದು. ನಮ್ಮ ಎದೆಗಾರಿಕೆಯು ಹೆಚ್ಚಿ ನಮ್ಮ ಕೈಯಿಂದ ವೀರಕರ್ಮ ಗಳಾಗುವವು, ನಮ್ಮ ರಾಷ್ಟ್ರವು ಪುನಃ ತನ್ನ ಪೂರ್ವವೈಭವವನ್ನು ಪಡೆ ಯುವದು.

**ನಮ್ಮ ಅನುತ್ಸಾಹವು—** ಗೀತಾಭ್ಯಾಸದ ವಿಷಯದಲ್ಲಿ ನಾವು ಎಷ್ಟು ಮುಂದರಿಯಬೇಕೋ ಅಷ್ಟು ಇನ್ನೂ ಮುಂದರಿದಿಲ್ಲ. ನಾವು ಗೀತಾವಿಷಯಕವಾದ ನಮ್ಮ ಕರ್ತವ್ಯವನ್ನು ಇನ್ನೂ ಮಾಡತೊಡಗಿಲ್ಲ. ಇದು ಇನ್ನೂ ಈಗ ಅರುಣೋದಯವು. ಮಸುಕುಮಸುಕಾಗಿ ಇದು ಬೆಳಕು ಅಹುದೋ ಅಲ್ಲವೋ ಎಂಬಂತೆ ಗೀತೋಪದೇಶದ ಉದಯವು ಆಗುತ್ತಲಿದೆ. ಈ ಉಪದೇಶವೆ ನಮಗೆ ತಾರಕವು, ಇದನ್ನೇ ಕೇಳಿ, ಮನನಮಾಡಿ, ನಿದಿಧ್ಯಾಸಮಾಡಿ ನಮ್ಮ ವೀರಕರ್ತವ್ಯಗಳನ್ನ ಮಾಡಬೇ ಕೆಂದು ಇನ್ನೂ ನಾವು ಮನಗಂಡಿಲ್ಲ. ಆಧ್ಯಾತ್ಮಿಕಜ್ಞಾನವೆ ಎಲ್ಲಕ್ಕೂ ಹೆಚ್ಚಿನದು, ಅದು ಆದಿಶಕ್ತಿಯು, ಅದರಿಂದಲೆ ಮಿಕ್ಕ ಜ್ಞಾನಗಳಿಗೆ ಶೋಭೆಯು ಎಂಬುದು ಇನ್ನೂ ಮನಸಿನಲ್ಲಿ ನಟ್ಟಿಲ್ಲ. ಆಧ್ಯಾತ್ಮಿಕಜೀವ ನದ, ಅದರಲ್ಲಿಯ ಸುಖ ಸೌಂದರ್ಯಗಳ, ಅದರಲ್ಲಿಯ ಸವಿ ಸೊಬಗುಗಳ ನೀರಡಿಕೆಯು ನಮಗೆ ಆಗಬೇಕಾದಷ್ಟು ಇನ್ನೂ ಆಗಿಲ್ಲ. ಗೀತೆಯ ತತ್ವ ಜ್ಞಾನದ ಕಡೆಗೆ ನಮ್ಮ ಮನಸು ಎಷ್ಟು ಎಳೆಯಬೇಕೋ ಅಷ್ಟು ಇನ್ನೂ ಎಳೆಯಲೊಲ್ಲದು. ಇನ್ನೂ ಮನದೊಳಗಣ ಔದಾಸಿನ್ಯದ ಕರೆತೆರೆಯು ಪೂರಾ ಸರಿಸಲ್ಪಟ್ಟಿಲ್ಲ. ಹಸಿದ ಹಸಕೂಸು ಯಾವ ಹಸಿವೆಯಿಂದ, ಯಾವ ಉತ್ಸಾಹದಿಂದ ತಾಯಿಯು ಎಡೆಗೆ ಹರಿದುಹೋಗುವದೋ ಆ ಲವಲವಿಕೆ ಯಿಂದ ಗೀತೆಯ ಕಡೆಗೆ ನಾವು ಇನ್ನೂ ಹೋಗಲಾರಂಭಿಸಿಲ್ಲ.

**ಜನರು ಮತ್ತು ಗೀತೆ—** ನಮ್ಮ ಜನಸಮಾಜದಲ್ಲಿ ಇಂಗ್ಲೀಷ ಕಲಿತು ಸುಶಿಕ್ಷಿತರೆನಿಸಿಕೊಳ್ಳುವವರು, ಹಳೆಯ ಪದ್ಧತಿಯಿಂದ ಸಂಸ್ಕೃತ ಕಲಿತವರು ಮತ್ತೂ ಏನೂ ಕಲಿಯದಿದ್ದ ಅಶಿಕ್ಷಿತರು ಅಥವಾ ನಿರಕ್ಷರರು ಹೀಗೆ ಮೂರು ಗುಂಪುಗಳನ್ನು ಮಾಡಬಹುದು. ೩೨ ಕೋಟಿ ಜನ ರಲ್ಲಿ ಸುಮಾರು ೨ವರೆ ಕೋಟಿ ಜನರು ಮಾತ್ರ ಸಾಕ್ಷರರಿರುವರು. ಉಳಿ ದವರೆಲ್ಲ ನಿರಕ್ಷರರು. ಇನ್ನು ಗೀತೆಯ ಸಂಬಂಧದಿಂದ ಇವರೆಲ್ಲರ ಮನೋ

ವೃತ್ತಿಯನ್ನು ನೋಡುವದು ಅವಶ್ಯವಿದೆ. ಇಂಗ್ಲೀಷ ಕಲಿತವರೆ ಸದ್ಯಕ್ಕೆ ರಾಷ್ಟ್ರದಲ್ಲಿ ಪ್ರಗತಿಪರರಾಗಿರುವರು. ರಾಷ್ಟ್ರದ ಉದ್ಧಾರದ ವಿಚಾರವನ್ನು ಅವರು ಮಾಡುತ್ತಿರುವಷ್ಟು ಮಿಕ್ಕವರು ಮಾಡುವದಿಲ್ಲ. ಇದಲ್ಲದೆ ತಮ್ಮ ಜಾತಿಗೋತಿಗಳನ್ನು ಮೀರಿ ಇಡೀ ಸಮಾಜದ ಸುಧಾರಣೆಯ ಪ್ರಶ್ನೆ ಯನ್ನು ಕೈಕೊಳ್ಳುವವರು ಅವರಲ್ಲಿಯೆ ಹೆಚ್ಚು. ಜಾತಿ ಮುಂತಾದವು ಗಳ ವಿಷಯದಲ್ಲಿ ಅವರ ಧೋರಣವು ಹೆಚ್ಚು ಉದಾರವೂ ಹೆಚ್ಚು ಸಾಮ್ಯ ಭಾವವುಳ್ಳದ್ದೂ ಇರುವದು. ಅವರಲ್ಲಿ ಇತ್ತೀಚೆ ತ್ಯಾಗಿಗಳೂ ಹುಟ್ಟುತ್ತಿ ರುವರು. ಅವರಲ್ಲಿ ಗೀತೆಯ ವಿಷಯಕ್ಕೆ ಅತ್ಯಂತ ಆದರವು ಇರುವದು ನಿಜವು. ಆದರೆ ಅದರ ಗಾಢ ಅಭ್ಯಾಸ ಮಾಡಬೇಕು, ಅದನ್ನು ನಿತ್ಯ ಪಾಠ ಮಾಡಿ ಅದರಲ್ಲಿಯ ಆಧ್ಯಾತ್ಮಿಕತೆಯನ್ನು ತಮ್ಮ ಜೀವನದಲ್ಲಿ ತರಬೇಕು, ಅದನ್ನು ಪ್ರಚಾರಗೊಳಿಸಬೇಕು, ಎಂಬುದು ಇನ್ನೂ ಅವರಿಗೆ ಅಷ್ಟೊಂದು ಹೊಳೆದಿಲ್ಲ. ಗೀತೆಯ ಆಧ್ಯಾತ್ಮಿಕ ಸಂದೇಶದಿಂದ ರಾಷ್ಟ್ರದಲ್ಲಿ ನವಚೈತನ್ಯದ ಸಂಚಾರವಾಗುವದೆಂಬುದನ್ನು ಅವರು ಇನ್ನೂ ಅಷ್ಟು ಮನಗಂಡಿಲ್ಲ. ಆದರೆ ಬೇಗನೆ ಅವರು ಈ ವಿಷಯವನ್ನು ಕೈಕೊಳ್ಳುವ ಲಕ್ಷಣಗಳು ತೋರುತ್ತಲಿವೆ. ಇನ್ನು ಹಳೆಯ ಪದ್ಧತಿಯಿಂದ ಸಂಸ್ಕೃತಾದಿ ವಿದ್ಯೆಗಳ ಅಭ್ಯಾಸ ಮಾಡಿದವರಲ್ಲಿ ಪ್ರಗತಿಪರತ್ವವು ಕಡಿಮೆ. ಅವರಲ್ಲಿ ಗೀತೆಯು ಒಂದು ದೊಡ್ಡ ವಾದವಿಷಯವೆ ಆಗಿದೆ. ದ್ವೈತಾದ್ವೈತದ ಗೊಂದಲವೆ ಹೆಚ್ಚು. ಅದು ದ್ವೈತಾದ್ವೈತದ ಗೊಂದಲವನ್ನು ಮೀರಿದ ಶುದ್ಧ ಅಧ್ಯಾ ತ್ಮವನ್ನು, ಅನುಭವಸಿದ್ಧ ಅಧ್ಯಾತ್ಮವನ್ನು ಉಪದೇಶಿಸುವ ಗ್ರಂಥವು, ಅದನ್ನು ಓದಿ, ಪಠಿಸಿ, ತಮ್ಮ ಜೀವನವನ್ನು ಅಧ್ಯಾತ್ಮಮಯ ಮಾಡಬೇಕು ಎಂಬ ಪ್ರವೃತ್ತಿಯು ಕಡಿಮೆ. ಅವರು ಪ್ರಚಾರವನ್ನು ಕೈಕೊಳ್ಳುವದಂತೂ ಬಹಳೇ ಕಠಿನ. ಯಾಕಂದರೆ ಜಾತಿಗಳ ವಿಷಯಕ್ಕೆ ಅವರಲ್ಲಿ ಉದಾರ ಧೋರಣವು ಕಡಿಮೆ. ಸ್ತ್ರೀ ಶೂದ್ರಾದಿಗಳು— ಅವರ ಮತದಂತೆ ಕ್ಷತ್ರಿ ಯರು ಮತ್ತು ವೈಶ್ಯರು ಸಮಾಜದಲ್ಲಿ ಈಗ ಉಳಿದೇ ಇಲ್ಲ— ಗೀತೆಯನ್ನು ಕೇಳಬಹುದು ಆದರೆ ಪಠಿಸಕೂಡದು ಎಂಬ ಕಲ್ಪನೆಯು ಅವರಲ್ಲಿ ರೂಢ ವಿರುವದು. ಇನ್ನು ಆ ಸ್ತ್ರೀಶೂದ್ರರು ಕೇಳುವಂತೆ ಅಲ್ಲಲ್ಲಿ ಹೋಗಿ ಪುರಾಣ ಹೇಳುವ ಪ್ರವೃತ್ತಿಯೂ ಅವರಲ್ಲಿಲ್ಲ. ಎಲ್ಲಿ ಅವರ ಮತದಂತೆ

ಶ್ರುತಿ ಮತ್ತು ಉಪನಿಷತ್ತುಗಳನ್ನೆ ಹೆಚ್ಚು ಹೇಳುವದು ಅವಶ್ಯವೋ ಅಂಥ ಬ್ರಹ್ಮವೃಂದದಲ್ಲಿ ಅವರು ಪುರಾಣ ಹೇಳುವ ರೂಢಿಯೆ ಹೆಚ್ಚಾಗಿದೆ. ಜನರನ್ನು ಸುಧಾರಿಸಬೇಕು, ಜಗತ್ತನ್ನು ಉದ್ಧರಿಸಬೇಕು ಎಂಬ ಧರ್ಮ ಪ್ರಸಾರಕರ ಪ್ರೇರಣೆಯು ಅವರಲ್ಲಿ ಮಲಿನವಾಗಿದೆ. ತಮ್ಮಷ್ಟಕ್ಕೆ ತಾವು ಇರುವ ಪ್ರವೃತ್ತಿ, ರಾಷ್ಟ್ರೀಯ ದೃಷ್ಟಿಯ ಅಭಾವ, ಸ್ವಾರ್ಥ ಇವು ಹೆಚ್ಚಾಗಿ ಒಡೆದು ಕಾಣುತ್ತಿವೆ. ಆದರೆ ಅವರು ಎಲ್ಲಕ್ಕೂ ಹೆಚ್ಚಿನದೊಂದು ಕಾರ್ಯವನ್ನು ಮಾಡುತ್ತಿರುವರು. ಪೂರ್ವವಿದ್ಯೆಯನ್ನೂ ಪೂರ್ವಪರಂಪರೆಯನ್ನೂ ಕಾದಿಡುತ್ತಿರುವರು. ಅವರ ಸಂಸ್ಕೃತವಿದ್ಯೆ ಮತ್ತು ಆಧುನಿಕ ಸುಶಿಕ್ಷಿತರ ಪ್ರಗಮನಶೀಲತೆ ಇವೆರಡೂ ಕೂಡಿದರೆ ಹಿಂದುಸ್ಥಾನದ ಉದಯಕಾಲವು ಸಮೀಪಿಸಲಿಕ್ಕೆ ತಡವಿಲ್ಲ. ಇನ್ನು ಅಶಿಕ್ಷಿತರ ಮತ್ತು ನಿರಕ್ಷರರ ಹಾಡು ಏನು ಹೇಳುವದು? ಸ್ವತಃ ಅಭ್ಯಾಸ ಮಾಡುವ ಶಕ್ತಿಸಾಧನಗಳೇ ಇಲ್ಲ. ಅಂದಮೇಲೆ ಅವರು ಗೀತೆಯನ್ನು ಓದುವ ಅಥವಾ ತಿಳಿದುಕೊಳ್ಳುವ ಬಗೆ ಏನು? ಹೀಗೆ ಗೀತೆಯ ಸಂಬಂಧದಿಂದ ಸಮಾಜದ ಮನೋರಚನೆಯು ಇರುವದು.

**ಗೀತೆ ಮತ್ತು ಪರದೇಶಸ್ಥರು**—ಯಾವ ಜನರಲ್ಲಿ ಶ್ರೀಕೃಷ್ಣನ ಜನ್ಮವಾಯಿತೊ, ಯಾವ ಭೂಮಿಯ ಧೂಲಿಯನ್ನು ಅವನು ತನ್ನ ಚರಣಕಮಲಗಳಿಂದ ಪವಿತ್ರ ಮಾಡಿದನೊ, ಯಾವ ರಾಷ್ಟ್ರದಲ್ಲಿ ಹುಟ್ಟಿ, ಆಡಿನೋಡಿ ಆಳಿಬಾಳಿ, ಕೇವಲ ಆಧ್ಯಾತ್ಮಿಕಜೀವನದ ಗುಟ್ಟನ್ನು ಗುರುತಿಸಿ ಅದರಂತೆ ಆಚರಿಸಿ ಅದನ್ನು ಗೀತಾರೂಪದಿಂದುಪದೇಶಿಸಿದನೊ, ಪಾರ್ಥಿವ ದೇಹವನ್ನು ಬಿಟ್ಟು ಅಂತರ್ಧಾನ ಹೊಂದಿದರೂ ಯಾವ ರಾಷ್ಟ್ರದ ಚಿದಾಕಾಶದಲ್ಲಿ ಶ್ರೀಕೃಷ್ಣನು ದೈದೀಪ್ಯಮಾನವಾದ ದಿವ್ಯಜ್ಯೋತಿಯಂತೆ ಇನ್ನೂ ಬೆಳಗುತ್ತಿರುವನೊ ಆ ರಾಷ್ಟ್ರದವರು, ನಾವು ಭಾರತೀಯರು, ಗೀತೆಯ ಕಡೆಗೆ ಎಷ್ಟೋ ದುರ್ಲಕ್ಷ ಮಾಡಿರುವೆವು. ಇದು ಶೋಚನೀಯವು. ಆದರೆ ಅದರಲ್ಲಿಯ ದಿವ್ಯಮಧುವು ಪರರಾಷ್ಟ್ರದವರನ್ನು ತನ್ನ ಕಡೆಗೆ ಸೆಳಕೊಂಡು ಅವರನ್ನು ತಲ್ಲೀನ ಮಾಡಿ ಬಿಡುತ್ತಿರುವದು. ಆಯಾ ರಾಷ್ಟ್ರದವರು ಭಿನ್ನ ಧರ್ಮೀಯರು ಅದನ್ನು ತಮ್ಮ ಭಾಷೆಗೆ ಪರಿವರ್ತಿಸಿ ಅದರ ಅಭ್ಯಾಸವನ್ನು ನಡೆಸಿರುವರು. ಮ್ಯಾಕ್ಸಮುಲ್ಲರ ಮುಂತಾದ ಪಾಶ್ಚಾತ್ಯ ವಿದ್ವಾಂಸರು

ಸಂಸ್ಕೃತದ ಜ್ಞಾನಭಾಂಡಾರವನ್ನು ತಮ್ಮ ಜನರಿಗೆ ತೋರಿಸಿದಂದಿನಿಂದ ಗೀತೆಯು ಎಲ್ಲರಿಗೂ ಹೆಚ್ಚೆಚ್ಚು ಪ್ರಿಯವಾಗುತ್ತ ನಡೆದಿರುವದು. ವಿವೇಕಾನಂದರು ನಮ್ಮ ಅಧ್ಯಾತ್ಮದ ಧ್ವಜವನ್ನು ಅಮೇರಿಕೆಯಲ್ಲಿಯೂ ಊರಿರುವರು. ಸ್ವಿತ್ಸರಲಂಡದ ರಾಜಧಾನಿಯೂ ಸಕಲ ರಾಷ್ಟ್ರಗಳ ಸಂಘದ ಮುಖ್ಯ ಕಾರ್ಯಾಲಯದ ಸ್ಥಾನವೂ ಆದ ಜಿನೆವಾದಲ್ಲಿ ಪ್ರತಿಯೊಂದು ಪುಸ್ತಕದ ಅಂಗಡಿಯಲ್ಲಿ ೨ ವರೆ ರೂಪಾಯಿಗೊಂದು ಸಾರ್ಥಭಗವದ್ಗೀತೆಯು ಸಿಗುತ್ತಿರುವದೆಂದೂ ವಾರಸಾದಲ್ಲಿ (ಪೋಲಂಡ) ಮೊನ್ನೆ ಮೊನ್ನೆ ರಶಿಯನ್ ಭಾಷೆಯಲ್ಲಿ ಪರಿವರ್ತಿಸಿದ ಗೀತೆಯು ಪ್ರಸಿದ್ಧವಾಗಿ ೮ ರೂಪಾಯಿಗೊಂದರಂತೆ ಮಾರುತ್ತಿರುವದೆಂತಲೂ ಮೊನ್ನೆ ಇಲ್ಲಿಗೆ ಬಂದ ಗೀತಾ ಪರೀಕ್ಷಾಮಂಡಲದ ಕಾರ್ಯದರ್ಶಿಗಳಾದ ರಾಘವದಾಸ ಎಂಬವರು ನಮಗೆ ಹೇಳಿದರು. ಇದರ ಮೇಲಿಂದ ಪರದೇಶದವರು, ಪರಧರ್ಮೀಯರು, ಗೀತೆಯನ್ನು ಎಷ್ಟು ಆಸ್ಥೆಯಿಂದ ಅಭ್ಯಸಿಸುತ್ತಿರುವರೆಂಬದು ವ್ಯಕ್ತವಾಗುತ್ತಿದ್ದು ನಾವು ಮಾತ್ರ ೨ ಆಣೆಗೆ ಸಿಕ್ಕುವ ಭಗವದ್ಗೀತೆಯನ್ನು ಕೊಂಡು ಅದು ಏನಿದೆ ಎಂಬುದನ್ನು ಸಹ ಕಣ್ಣೆತ್ತಿ ನೋಡುವದಿಲ್ಲ! ಆಧ್ಯಾತ್ಮಿಕ ತತ್ವಜ್ಞಾನವು, ಆಧ್ಯಾತ್ಮಿಕಜೀವನದ ನಿಯಮಗಳು, ಸಕಲ ಮಾನವಕೋಟಿಗೂ ಒಂದೇ ಇರುವವು. ಅಂದಮೇಲೆ ಯಾವ ಗೀತೆಯಲ್ಲಿ ಆ ಜ್ಞಾನವೂ ಆ ಜ್ಞಾನಮಾರ್ಗವೂ ಅತ್ಯಂತ ಸ್ಪಷ್ಟ, ಸರಲ, ಸುಲಭ ಭಾಷೆಯಲ್ಲಿ ಅಧಿಕಾರಯುಕ್ತವಾಣಿಯಿಂದ ಹೇಳಲ್ಪಟ್ಟಿದೆಯೋ ಅದು ಇಷ್ಟು ಜಗತ್ಪ್ರಿಯವಾಗುವದೇನಾಶ್ಚರ್ಯವು? ಹೀಗೆ ಆ ಗ್ರಂಥವು ಪ್ರಚಾರಗೊಳ್ಳುತ್ತಿರಲು ನಾವು ಮಾತ್ರ ಅಪ್ಪುಗೈ ಹಾಕಿಕೊಂಡು ಜ್ಞಾನರಹಿತವಾದ ವೃಥಾಭಿಮಾನವನ್ನು ಅಥವಾ ಅಯಥಾರ್ಥ ಜ್ಞಾನವಿಶಿಷ್ಟ ದುರಭಿಮಾನವನ್ನು ತೋರಿಸುವದು ಲಾಂಛನಾಸ್ಪದವು.

**ನಮ್ಮ ಕರ್ತವ್ಯವು—** ನಮ್ಮ ರಾಷ್ಟ್ರವು ಮೇಲೆ ವರ್ಣಿಸಿದಂತೆ ಅನೇಕ ರೀತಿಯಿಂದ ಅಧೋಗತಿಗಿಳಿದಿದ್ದರೂ ಈಗ ಉದಯೋನ್ಮುಖವಾಗಿದೆ. ಶ್ರೇಯಸ್ಸನ್ನು ಪಡೆಯಬೇಕು ಯೋಗ್ಯವಾದ ಕರ್ತವ್ಯವನ್ನು ಮಾಡಬೇಕು ಎಂಬ ಅರಿವು ನಮ್ಮ ಜನರಲ್ಲಿ ಹುಟ್ಟುತ್ತಲಿದೆ. ಅರ್ಜುನನಂತೆ 'ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಮ್'', ನಾನು ನಿನ್ನ ಶಿಷ್ಯನು,

ಶರಣಾಗತನು, ನನಗೆ ಶ್ರೇಯಸ್ಸಿನ ಹಾದಿಯನ್ನು ತೋರಿಸೆಂದು ರಾಷ್ಟ್ರವು ಮೊಗ್ಗಾಲೂರಿ ಕುಳಿತಿದೆ. ರಾಷ್ಟ್ರವು ಈ ವೃತ್ತಿಯಲ್ಲಿರುವಾಗ ಅದರ ಕೈಯಲ್ಲಿ ಸಕಲ ವೇದಸಾರವಾದ, ಉಪನಿಷದ್ರಸವಾದ, ಜ್ಞಾನತತ್ವವಾದ, ಯೋಗಾಮೃತವಾದ, ಶ್ರೀಮದ್ಭಗವದ್ಗೀತೆಯನ್ನು ಕೊಡುವದು ಉಚಿತವು, ಯೋಗ್ಯವು, ಅವಶ್ಯವು. ಆದುದರಿಂದ ಗೀತೆಯನ್ನು ಓದಿ, ತಿಳಿದು, ಅದರಂತೆ ಆಚರಿಸಬಲ್ಲವರು ಓದಿ ತಿಳಿದುಕೊಳ್ಳುವವರಿಗೆ ಅದನ್ನು ಹೇಳಬೇಕು; ಓದಿ ತಿಳಿದವರು ಓದುವವರಿಗೆ ಹೇಳಬೇಕು; ಓದುವವರು ಓದುಬಾರದವರಿಗೆ ಹೇಳಬೇಕು. ಹೀಗೆ ಕ್ರಮದಿಂದ ಗೀತೆಯ ಘೋಷವು ಎಲ್ಲೆಲ್ಲಿಯೂ ದುಮುದುಮಿಸುವಂತೆ ಮಾಡಿ ರಾಷ್ಟ್ರದ ಚಿತ್ತವನ್ನು ಅಧ್ಯಾತ್ಮಶಾಸ್ತ್ರದ ಧ್ವನಿಯಿಂದ ಎಚ್ಚರಗೊಳಿಸಿ ನಿಯತವಾದ ಕರ್ಮವನ್ನು ಕೃಷ್ಣಾರ್ಪಣ ಬುದ್ಧಿಯಿಂದ ಮಾಡುವ ಪ್ರವೃತ್ತಿಯನ್ನು ಅದರಲ್ಲಿ ಹುಟ್ಟಿಸಬೇಕು. ಇದು ಸಕಲರ ಕರ್ತವ್ಯವು. ಇದನ್ನು ನಾವು ಮಾಡಿಯೇ ತೀರಬೇಕು ಎಂದು ನನ್ನ ನಮ್ರ ಭಾವನೆಯು.

---

## ೩. ಗೀತೆಯೂ ಕರ್ನಾಟಕವೂ.

**ಸೂಚನೆ—** ಗೀತಾಗ್ರಂಥವು ಇಡೀ ಆರ್ಯಾವರ್ತದಲ್ಲಿ ಸರ್ವಮಾನ್ಯವಾಗಿ ಮೆರೆಯಿತು, ಇನ್ನೂ ಮೆರೆಯುತ್ತಿರುವದು, ಮುಂದೆ ಮೆರೆಯುವದು. ಆದರೆ ಗೀತೆಗೂ ಕರ್ನಾಟಕಕ್ಕೂ ಇದ್ದ ನಿಕಟ ಸಂಬಂಧವನ್ನೂ ಇಲ್ಲಿಯ ಗೀತೆಯ ಪರಂಪರೆಯನ್ನೂ ನೋಡಿ ಗೀತೆಯ ಅಭ್ಯಾಸವು ಈಗ ಇಲ್ಲಿ ಪ್ರಚಲಿತವಾಗುವದು ಎಷ್ಟು ಅವಶ್ಯಕವೆಂಬುದನ್ನು ವಿಚಾರಿಸುವದು ಅಗತ್ಯವಿದೆ. ಪುರಾತನಕಾಲದಿಂದ ಕರ್ನಾಟಕಸ್ಥರು ಗೀತೆಯ ಅಭ್ಯಾಸವನ್ನು ಹೇಗೆ ಮಾಡುತ್ತ ಬಂದಿರುವರು, ಗೀತೋಪದೇಶವನ್ನು ಪ್ರತ್ಯಕ್ಷ ಆಚರಣೆಯಲ್ಲಿ ಹೇಗೆ ಇಳಿಸುತ್ತ ಬಂದಿರುವರು ಹಾಗೂ ಕನ್ನಡ ವಾಙ್ಮಯದಲ್ಲಿ ಗೀತೆಯೂ ಗೀತೆಯ ವಾಣಿಯೂ ಹೇಗೆ ಮತ್ತು ಎಷ್ಟು ಬೆರೆತು

ಏಕರಸವಾಗಿರುವದು ಇದನ್ನು ವಿವರಿಸುವದೇ ಈ ಪ್ರಕರಣದ ವಿಷಯವಾಗಿದೆ. ಗೀತೆಯ ಅಭ್ಯಾಸ ಮಾಡುವದು, ಗೀತೆಯ ವಿಷಯಕ್ಕೆ ಬರೆಯುವದು ಅಥವಾ ಗೀತಾಪ್ರವಚನಗಳನ್ನು ಕೊಡುವದು, ಗೀತೆಯಂತೆ ಆಚರಿಸುವದು ಇದು ಕರ್ನಾಟಕಸ್ಥರ ಪೂರ್ವಪರಂಪರೆಯೇ ಇರುವದೆಂಬುದು ಎಲ್ಲರಿಗೂ ಈ ವಿವೇಚನದಿಂದ ಸ್ಪಷ್ಟವಾಗುವದು. ಈ ವಿಷಯವನ್ನು ಇಲ್ಲಿ ಸಂಪೂರ್ಣವಾಗಿ ವಿವೇಚಿಸುವದು ಸಾಧ್ಯವಿಲ್ಲ. ಆದುದರಿಂದ ಒಂದೆರಡು ನಿದರ್ಶಕವಾದ ಉದಾಹರಣೆ ಮಾತ್ರ ಕೊಟ್ಟು ಸಂಕ್ಷೇಪದಿಂದ ಈ ಕಾರ್ಯವನ್ನು ಮಾಡಬೇಕಾಗಿದೆ.

**ವಿಷಯವಿಭಾಗವು—** ಗೀತೆಯ ಮತ್ತು ಕರ್ನಾಟಕದ ಸಂಬಂಧವನ್ನು ಬೇರೆ ಬೇರೆ ರೀತಿಯಿಂದ ವಿಭಾಗಿಸಿ ವರ್ಣಿಸಬಹುದು. ಇಲ್ಲಿ ನಾವು, ಕರ್ನಾಟಕದಲ್ಲಿ ಗೀತೆಯ ಅಭ್ಯಾಸವು ಮತ್ತು ಅದನ್ನು ಕುರಿತು ಬರೆದ ಟೀಕೆ ಟಿಪ್ಪಣಿಗಳು, ಕರ್ನಾಟಕದಲ್ಲಿ ಗೀತೆಯಿಂದ ಸ್ಫೂರ್ತಿಗೊಂಡು ಅದರಂತೆ ಆಚರಿಸಿದವರು ಮತ್ತು ಕನ್ನಡ ವಾಙ್ಮಯದಲ್ಲಿ ಗೀತೆಯ ಅವತರಣವು, ಹೀಗೆ ಮೂರು ದೃಷ್ಟಿಯಿಂದ ಈ ವಿಷಯವನ್ನು ವಿಚಾರಿಸಬಹುದು. ಈ ಮೂರೂ ವಿಭಾಗಗಳನ್ನು ಬೇರೆ ಬೇರೆಯಾಗಿ ವಿವರಿಸಿ ಹೇಳುವದೇ ಉಚಿತವಾಗುವದು. ಇನ್ನು ಹೀಗೆ ಮಾಡುವಾಗ ಒಂದೇ ಉಲ್ಲೇಖವು ವಾಙ್ಮಯದಲ್ಲಿ ಅವತರಣ ಮತ್ತು ಆಚರಣೆ ಹೀಗೆ ಎರಡು ಮೂರು ವಿಭಾಗಗಳಿಗೆ ಒಮ್ಮೆಲೆ ಸಂಬಂಧಿಸಿರಬಹುದು. ಅಂಥಲ್ಲಿ ಪುನರುಕ್ತಿದೋಷವಾಗಬಹುದು, ಆದರೆ ಅದಕ್ಕುಪಾಯವಿಲ್ಲ.

**ಗೀತೆಯ ಅಭ್ಯಾಸವೂ ಟೀಕೆ ಟಿಪ್ಪಣಿಗಳೂ—** ಈ ನಮ್ಮ ಕರ್ನಾಟಕದಲ್ಲಿ ಗೀತೆಯ ಅಭ್ಯಾಸವು ಎಷ್ಟರಮಟ್ಟಿಗೆ ನಡೆಯುತ್ತಿತ್ತು, ಅದನ್ನು ವಿಶೇಷವಾಗಿ ಯಾರು ಅಭ್ಯಸಿಸುತ್ತಿದ್ದರು ಎಂಬುದು ಅದರ ಮೇಲೆ ಇಲ್ಲಿ ಬರೆಯಲ್ಪಟ್ಟ ಅನೇಕ ಟೀಕೆ ಟಿಪ್ಪಣಿಗಳ ಮೇಲಿಂದಲೂ ಗದ್ಯಪದ್ಯಮಯ ಅನುವಾದಗಳ ಮೇಲಿಂದಲೂ ಸಾರಸಂಗ್ರಹಗಳ ಮೇಲಿಂದಲೂ ಸಹಜವಾಗಿ ತಿಳಿಯುವಂತಿದೆ. ಗೀತೆಯು ವೈದಿಕಧರ್ಮದ ಪ್ರಸ್ಥಾನತ್ರಯಿಯಲ್ಲಿ ಪ್ರಮುಖವಾಗಿರುವದರಿಂದ ಅದು ಭರತಖಂಡದಲ್ಲಿರುವಂತೆ ಕರ್ನಾಟಕದಲ್ಲಿಯೂ ಅತ್ಯಂತ ವಂದನೀಯವಾದ ಗ್ರಂಥವಾಗಿತ್ತೆಂಬು

ದನ್ನು ಬೇರೆ ಹೇಳಲಿಕ್ಕೆ ಬೇಡ. ಆದರೆ ಕರ್ನಾಟಕದ ವಿಶೇಷವೇನೆಂದರೆ ಆಚಾರ್ಯತ್ರಯರಲ್ಲಿಬ್ಬರು ಇಲ್ಲಿ ಹುಟ್ಟದಿದ್ದರೂ ಅವರ ಮುಖ್ಯ ಮುಖ್ಯ ಅವತಾರಕಾರ್ಯಗಳೆಷ್ಟೋ ಇಲ್ಲಿಯೆ ಆಗಿರುವವು. ಶಂಕರಾಚಾರ್ಯರು ಕೇರಲದವರಿದ್ದರೂ ಅವರು ತಮ್ಮ ಆದಿ ಮತ್ತು ಎಲ್ಲಕ್ಕೂ ಶ್ರೇಷ್ಠವಾದ ಪೀಠವನ್ನು ಶೃಂಗೇರಿಯಲ್ಲಿಯೆ ಸ್ಥಾಪಿಸಿದರು. ಕದಾಚಿತ್ ಕರ್ನಾಟಕದಲ್ಲಿಯೆ ಕುಳಿತು ಅವರು ಗೀತೆಗೆ ತಮ್ಮ ಅದ್ವಿತೀಯವಾದ ಶೈಲಿಯಿಂದ ಭಾಷ್ಯವನ್ನು ಬರೆದಿರಬಹುದು. ರಾಮಾನುಜಾಚಾರ್ಯರು ತಮಿಳರಿದ್ದರೂ ಅವರಿಗೆ ದ್ವಾರಸಮುದ್ರದ ಹೊಯ್ಸಳ ಬಲ್ಲಾಳರ ಆಶ್ರಯವು ದೊರೆತದ್ದರಿಂದಲೆ ಅವರ ಧರ್ಮಪ್ರವರ್ತನಕಾರ್ಯಕ್ಕೆ ಅನುಕೂಲವಾಯಿತು. ಮಧ್ವಾಚಾರ್ಯರಂತೂ ಉಡುಪಿಯವರು. ಶುದ್ಧ ಕನ್ನಡಿಗರು. ಮುಖ್ಯವಾದ ಮಧ್ವಪೀಠಗಳೆಲ್ಲ ಕರ್ನಾಟಕದಲ್ಲಿಯೆ ಇರುವವು. ಅವರು ಕರ್ನಾಟಕದಲ್ಲಿಯೆ ಹುಟ್ಟಿ ಬಾಳಿ ಬೆಳೆದು ಆಚಾರ್ಯಪದವಿಯನ್ನು ಹೊಂದಿದ ಮಹಾಮಹಿಮರಿರುವದರಿಂದ ಅವರು ಬರೆದ ಭಾಷ್ಯವಂತೂ ಶುದ್ಧ ಕನ್ನಡಿಗರದೆಂದು ನಾವು ಒಳ್ಳೆ ಅಭಿಮಾನದಿಂದ ಹೇಳಬಹುದು. ಈ ರೀತಿ ಗೀತೆಯ ಮೇಲೆ ಬರೆಯಲ್ಪಟ್ಟ ಮೂರು ಮುಖ್ಯ ಭಾಷ್ಯಗಳಲ್ಲಿ ಮಧ್ವಭಾಷ್ಯದ ಸಂಪೂರ್ಣ ಶ್ರೇಯಸ್ಸು ಮತ್ತು ಶಂಕರರಾಮಾನುಜರ ಭಾಷ್ಯಗಳ ಶ್ರೇಯದ ಬಹುಭಾಗವು ಕರ್ನಾಟಕಕ್ಕೆ ಬರುವದೆಂಬುದನ್ನು ನಾವು ನೆನಪಿನಲ್ಲಿಡಬೇಕು. ಈ ಭಾಷ್ಯಗಳೆಂದರೆ ಸಾಮಾನ್ಯ ಭಾಷ್ಯಗಳಲ್ಲ. ತತ್ವಜ್ಞಾನದಲ್ಲಿ ಹೊಸ ಕ್ರಾಂತಿಯನ್ನುಂಟುಮಾಡಿ ಮೂರು ಬೇರೆ ಬೇರೆ ಮತಗಳನ್ನು ಪ್ರಸ್ಥಾಪಿಸುವ ಸಾಮರ್ಥ್ಯವು ಈ ಭಾಷ್ಯಗಳಲ್ಲಿತ್ತು. ಬರಿಯ ತತ್ವಜ್ಞಾನದಲ್ಲಿ ಕ್ರಾಂತಿ ಮಾಡಿ ಆಚಾರ್ಯರು ಸುಮ್ಮನಾಗಲಿಲ್ಲ. ಆದರೆ ಅದಕ್ಕನುಗುಣವಾಗಿ ಆಚಾರವಿಚಾರಗಳಲ್ಲಿ ಸಹ ದೊಡ್ಡ ಬದಲಾವಣೆಗಳನ್ನು ಮಾಡುವ ಧರ್ಮಪ್ರವರ್ತಕರ ಪ್ರೇರಣೆಯೂ ಬಲವೂ ಈ ಭಾಷ್ಯಕಾರರಲ್ಲಿತ್ತು. ಇಂಥ ಶ್ರೇಷ್ಠಪ್ರತಿಯ ಒರ್ವ ಮಹಾತ್ಮರನ್ನು ಕರ್ನಾಟಕ ಮಾತೆಯೆ ಹೆತ್ತಳು. ಇನ್ನಿಬ್ಬರನ್ನು ಸಲಹಿ ಮನ್ನಿಸಿ ಇಂಬಾದ ಎಡೆಗೊಟ್ಟು ಅವರ ಕಾರ್ಯಕ್ಕೆ ಸಹಾಯಕಳಾದಳು. ಶಂಕರರಾಮಾನುಜ ಮಧ್ವರು ಆದ್ಯ ಭಾಷ್ಯಕಾರರಾದರು. ಇನ್ನು ಮುಂದೆ ಶೃಂಗೇರೀ ಪೀಠದ

ಸುರೇಶ್ವರಾಚಾರ್ಯರು ಕರ್ನಾಟಕಸ್ಥರು. ವಿದ್ಯಾರಣ್ಯರಂತೂ ಶುದ್ಧ ಕನ್ನಡಿಗರು. ಇಬ್ಬರೂ ಅದ್ವಿತೀಯ ಪಂಡಿತರು. ಸುರೇಶ್ವರಾಚಾರ್ಯರ 'ನೈಷ್ಕರ್ಮ್ಯಸಿದ್ಧಿ' ಎಂಬ ನಿಷ್ಕಾಮಕರ್ಮವನ್ನು ಪ್ರತಿಪಾದಿಸುವ ಗ್ರಂಥವು ಗೀತೆಯ ಪ್ರತ್ಯಕ್ಷ ಟೀಕೆ ಇಲ್ಲದಿದ್ದರೂ ಅದು ಗೀತೆಯ ಅಭ್ಯಾಸ, ಮನನ, ನಿದಿಧ್ಯಾಸದಿಂದ ಸ್ಫೂರ್ತಿಗೊಂಡು ಬರೆದ ಗ್ರಂಥವೇ ಇರುವದು ಎಂದು ಕಂಠೋಕ್ತವಾಗಿ ಹೇಳಬಹುದು. ವಿದ್ಯಾರಣ್ಯರು ಅನೇಕ ಬೇರೆ ಗ್ರಂಥಗಳನ್ನು ಬರೆದರು; ಅವುಗಳಲ್ಲಿ ಅವರ ಗೀತಾಭ್ಯಾಸವು ಪ್ರಕಟವಾಗುವದು. ಇದಲ್ಲದೆ ವಿದಾರಣ್ಯರು ಪಂಚದಶಿಯಲ್ಲಿ ಅನೇಕ ಕಡೆಗೆ ಗೀತೆಯ ವಾಕ್ಯಗಳನ್ನು ಇದ್ದಕ್ಕಿದ್ದ ಹಾಗೆ ಉದಹರಿಸಿರುವರು. ಉದಾಹರಣಾರ್ಥವಾಗಿ ತೃಪ್ತಿದೀಪದಲ್ಲಿ 'ಅನನ್ಯಾಶ್ಚಿಂತಯಂತೋ ಮಾಂ........' ಬ್ರಹ್ಮಾನಂದೇ ವಿದ್ಯಾನಂದಃ ಎಂಬ ಅಧ್ಯಾಯದಲ್ಲಿ 'ಯಥೈಧಾಂಸಿ ಸಮಿದ್ಧೋಽಗ್ನಿಃ' ಮತ್ತು 'ಯಸ್ಯನಾಹಂಕೃತೋ ಭಾವಃ' ಎಂಬ ಗೀತಾಮಂತ್ರಗಳು ಬಂದಿವೆ. ಮಧ್ವಪೀಠದ ಪರಂಪರೆಯಲ್ಲಿ ಎರಗೊಳದ ಗುಹೆಯಲ್ಲಿ (ನಿಜಾಮಕರ್ನಾಟಕ) ಕುಳಿತು ಗ್ರಂಥ ಬರೆದ ಟೀಕಾರಾಯರು ಅಸಾಮಾನ್ಯ ಮಾನ್ಯತೆಯನ್ನು ಪಡೆದಿರುವರು. ಗೀತೆಯ ವಿಷಯದಲ್ಲಿ ಅವರು ಮಾಡಿದ ಮಹಾಕಾರ್ಯವು, ಅವರ 'ಪ್ರಮೇಯ ದೀಪಿಕೆ' ಎಂಬ ಗ್ರಂಥವು, ಮಧ್ವರಾಯರ ಟೀಕೆಗಿಂತ ಹೆಚ್ಚು ಸುಲಭ, ವಿಸ್ತೃತ ಮತ್ತು ಲೋಕಪ್ರಿಯವಾಗಿ ಅವರು ಸಮಾಜಕ್ಕೆ ಈ ವಿಷಯದಲ್ಲಿ ಮಧ್ವರಾಯರಷ್ಟೆ ಪೂಜ್ಯರಾಗಿದ್ದಾರೆ. ಇನ್ನು ಕನ್ನಡ ಅನುವಾದ ಅಥವಾ ಟೀಕೆಗಳಲ್ಲಿ ನಾಗರಸ ಕವಿಯು ಭಾಮಿನೀಷಟ್ಪದಿಯಲ್ಲಿ ಬರೆದ ಸಮಶ್ಲೋಕಿಯಿರುವ ಕನ್ನಡ ಭಗವದ್ಗೀತೆ, ಕುಮಾರವ್ಯಾಸನ ಭಾರತದಲ್ಲಿ ಪ್ರಸಿದ್ಧವಾದ ಅರ್ಧಭಾಮಿನಿ ಷಟ್ಪದಿ ವೃತ್ತದಲ್ಲಿ ಬರೆದ ಕನ್ನಡ ಗೀತೆ ಇವು ಮುಖ್ಯವಾದವುಗಳು. ಕವಿಚರಿತೆಕಾರರು ಇನ್ನೂ ಕೆಲವನ್ನು ವಿವರಿಸಿದ್ದಾರೆ, ಆದರೆ ಅವೆಲ್ಲ ಈಗ ಉಪಲಬ್ಧವಾಗಿಲ್ಲ.

**ಆಚಾರ್ಯರೂ ಆಚರಣೆಯೂ**— ಮೇಲೆ ಗೀತೆಯ ಅಭ್ಯಾಸ ಮನನಾದಿ ಮಾಡುವ ದೃಷ್ಟಿಯಿಂದಲೂ ಅದರ ಮೇಲೆ ಟೀಕೆ ಮುಂತಾದವುಗಳನ್ನು ಬರೆಯುವ ದೃಷ್ಟಿಯಿಂದಲೂ ಹೇಳಿದ್ದಾಯಿತು. ಇನ್ನು

ಗೀತೆಯು ಕರ್ನಾಟಕದಲ್ಲಿ ಬರಿಯ ಅಭ್ಯಾಸಗ್ರಂಥವಾಗಿತ್ತೋ ಅಥವಾ ಅದು ಪ್ರತ್ಯಕ್ಷ ಆಚರಣೆಯಲ್ಲಿತ್ತೋ ಎಂಬುದನ್ನು ನೋಡುವದು ಹೆಚ್ಚು ಮಹತ್ವದ್ದಾಗಿದೆ. ಹೀಗೆ ನೋಡಿದರೆ ಮತತ್ರಯಸ್ಥಾಪಕರೂ ವಿಶೇಷತಃ ಕನ್ನಡಿಗರಾದ ಮಧ್ವಾಚಾರ್ಯರು ಗೀತೆಯ ದಿವ್ಯೋಪದೇಶದಿಂದಲೆ ಪ್ರೇರಿತರಾಗಿದ್ದರೆಂದು ಹೇಳಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಆಚಾರ್ಯರು ದ್ವೈತ ಅದ್ವೈತ ವಿಶಿಷ್ಟಾದ್ವೈತವೆಂಬ ಯಾವದೆ ರೀತಿಯಿಂದ ಗೀತೆಯ ಅರ್ಥವನ್ನು ಹಚ್ಚಿದ್ದರೂ ಅವರು ತಾವು ಮಾಡಿದ ಅರ್ಥದಂತೆ ಆಚರಿಸುತ್ತಿದ್ದರೊ ಇಲ್ಲವೊ ಇದೊಂದೇ ನಮ್ಮೆದುರಿಗೆ ಇರುವ ಪ್ರಶ್ನೆಯು. ಶಂಕರಾಚಾರ್ಯರು ಗೀತೆಯ ಅಭ್ಯಾಸ ಮಾಡು, ಎಂದು ಎಲ್ಲರಿಗೂ ಉಪದೇಶ ಮಾಡಿದರು. 'ಭಗವದ್ಗೀತಾ ಕಿಂಚಿದಧೀತಾ........ತಸ್ಯ ಯಮಃ ಕಿಂ ಕುರುತೇ ಚರ್ಚಾಂ' ಎಂದು ಭಗವದ್ಗೀತೆಯ ಮಹತ್ವವನ್ನು ಅವರು ಹೇಳಿದರು. 'ತತ್ತದಖಿಲಂ ಶಂಭೋ ತವಾರಾಧನಂ' ಎಂದು ಅವರು ಹೇಳಿದುದು ಕೃಷ್ಣಾರ್ಪಣಬುದ್ಧಿಯ ಪರಮಾವಧಿಯನ್ನು ತೋರುವದು. 'ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ' ಎಂದು ಸುರುವಾಗ ಮಧ್ವಾಚಾರ್ಯರ ಕಣ್ಣೆದುರಿಗೆ 'ಸ್ವಕರ್ಮಣಾ ತಮಭ್ಯರ್ಚ್ಯ', 'ಮತ್ಕರ್ಮಕೃನ್ಮತ್ಪರಮೋ' 'ಯತ್ಕರೋಷಿ............ ತತ್ಕುರುಷ್ವ ಮದರ್ಪಣಂ' ಎಂಬ ಗೀತಾವಚನಗಳಿದ್ದವೆಂದು ಸ್ಪಷ್ಟವಾಗಿ ಕಾಣಿಸುವದು. ಇದಕ್ಕೂ ಹೆಚ್ಚಿನ ಮತ್ತು ಅವರ ಆಯುಷ್ಯದ ಸಾರರೂಪವಾಗಿರುವ, ಅವರ ಉಪದೇಶದ ತಿರುಳಾದ, 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ' ಎಂಬ ಅವರ ಮಹಾವಾಕ್ಯದಲ್ಲಿ ಗೀತೆಯ ಗುಟ್ಟೇ ರೂಪುಗೊಂಡಿರುವದೆಂದು ಹೇಳಬಹುದು. ಜೀವನದ ಪ್ರತಿ ಕ್ಷಣದಲ್ಲಿಯೂ ಗೀತೋಪದೇಶದ ಪ್ರತೀತಿಯನ್ನು ಹೊಂದುತ್ತಿರುರುವದರಿಂದಲೆ ಅವರ ಬಾಯಿಂದ ಈ ಮೇಲಿನ ಮಂತ್ರೋಚ್ಚಾರವಾಯಿತೆಂದು ಹೇಳಬೇಕಾಗಿದೆ. ಶ್ರೇಷ್ಠ ಕರ್ಮಯೋಗಿಗಳಾದ ಟೀಕಾರಾಯರು ಸಮರ್ಥಿಸಿದ 'ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಂ' ಎಂಬ ವಚನವಾದರೂ ಗೀತೆಯ ಸಾರಸರ್ವಸ್ವವೇ ಇರುವದು. ಗೀತಾಜ್ಯೋತಿಯ ಬಿಂಬವೆ ಟೀಕಾರಾಯರ ಮನದಲ್ಲಿ ಬಿಂಬಿಸಿ ಟೀಕಾರೂಪ

ದಿಂದ ಹೊರಬಿದ್ದಿರುವದೆಂಬುದು ಸ್ಪಷ್ಟವಿದೆ. ಗೀತೆಯ ಅಭ್ಯಾಸ, ಅದರ ಸತ್ಯದ ಪ್ರತೀತಿ, ಅದರ ಪ್ರತ್ಯಕ್ಷ ಆಚಾರಣ ಇವು ಮೂರೂ ಆಚಾರ್ಯ ತ್ರಯರಲ್ಲಿಯೂ, ಅವರ ಪರಂಪರೆಯಲ್ಲಿಯ ಸುರೇಶ್ವರಾಚಾರ್ಯರು, ವಿದ್ಯಾರಣ್ಯರು ಮತ್ತು ಟೀಕಾರಾಯರು ಇವರೆಲ್ಲರಲ್ಲಿಯೂ ಕಂಡುಬರುವವು. ವಿದ್ಯಾರಣ್ಯರ ಬಗ್ಗೆ ಒಂದು ವಿಶೇಷ ಸಂಗತಿಯೇನಂದರೆ ಅವರು ಧರ್ಮಸ್ಥಾಪಕರಿದ್ದಂತೆ ರಾಜ್ಯಸ್ಥಾಪಕರೂ ಇದ್ದರು, ಮತ್ತು ಈ ತಮ್ಮ ಮಹಾಕಾರ್ಯವನ್ನು 'ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕವು'' ಎಂಬ ವಾಕ್ಯದಿಂದ ಸಮರ್ಥಿಸಿ 'ಲೋಕಸಂಗ್ರಹ ಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ' ಎಂಬುದನ್ನು ಪ್ರತ್ಯಕ್ಷ ಆಚರಿಸಿ ತೋರಿಸಿದರು.

**ಗೀತಾಚರಣೆಯೂ ಕವಿಗಳೂ—** ಇನ್ನು 'ಸ್ವಕರ್ಮಣಾ ತಮಭ್ಯರ್ಚ್ಯ' ಎಂಬ ಮಹತ್ವದ ಗೀತೋಪದೇಶವನ್ನು ಕರ್ನಾಟಕದ ಕವಿಗಳೂ ಭಕ್ತರೂ ತಮ್ಮ ಆಚರಣೆಯಲ್ಲಿ ಹೇಗೆ ತಂದರೆಂಬದನ್ನು ಸ್ವಲ್ಪ ನೋಡಬೇಕು. ಅವರ ಕಾವ್ಯವೆಂದರೆಯೆ ಅವರ ಕರ್ಮವು. ಆ ಕರ್ಮದಿಂದಲೆ ಅವರು ಅರ್ಚಿಸುವದು ಯೋಗ್ಯವು. ಅವರು ಹಾಗೆಯೆ ಮಾಡಿರುವರು. ಜಗನ್ನಾಥವಿಜಯದ ಕರ್ತನಾದ ರುದ್ರಭಟ್ಟನು, 'ಕಾವ್ಯಸಮಾಧಿಯಿಂ' ಪರಮಾತ್ಮನನ್ನು ಭಜಿಸುವೆನು ಎಂದೂ ಚೌಂಡರಸನು ತಾನು ಮಾಡುವದೆಲ್ಲ 'ಸಕಲಾಂತರ್ಯಾಮಿಯಾದ ವಿಷ್ಣುಸ್ತುತಿಯೇ' ಎಂದೂ ಹೇಳಿರುವರು. ಬಹುಶಃ ಎಲ್ಲ ಕನ್ನಡ ಕವಿಗಳು ತಮ್ಮ ಕಾವ್ಯಗಳನ್ನು ತಮ್ಮ ದೈವತದ ಹೆಸರಿನಿಂದಲೆ ಬರೆದಿರುವರೆಂಬುದು ಅವರದೊಂದು ವೈಶಿಷ್ಟ್ಯವು. 'ತುಕಾ (ತುಕಾರಾಮ) ಮ್ಹಣೆ,' 'ನಾಮಾ ಮ್ಹಣೆ,' ಎಂದು ಮಹಾರಾಷ್ಟ್ರೀಯ ಕವಿಗಳಂತೆ ಬರೆಯದೆ ಪುರಂದರವಿಠ್ಠಲ, ಕಾಗಿನೆಲೆಯಾದಿ ಕೇಶವ, ಗದಗಿನ ವೀರನಾರಾಯಣ, ದೇವಪುರ ಲಕ್ಷ್ಮೀಶ, ಎಂಬ ಮುಂತಾದ ಮುದ್ರಿಕೆಯಿಂದಲೆ ಅವರು ಬರೆದುದು ಕಂಡುಬರುವದು. ಇದು ಅವರವರ ಭಗದರ್ಪಣ ಬುದ್ಧಿಯನ್ನು ಹೆಚ್ಚು ವ್ಯಕ್ತವಾಗಿ ಒಡೆದು ತೋರಿಸುವದು.

**ಮಿಕ್ಕವರೂ ಗೀತಾಚರಣೆಯೂ—** ಈ ಬಗೆಯಿಂದ ಆಚಾರ್ಯರಲ್ಲಿ ಮತ್ತು ಅವರ ಪರಂಪರೆಯಲ್ಲಿ ಗೀತಾಧರ್ಮದ ಆಚರಣೆಯು

ಉಜ್ವಲ ಧರ್ಮಜಾಗೃತಿಯ ರೂಪದಿಂದಲೂ ಮಂತ್ರಮಯ ವಚನರೂಪದಿಂದಲೂ ಹೇಗೆ ಹೊರಹೊಮ್ಮಿತು ಎಂಬುದನ್ನು ನೋಡಿದೆವು. ಆದರೆ ಸಮಾಜದ ಶ್ರೇಷ್ಠರಲ್ಲಿಯಷ್ಟೇ ಗೀತೋಪದೇಶವು ಪ್ರಚಾರ ಹೊಂದಿತು, ಅವರ ಆಚರಣದಲ್ಲಿಯಷ್ಟೇ ಅದು ಇಳಿದಿತ್ತು ಹೀಗನ್ನಲಿಕ್ಕಾಗದು. ಆದರೆ ಕರ್ನಾಟಕದ ಇತಿಹಾಸವನ್ನು ನೋಡಿದರೆ ಗೀತೆಯಲ್ಲಿಯ ನಿಷ್ಕಾಮತತ್ವವೂ, ತಾವು ಪರಮಾತ್ಮನ ಕೈಯಲ್ಲಿ ನಿಮಿತ್ತಮಾತ್ರರು ಎಂಬ ಅರಿವೂ, ಎಲ್ಲವನ್ನು ಕೃಷ್ಣಾರ್ಪಣಬುದ್ಧಿಯಿಂದ ಮಾಡಬೇಕೆಂಬ ಬಲವತ್ತರ ಭಾವನೆಯೂ ಸಾಮಾನ್ಯರಲ್ಲಿ ಕೂಡ ನೆಲೆಗೊಂಡಿತ್ತೆನ್ನಬಹುದು. ಇತಿಹಾಸವನ್ನು ಪರಿಶೀಲಿಸಿದರೆ ಗೀತಾಮೃತದ ಸವಿಯನ್ನು ಎಲ್ಲರೂ ಉಂಡಿದ್ದರು, ಗೀತೆಯ ಉಜ್ವಲಪ್ರಕಾಶದ ಕಿರಣಗಳನ್ನು ಎಲ್ಲರೂ ತಮ್ಮ ತಮ್ಮ ಮಟ್ಟಿಗೆ ಕಂಡಿದ್ದರು, ಆ ಗ್ರಂಥವು ಸಾಮಾನ್ಯರಿಗೆ ಸಹ ಪರಿಚಿತವಿತ್ತು, ಎಂದು ನಮಗೆ ಕಂಡುಬರುವದು. ಈಗ ದೊರೆತಿರುವ ಏಳನೆಯ ಶತಮಾನದ ಒಂದು ಶಿಲಾಲೇಖದಲ್ಲಿ, 'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತ, ಮಾಧವನೀತ ಪೆರನಲ್ಲ' ಎಂಬ 'ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ' ಈ ಗೀತಾವಾಕ್ಯದ ಭಾಷಾಂತರದಂತಿರುವ ವಚನವು ಇದೆ. ಇದು ಕಪ್ಪೆ ಅರಭಟ್ಟನೆಂಬವನ ಸ್ತುತಿಪರ ಲೇಖವಿರುವದು. ಇದರ ವಾಕ್ಸರಣಿಯು 'ವನಿಕೆಯ ಹಾಡು' ಅಂದರೆ ಹೆಣ್ಣುಮಕ್ಕಳು ಕುಟ್ಟುವಾಗ ಬೀಸುವಾಗ ಹಾಡುವ ಹಾಡಿನಂತೆ ಇರುವದರಿಂದ ಇಂಥ ಗೀತಾನುವಾದದ ವಚನಗಳು ಸಾಮಾನ್ಯರಲ್ಲಿ ಸಹ ರೂಢವಿದ್ದವೆಂಬುದನ್ನು ಅದು ತೋರಿಸುತ್ತಿದೆ. ಅನೇಕ ಶಿಲಾಶಾಸನಗಳಲ್ಲಿ ವಿಶೇಷತಃ ವೀರಶಾಸನಗಳಲ್ಲಿ ಈ ಕೆಳಗಿರುವ ವಾಕ್ಯವು ಕೊರೆದದ್ದು ಕಂಡುಬರುವದು: ಜಿತೇನ ಪ್ರಾಪ್ಯತೇ ಲಕ್ಷ್ಮೀಃ ಹತೇನಾಪಿ ಸುರಾಂಗನೇ। ಕ್ಷಣೇ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥ ಇದು ಗೀತೆಯಲ್ಲಿದ್ದ 'ಹತೋವಾ ಪ್ರಾಪ್ಸ್ಯಸಿ ಸ್ವರ್ಗಂ' ಎಂಬ ವಚನದ ಪರ್ಯಾಯರೂಪವೇ ಎಂಬುದು ನಿಶ್ಚಿತವು. ಈ ವೀರವಚನದಿಂದ ಉತ್ಸಾಹಹೊಂದಿ ಕನ್ನಡ ವೀರರು ವೀರಸ್ವರ್ಗವನ್ನು ಹೊಂದಲಿಕ್ಕೆ ಸಿದ್ಧರಾಗಿ ಕಾಳಗದಲ್ಲಿ ಕಾಲಿಡು

ತ್ತಿದ್ದರೆಂಬುದು ಇದರ ಮೇಲಿಂದ ಸ್ಪಷ್ಟವಾಗುವದು. ಅನೇಕ ರಾಜರ ವಚನಗಳಲ್ಲಿಯೂ ಈ ಮತ್ತು ಬೇರೆ ಬಗೆಯ ಗೀತಾರ್ಥಸೂಚಕವಾದ ವಾಕ್ಯಗಳು ಕಂಡುಬರುವವು. ಪರಮಾತ್ಮಾರ್ಪಣಬುದ್ಧಿಯೂ ಲೋಕಸಂಗ್ರಹೇಚ್ಛೆಯೂ ಒಂದೆಡೆಗೆಯೆ ಕೂಡಿದ್ದನ್ನು ನೋಡಬೇಕಾದರೆ ವೀರಬುಕ್ಕನು ತಾನು ಧರ್ಮಸಂಸ್ಥಾಪನಾರ್ಥವಾಗಿ ಹಚ್ಚಲ್ಪಟ್ಟ 'ಧರ್ಮಪಾದಪ' ನೆಂದು, ಅಂದುಕೊಂಡದ್ದನ್ನು ಲಕ್ಷಿಸಬೇಕು. ಇದಲ್ಲದೆ ಅನೇಕ ಶಾಸನಗಳಲ್ಲಿಯೂ ತಾಮ್ರಪಟಗಳಲ್ಲಿಯೂ ಅರಸನು ತನ್ನ ಹಸ್ತಾಕ್ಷರ (ಸಹಿ) ವನ್ನು ಇಕ್ಕಿದ್ದು ಕಂಡುಬಂದರೂ ಅದರ ಕೆಳಗೆಯೆ ಕುಲದೈವತದ ಸಾಕ್ಷಿಯೂ ಕಂಡುಬರುವದು. ರಾಯರ–ವಿಜಯನಗರದವರ–ಮನೆತನದವರಂತೂ ಕೇವಲ 'ವಿರೂಪಾಕ್ಷ' ಎಂಬುದೊಂದನ್ನೆ ಬರೆಯುತ್ತಿದ್ದರು. ತಾವು ನಿಮಿತ್ತಮಾತ್ರರು, ಪರಮಾತ್ಮನೆ ಕರ್ತನು, ಎಂಬ ಭಾವನೆಯು ಅವರಲ್ಲಿ ಎಷ್ಟು ನೆಲೆಗೊಂಡಿತ್ತೆಂಬುದು ಇದರ ಮೇಲಿಂದ ಗೊತ್ತಾಗುವದು.

**ಗೀತೆಯು ಮತ್ತು ಜೈನರು**—ಕರ್ನಾಟಕವು ಎಷ್ಟು ವೈದಿಕಧರ್ಮದ ಬೆಳವಲ ಭೂಮಿಯೋ ಅಷ್ಟೇ ಅದು ಜಿನಶಾಸನದನುಯಾಯಿಗಳ ಅಭ್ಯುದಯ ಭೂಮಿಯು, ವೇದಸಾರವೆನಿಸುವ ಶಿವಾಗಮಗಳಂತೆ ನಡೆಯುವ ವೀರಶೈವರ ಜನ್ಮಭೂಮಿಯು. ನಾನು ಇದುವರೆಗೆ ವೈದಿಕಧರ್ಮಿಗಳು ಮತ್ತು ಗೀತೆ ಇವುಗಳ ಸಂಬಂಧವನ್ನೇ ವರ್ಣಿಸಿದೆನು. ಇನ್ನು ವಿಶೇಷವಾಗಿ ಜೈನ ಮತ್ತು ವೀರಶೈವ ಶ್ರೇಷ್ಠರು ಗೀತೆಯನ್ನು ಯಾವ ಪರಿಯಿಂದ ಅಭ್ಯಸಿಸಿದರು ಮತ್ತು ಗೀತಾಧರ್ಮವನ್ನು ಯಾವ ರೀತಿಯಿಂದ ಪಾಲಿಸಿದರು ಇದನ್ನು ನೋಡುವ. ಗ್ರಂಥವು ಬಹಳ ಬೆಳೆಯುವದು ಎಂಬ ಭೀತಿಯಿಂದ ಇಲ್ಲಿ ಎಲ್ಲ ಸಂದರ್ಭಗಳನ್ನು ಕೊಡಲಿಕ್ಕಾಗುವದಿಲ್ಲವೆಂದು ಮೊದಲಿಗೆ ಹೇಳಿದ್ದೇನೆ. ಜೈನ ರಾಜರ ಮತ್ತು ಮುನಿಗಳ ಅನೇಕ ಉದಾಹರಣೆಗಳನ್ನು ಕೊಡಲಿಕ್ಕೆ ಬರುವಂತೆ ಇದ್ದರೂ ಇಲ್ಲಿ ಮಾದರಿಗಾಗಿ ರತ್ನಾಕರವರ್ಣಿಯು (ಕ್ರಿ. ಶ. ೧೫೫೭) ಬರೆದ 'ಭರತೇಶವೈಭವ' ಕಾವ್ಯದಲ್ಲಿಯ ಕೆಲವೊಂದು ವಾಕ್ಯಗಳನ್ನು ಕೊಟ್ಟು ಅಷ್ಟರಿಂದಲೆ ಸಂತೃಪ್ತರಾಗಿರಬೇಕಾಗಿದೆ. ಈ ಕವಿಯು ಹೇಳಿದ ತತ್ವಜ್ಞಾನ ಮತ್ತು ರಾಜ

ರ್ಷಿಯಾದ ಭರತೇಶನ ವರ್ಣನೆ ಇವುಗಳನ್ನು ಓದಿದರೆ ಕವಿಯ ಮನಸಿನ ಮೇಲೆ ಗೀತಾಧರ್ಮದ ಪ್ರಭಾವವು ಎಷ್ಟಿತ್ತೆಂಬದನ್ನು ಊಹಿಸಬಹುದು. ಈ ಕೆಳಗಿನ ವಚನಗಳನ್ನು ನೋಡಬೇಕು: —

ಮುಕ್ತರಾದವರೆಲ್ಲ ಮುನ್ನ ಸಂಸಾರಸಂ |
ಯುಕ್ತರಾಗಿದ್ದು ಕರ್ಮಗಳಾ ॥
ಯುಕ್ತಿಯರಿದು ಶಕ್ತಿಗೆಡಿಸಿ ದೇಹವಬಿಟ್ಟು |
ಮುಕ್ತಿಗೈದಿದರೆಲೆ ಭವ್ಯಾ ॥
........ಸುಖಕುಬ್ಬಿ ದುಃಖಕೆ ಮರುಗಿದರೊಡನೆ ಮುಂ |
ದಖಿಳಕರ್ಮಗಳು ಕಟ್ಟುವವು ॥
ಸುಖದುಃಖಕತ್ತಿತ್ತಲಾಗದೆ ಧ್ಯಾನಾಭಿ |
ಮುಖದೊಳಿದ್ದರೆ ಬಂಧವಿಲ್ಲ ॥
........ನಾನಾಚಿಂತೆಯುಳಿದು ಮನವಾತ್ಮಸಂ |
ಧಾನದೊಳಿರಲದೆ ಧ್ಯಾನ ॥
........ನೋಡಿ ನೋಡದ ನುಡಿದು ನುಡಿಯದ........ ॥

ಈ ಮುಂತಾದ ಉಕ್ತಿಗಳು ಗೀತೆಯುಲ್ಲಿಯ ಕರ್ಮಯೋಗವನ್ನೂ ರಾಗ ದ್ವೇಷವಿಯುಕ್ತರಾಗಿ ಸುಖದುಃಖಗಳನ್ನು ಸಮವೆಂದೆಣಿಸಿ ಕರ್ಮಮಾಡಬೇಕೆಂಬ ತತ್ವವನ್ನೂ ಅದೇ ಶಬ್ದಗಳಿಂದ ಪ್ರತಿಪಾದಿಸುವವು. ಇವುಗಳನ್ನು ಓದಿದರೆ, ಯೋಗಃ ಕರ್ಮಸು ಕೌಶಲಂ, ಸುಖದುಃಖೇ ಸಮೇ ಕೃತ್ವಾ, ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್....ನೈವಕಿಂಚಿತ್ ಕರೋತಿ ಸಃ। ಮುಂತಾದ ಗೀತಾವಾಕ್ಯಗಳು ಒಮ್ಮೆಲೆ ನೆನಪಿಗೆ ಬರುತ್ತಿವೆ. ಮುಂದೆ ಮತ್ತೆ,

ಜ್ಞಾನವಿಲ್ಲದೆ ಭೋಗಿಸುವ ಭೋಗಿ ಭವರೋಗಿ |
ಜ್ಞಾನವಿಡಿದ ಭೋಗಿ ಯೋಗಿ ॥
....ಭೋಗಿಸಿದರೆ ಕರ್ಮಬಂಧವಿಲ್ಲಾಗಿ ಯಾ |
ಭೋಗಿ ತಾನೇ ಯೋಗಿಯಲ್ತೆ ॥
....ಕಾಮಿಸಿ ಭೋಗಿಸುವಗೆ ಕರ್ಮಬಂಧ ನಿ
ಷ್ಕಾಮ ಭೋಗಿಗೆ ಬಂಧವುಂಟೆ ॥

....ಹೊರಗೆಲ್ಲವ ತೊರೆದೊಳಗೆ ನಿರ್ಮಲನಾಗಿ ।
ಮೆರೆವವರುಂಟು ಲೋಕದೊಳು ॥
ಹೊರಗೆಲ್ಲ ವಿದ್ದೊಳಗೇನು ವಿಲ್ಲೆನೆ ಬಚ್ಚ ।
ಬರಿದಾದವರಾರು ನಿನ್ನಂತೆ ॥
ಭೋಗದೊಳಿದ್ದು ಯೋಗವ ಮಾಡಿ ಭವಮುಕ್ತ ।
ರಾಗುವರಾರು ನಿನ್ನಂತೆ ॥
ಆತ್ಮಸುಧೆಯನಾತ್ಮಗರ್ಪಿಸುತಖಿಲ ಭ ।
ವ್ಯಾತ್ಮರಿತ್ತನ್ನವ ಮೆಯ್ಗೆ ॥
ಆತ್ಮಸಾಕ್ಷಿಯೊಳರ್ಪಿಸುವ ಯೋಗಿಗನ್ನವಿ ।
ತ್ತಾತ್ಮನೆ ಧನ್ಯಾತ್ಮನಲ್ತೆ ॥........

ಈ ವಚನಗಳು ನಮ್ಮ ಮನಸಿನಲ್ಲಿ, ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮ ಸಾತ್ ಕುರುತೇ, ಯುಕ್ತಾಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನ ಕಾಮಕಾಮೀ, ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ, ಆತ್ಮನ್ಯೇವಾತ್ಮನಾತುಷ್ಟಃ, ಬ್ರಹ್ಮಾರ್ಪಣಂ ಬ್ರಹ್ಮಹವಿಃ, ಎಂಬ ಮುಂತಾದ ಗೀತಾವಚನಗಳ ನೆನಪನ್ನುಂಟುಮಾಡದೆ ಇರಲಾರವು. ವಿದ್ಯಾಗೋಷ್ಠಿಯಲ್ಲಿಯು,

ನೀರಿಂದ ನನೆಯ ಕಿಚ್ಚಿಂದ ಬೇಯನ ಖಡ್ಗ ।
ಧಾರೆಗೆ ಸಂಧಿಸನಾತ್ಮ ॥
ನೀರು ಕಿಚ್ಚಾಯುಧ ರುಜೆಗಳ ಬಾಧೆ ಶ ।
ರೀರಕೆಂದೆತ್ತಿ ಹಾಡಿಹರ ॥ .......
ತೊಟ್ಟ ಮೈಜೋಹದೊಳಿರ್ದುದೆ ಬದುಕೆಂದು ।
ಬಿಟ್ಟರೆ ಮರಣವಾಯ್ತೆಂದು ॥
ಬಿಟ್ಟು ಮತ್ತೊಂದು ಮೈ ಜೋಹವ ತೊಟ್ಟಡೆ ।
ಹುಟ್ಟಿದನೆಂದಾಡುತಿಹರು ॥
ಮನೆಯಿಂದ ಮನೆಗೆ ಪೋಪಂತಾತ್ಮಾ ತನುವಿಂದ ।
ತನುವಿಗೆ ತಾನೆಯ್ದುತಿರನು ॥

ಈ ವಚನಗಳು, ಅಚ್ಛೇದ್ಯೋಽಯಮದಾಹ್ಯೋಽಯಂ ಅಕ್ಲೇ

ದ್ಯೋSಯಂ, ವಾಸಾಂಸಿ ಜೀರ್ಣಾನಿ ಯಥಾ ವಿಹಾಯ, ಎಂಬ ಉಕ್ತಿಗಳ ಸ್ಪಷ್ಟ ಅನುವಾದಗಳೆ ಇರುವವು. ಈ ರೀತಿಯಾಗಿ ಭರತೇಶನು ಜನಕನಂತೆ ನೈಷ್ಕರ್ಮ್ಯಸಿದ್ಧಿಯನ್ನು ಪಡೆದು ಕೇವಲ ಲೋಕಸಂಗ್ರಹಾರ್ಥವಾಗಿ ರಾಜ್ಯವಾಳುತ್ತಿರುವ ಯೋಗಿಯೆಂಬುದು ಸಿದ್ಧವಾಗುವದು. ಇದರ ಮೇಲಿಂದ ಗೀತೆಯ ಆದರ್ಶವು ಕವಿಯ ಎದುರಿಗೆ ಸ್ಪಷ್ಟವಾಗಿ ಇತ್ತು ಎನ್ನಬಹುದು.

**ಗೀತೆಯೂ ವೀರಶೈವರೂ**—ಶಿವಾಗಮೋಕ್ತ ವೀರಶೈವ ಧರ್ಮದ ಉದ್ಧಾರಮಾಡಿದ ಬಸವೇಶ್ವರರೂ ಅವರ ಅನೇಕ ಶಿಷ್ಯಪ್ರಶಿಷ್ಯರೂ ಗೀತೆಯಲ್ಲಿ ಹೇಳಿದ ಕರ್ಮಯೋಗದ ಉಪದೇಶವನ್ನು ಅತ್ಯಂತ ಬಲವತ್ತಾದ ತಿಳಿಗನ್ನಡದಲ್ಲಿ ಮಾಡಿರುವದನ್ನು ನೋಡಿ ಪ್ರತಿಯೊಬ್ಬ ಕನ್ನಡಿಗನಿಗೆ ಅತ್ಯಾನಂದವಾಗದೆ ಇರದು. ವೀರಶೈವರು ಶಕ್ತಿವಿಶಿಷ್ಟಾದ್ವೈತಿಗಳು. ಅದರಲ್ಲಿ ಕಲ್ಪನೆಗೆ ಇದ್ದ ಮಹತ್ವವೆ ಕ್ರಿಯೆಗೆ, ವಿಚಾರಕ್ಕೆ ಇದ್ದ ಮಹತ್ವವೆ ಆಚಾರಕ್ಕೆ, ನುಡಿಗೆ ಇದ್ದ ಮಹತ್ವವೆ ನಡೆಗೆ ಇರುವದು. ಷಟ್ಸ್ಥಲಗಳಲ್ಲಿ ಪ್ರಸಾದಿ ಸ್ಥಲವೆಂಬುದು ಸಕಲ ಕರ್ಮಗಳನ್ನು ಭಗವದರ್ಪಣ ಮಾಡಿ ನಿಷ್ಕಾಮಿಯಾಗಿರುವಸ್ಥಲವು. ಈ ವಿಷಯಕ್ಕೆ ಬರೆದ ಅನೇಕ ವಚನಕಾರರು ಬಹಳೇ ಸ್ಪಷ್ಟವಾಗಿ ಮತ್ತು ಮನೋಹರವಾದ ಉಪಮೆಗಳನ್ನು ಕೊಟ್ಟು ನಿಷ್ಕಾಮ ಕರ್ಮವನ್ನು ವರ್ಣಿಸಿದ್ದಾರೆ ಇದರ ಬಗ್ಗೆ ಬಸವೇಶ್ವರರ ವಚನಗಳೂ ಬೇಕಾದಷ್ಟು ಇರುವವು. ಕ್ರಿಯಾಮಥನ ಮಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ, ಎಂದು ಗುಹೇಶ್ವರನು ಕೇಳುವನು. ಕ್ರಿಯೆಯಿಲ್ಲದ ಭಕ್ತ ಮನುಜ,........ಕ್ರಿಯೆ ಇಲ್ಲದ ಶರಣ ಅಜ್ಞಾನಿ, ಎಂದು ಕೂಡಲ ಚನ್ನಸಂಗಮದೇವನು (ಬಸವೇಶ್ವರರು) ಕ್ರಿಯೆಯಿಲ್ಲದ ತತ್ವಜ್ಞರನ್ನು ಜರಿದಿರುವನು. ಫಲಪದದ ಆಶೆ ಮಾಡಲಾಗದು ನಿನ್ನ ಕ್ರಿಯೆಯಲ್ಲಿ, ಎಂದು ಅಖಂಡೇಶ್ವರನು, ಗತಿ ಪದ ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ, ಎಂದು ಕೂಡಲ ಸಂಗಮದೇವನು ಫಲಾಶೆಯನ್ನು ಬಿಡಬೇಕೆಂಬ ಬಗ್ಗೆ ಹೇಳಿರುವರು. ಪರಮಾತ್ಮನೆ ಕರ್ತನು ಎಂದು ಹೇಳುವಾಗ, ಮಾಡುವ ಭಕ್ತನು ನೀನೇ ಮಾಡಿಕೊಂಬ ದೇವನು ನೀನೇ, ಎಂದು ಅಖಂಡೇಶ್ವರ ವಚನವಿರುವದು, ಸ್ವಕರ್ಮವನ್ನು ನಿಷ್ಠೆ

ಯಿಂದ ಮಾಡಬೇಕು ಎಂದು ಹೇಳುವ ಸಂದರ್ಭದಲ್ಲಿ ಅಮುಗೇಶ್ವಲಿಂಗ ವೆಂಬ ಮುದ್ರಿಕೆಯಿದ್ದ ವಚನಕಾರರು ಅಂದದ್ದು, ಕಾಯಕದಲ್ಲಿ ನಿರುತ ನಾದೊಡೆ ಗುರುದರ್ಶನವಾದರೂ ಮರೆಯಬೇಕು, ಲಿಂಗಪೂಜೆಯಾದರೂ ಮರೆಯಬೇಕು ... ...ಕಾಯಕವೇ ಕೈಲಾಸವಾದ ಕಾರಣ. ಕಾಯಕ ದಿಂದ—ಸ್ವಕರ್ಮದಿಂದ ಅಥವಾ ನಿಯತಕರ್ಮದಿಂದ ಪರಮಾತ್ಮನ ಸೇವೆ ಮಾಡುವ ಸಾಧಕನು ಘಳಿಸಿದ್ದು, ಲಿಂಗಾಂಗ ಕುಂಭದಲ್ಲಿ ನಿಂದ ಪ್ರಸಾದ ವೆಂದು, ಕುಂಭೇಶ್ವರನ ವಚನವಿರುವದು. ಸದ್ಭಕ್ತನು ತನುಮನಧನಗಳ ನರ್ಪಿಸಿ ಕ್ರಿಯೆಗಳನ್ನು ಮಾಡುತ್ತಿರಬೇಕು ಎಂದು ಅನೇಕ ವಚನಗಳಿರು ವವು. ಕಾಯಕದಿಂದ ಅರ್ಪಿಸಿದ್ದೇ ದೇವರಿಗೆ ಮುಟ್ಟುವದು ಎಂಬುವಲ್ಲಿ ಕಾಯಕದಿಂದ ಬಂದುದು ಲಿಂಗಕರ್ಪಿತವಲ್ಲದೆ ದುರಾಶೆಯಿಂ ಬಂದುದು ಅನರ್ಪಿತ, ಎಂದು ಚಂದೇಶ್ವರಲಿಂಗನು ಹೇಳಿರುವನು. ಬಂದ ಪದಾರ್ಥದ ಲಿಂಗಾರ್ಪಿತ ಮಾಡಿಕೊಂಬ ಶರಣನೇ ಜಾಣನೆಂದು ಸಕಳೇಶ್ವರನು ಅರ್ಪಣದ ಮತ್ತು ಪ್ರಸಾದದ ತತ್ವವನ್ನು ಹೇಳಿರುವನು. ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ, ಎಂಬ ಮೂಬಗೆಯ ಅರ್ಪಣವನ್ನು ಮಾಡುವ ಶ್ರೇಷ್ಠವಾದ ಕೃಷ್ಣಾರ್ಪಣ ತತ್ವವನ್ನು ವಚನಕಾರರು ತಮ್ಮ ತಿಳಿಗನ್ನಡದಿಂದ ತಿಳುಹಿರುವರು. ಹೀಗೆ ಒಂದಲ್ಲ ಎರಡಲ್ಲ, ಗೀತೆಯಲ್ಲಿ ಉಪದೇಶಿಸಿದ ಮುಖ್ಯ ಮತ್ತು ವಿಶೇಷ ತತ್ವಗಳು ಎಷ್ಟೋ ಶಬ್ದಶಃ ವಚನಗಳಲ್ಲಿ ಬಂದಿರುವವು. ಇದಲ್ಲದೆ ವಚನಕಾರರು ಸ್ವತಃ ಆ ರೀತಿ ನಡೆಯುವುದಕ್ಕೆ ಹೆಚ್ಚು ಮಹತ್ವವನ್ನು ಕೊಡುವವರಾಗಿದ್ದರು. ಅವರಲ್ಲಿ ಒಬ್ಬರು ಕೂಡ ತಮ್ಮ ಸ್ವಂತ ಹೆಸರಿನಿಂದ ವಚನಗಳನ್ನು ಬರೆದಿಲ್ಲ. ಎಲ್ಲರೂ ಶಿವೋಪಾಸಕರಿದ್ದು ಅವರು ತಮ್ಮ ವಚನಗಳನ್ನೆಲ್ಲ ಮಹಾದೇ ವನ ಯಾವುದೊಂದು ಹೆಸರನ್ನು ಮುದ್ರಿಕೆಯಾಗಿಟ್ಟುಕೊಂಡು ಬರೆದಿರು ವರು. ಇದೇ ಅವರ ಭಗವದರ್ಪಣಬುದ್ಧಿಯ ಪ್ರತ್ಯಕ್ಷ ಪ್ರಮಾಣವು.

**ಕನ್ನಡ ವಾಙ್ಮಯದಲ್ಲಿ ಗೀತೆಯು—** ಕನ್ನಡ ವಾಙ್ಮಯದಲ್ಲಿ ಕೂಡ ಬಹಳ ಗ್ರಂಥಗಳಲ್ಲಿ ಗೀತೆಯ ಉಲ್ಲೇಖವಾಗಲಿ ಆದರಲ್ಲಿಯ ವಚ ನಗಳಾಗಲಿ ಬಂದಿರುವವು. ಅದರ ಮೇಲಿಂದ ನೋಡಲಾಗಿ ಗೀತೆಯು ಎಲ್ಲ ಲೇಖಕರಿಗೂ ಎಷ್ಟು ಪರಿಚಿತವಾಗಿತ್ತೆಂಬುದು ತಿಳಿಯುವಂತಿದೆ.

ಪಂಪಭಾರತದಲ್ಲಿ ೧೧ ನೆಯ ಅಧ್ಯಾಯದಲ್ಲಿ ಈ ಬಗೆಯ ಸ್ಪಷ್ಟವಾದ ಉಲ್ಲೇಖವಿರುವದು. ಲಕ್ಷ್ಮೀಶನ ಜೈಮಿನಿಭಾರತದಲ್ಲಿರುವ ಚಂದ್ರಹಾಸನ ಕಥೆಯಲ್ಲಿ, ಚಂದ್ರಹಾಸನು ಮಹಾ ಭಗವದ್ಭಕ್ತನಿರುವದರಿಂದ ಅವನಿಗೆ ಮೊರೆಹೊಡು, ಶರಣಾಗತನಾಗು, ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು. ಅದಕ್ಕೆ ಉತ್ತರವೆಂದು ಅರ್ಜುನನು ಅಂದದ್ದು, ....ನಿಮ್ಮ ಡಿಗ| ಳುಸುರಿದಿರಲಾ ತನ್ನ ಮಾರ್ಗಗತಿ ಲೇಸನ್ಯ| ರೆಸಗುವಂದದೊ ಳಾಚರಿಸೆ ಭಯಾವಹಮೆಂದು ಭೀಷ್ಮ ಸಂಗರದೊಳಗೆ॥ ಇದೇ ರೀತಿ ಯಾಗಿ ಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿಯೂ ಮಹಾಲಿಂಗ ರಂಗನ ಅನುಭವಾಮೃತದಲ್ಲಿಯೂ ಮತ್ತು ಇನ್ನೂ ಅನೇಕ ಗ್ರಂಥಗಳ ಲ್ಲಿಯೂ ಗೀತೆಯ ಛಾಯೆಯು, ಗೀತೆಯ ಅಂಶಾನುವಾದ ಮುಂತಾದವು ಗಳು ಅಲ್ಲಲ್ಲಿ ಕಂಡುಬರುವವು.

**ಕರ್ನಾಟಕದಲ್ಲಿ ಸದ್ಯಕ್ಕೆ ಗೀತೆಯ ಸ್ಥಾನವು**— ಹೀಗೆ ನಾವು ಕರ್ನಾಟಕದ ಭೂತಕಾಲದ ಕಡೆಗೆ ಕಣ್ಣು ಚಾಚಿ ನೋಡಿದರೆ ನಮಗೆ ಕರ್ನಾಟಕಸ್ಥರು ಮಾಡಿದ ಗೀತೆಯ ಅಭ್ಯಾಸವೂ ಆದರಣೆಯೂ ಬೇಕಾದಷ್ಟು ನೋಡಲಿಕ್ಕೆ ದೊರೆಯುವವು. ನಮ್ಮ ಪೂರ್ವಜರು ಗೀತೆಯನ್ನಭ್ಯಸಿಸದಿದ್ದರೆ ನಾವು ಅಭ್ಯಸಿಸಕೂಡದು ಎಂದು ಯಾರಾ ದರೂ ತಿಳಿದಿದ್ದರೆ ಮೇಲಿನ ವಿವೇಚನವೊಂದು ಅವರಿಗೆ ಪ್ರತ್ಯುತ್ತರ ರೂಪವಾಗಿರುವದು. ನಮ್ಮಲ್ಲಿಯ ಶ್ರೇಷ್ಠರು, ಶಿಷ್ಟರು, ಕವಿಗಳು, ಆಚಾರ್ಯರು ಗೀತೆಯ ಮಹತ್ವವನ್ನೂ ಅದರ ಅತ್ಯುಚ್ಚ ಅಧ್ಯಾತ್ಮಿಕ ತೆಯನ್ನೂ ಅರಿತವರಿದ್ದರು; ಅದರಂತೆ ಆಚರಿಸಲಿಕ್ಕೆ ಯಾವಾಗಲೂ ಯತ್ನಿ ಸುವವರಿದ್ದರು. ವರ್ಣಿಗಳು ಅವರ್ಣಿಗಳು, ಜೈನರು, ವೈದಿಕರು, ವೀರಶೈ ವರು ಇವರೆಲ್ಲರೂ ಗೀತೆಯ ಮಹೋಪದೇಶವನ್ನು ಮನ್ನಿಸಿ ನಡೆಯುವವ ರಿದ್ದರು. ಗೀತೆಯು ಒಂದು ಬಗೆಯಿಂದ ಕರ್ನಾಟಕದ ಎಲ್ಲ ಅಧ್ಯಾತ್ಮ ವಾದಿಗಳಿಗೂ ಅಷ್ಟೇ ಪೂಜ್ಯವೂ ಮಾನ್ಯವೂ ಆಗಿತ್ತೆಂದು ಹೇಳಬಹುದು. ಅವರವರು ತಮ್ಮ ತಮ್ಮ ಸಾಂಪ್ರದಾಯದಂತೆ ಅರ್ಥಗಳನ್ನು ಹಚ್ಚಿದರೂ ಎಲ್ಲರು ಗೀತೆಯೊಳಗಿಂದ ತಮ್ಮ ಅರ್ಥವನ್ನು ತೆಗೆಯಲೆತ್ನಿಸುತ್ತಿದ್ದ ರೆಂಬದು ಮಹತ್ವದ ಸಂಗತಿಯು. ಇದು ಪೂರ್ವದ ಸ್ಥಿತಿಯಾಯಿತು.

ಈಗ ಆ ತರದ ಧರ್ಮಭಾವನೆಯಾಗಲಿ ತೇಜಸ್ಸಾಗಲಿ ಇಲ್ಲದ್ದರಿಂದ ಎಲ್ಲವೂ ಮಲಿನವಾದಂತೆ ತೋರುತ್ತಿದೆ. ಸಂಸ್ಕೃತಜ್ಞರು, ಹಳೆಯ ತರದ ಶಾಸ್ತ್ರಿಗಳು ಗೀತೆಯನ್ನೋದಬೇಕಾದರೆ ಸಾಮಾನ್ಯವಾಗಿ ತಮ್ಮ ಸಾಂಪ್ರದಾಯಿಕ ಅಭಿಮಾನದಿಂದಲೆ ಓದುತ್ತಾರೆ. ಗೀತೆಗಿಂತ ಗೀತೆಗಳ ಮೇಲಿದ್ದ ಭಾಷ್ಯಗಳ ಕಡೆಗೆ, ವಾದವಿವಾದದ ಕಡೆಗೆ, ಪ್ರವೃತ್ತಿಯು ಹೆಚ್ಚು ಕಾಣುತ್ತಿದೆ. ಗೀತೆಯು ಆಧ್ಯಾತ್ಮಿಕಜ್ಞಾನದ ಗ್ರಂಥವು, ಆಧ್ಯಾತ್ಮಿಕಜ್ಞಾನವು ಅನುಭವದಿಂದಲೆ ತಿಳಿಯತಕ್ಕದು, ಎಂಬುದನ್ನು ಮರೆತು ಜನರು ತರ್ಕದ ತೊಡಕಿನಲ್ಲಿ ಸಿಕ್ಕು ಒದ್ದಾಡುತ್ತಾರೆ. ಆಧುನಿಕ ಸುಶಿಕ್ಷಿತರು ಗೀತೆಯನ್ನು ಓದಿದರೂ ಅಷ್ಟೊಂದು ಆಳವಾಗಿ ನೋಡುವ ಪ್ರವೃತ್ತಿಯು ಅವರಲ್ಲಿ ಕಂಡುಬರುವದಿಲ್ಲ. ಸ್ತ್ರೀಶೂದ್ರಾದಿಗಳ ಮಾತನ್ನೇ ಎತ್ತಲಿಕ್ಕೆ ಕಾರಣವಿಲ್ಲ. ಹೀಗೆ ಒಟ್ಟಿಗೆ ನೋಡಲಾಗಿ ಗೀತೆಯ ಅಭ್ಯಾಸಾದಿಗಳು ಇಲ್ಲಿ ಎಷ್ಟು ಬಲದಿಂದ, ಎಷ್ಟು ಶುದ್ಧಬುದ್ಧಿಯಿಂದ ನಡೆಯಬೇಕೋ ಅಷ್ಟು ನಡೆಯುವದಿಲ್ಲವೆನ್ನಬಹುದು. ಮೊದಲು ಅದನ್ನು ಓದುವವರೂ ಅಭ್ಯಸಿಸುವವರೂ ಕಡಿಮೆ. ಅವರಲ್ಲಿ, ಮೇಲೆ ಹೇಳಿದಂತೆ, ನಿಜವಾದ ಅಭ್ಯಾಸಕ್ಕೆ, ಆಚರಣಕ್ಕೆ, ಅಡ್ಡಿಮಾಡುವ ಪ್ರವೃತ್ತಿಗಳು.

**ನಾವೇನು ಮಾಡಬೇಕು**—ಆದರೆ ಈ ಸ್ಥಿತಿಯನ್ನು ನಾವು ಬದಲು ಮಾಡಲಿಕ್ಕೆಬೇಕು. ಕರ್ನಾಟಕದ ಮತ್ತು ಭರತಖಂಡದ ಉದಯೋನ್ಮುಖ ಕಾಲದಲ್ಲಿ ನಾವು ಗೀತೆಯ ಕಡೆಗೆ ಹೆಚ್ಚು ಮನಸು ಹಾಕಲಿಕ್ಕೆ ಬೇಕು. ಮನೆಮನೆಗೆ ಗೀತೆಯ ಅಭ್ಯಾಸವು ನಡೆಯಲಿಕ್ಕೆಬೇಕು. ಗೀತಾಪಾಠ, ಗೀತಾಪರೀಕ್ಷೆ, ಗೀತಾವಾಚನಾಲಯಗಳು, ಗೀತಾಪ್ರವಚನಗಳು ಅಲ್ಲಲ್ಲಿ ಗೋಚರವಾಗಲಿಕ್ಕೆಬೇಕು. ಈಗಿನ ಸಾರ್ವತ್ರಿಕ ಜಾಗ್ರತಿಯ ಕಾಲಕ್ಕೆ ನಾವು 'ಎತ್ತ ಕಡೆಗೆಹೊರಟಿರುವೆವು,' ನಮ್ಮ ಧ್ಯೇಯವೇನು, ನಮ್ಮ ಭೂತಕಾಲವೇನು ಹೇಳುವದು, ನಮ್ಮ ವರ್ತಮಾನ ಸ್ಥಿತಿಯು ಏನಿರುವದು, ನಮ್ಮ ಭವಿಷ್ಯಕಾಲವನ್ನು ನಾವು ಹೇಗೆ ರೂಪುಗೊಳಿಸಬೇಕು ಎಂಬುದನ್ನು ಈಗ ನಾವು ವಿಚಾರಿಸಲಿಕ್ಕೆಬೇಕು. ಈ ವಿಚಾರವೆಲ್ಲ ಸೋಪಪತ್ತಿಕ ರೀತಿಯಿಂದ ಆಗಬೇಕಾದರೆ ಬರಿಯ ಆವೇಶಯುಕ್ತ ಅಭಿಮಾನದಿಂದ ಏನೂ ಆಗದು. ಕರ್ನಾಟಕದ ಆತ್ಮವು ಯಾವುದು, ಅದರ ಸ್ವಭಾವ

ವೇನು, ಇದನ್ನು ತಿಳಿಯದಿದ್ದರೆ ನಾವು ಎಂದಿಗೂ ಮುಂದೆ ಬರಲಾರೆವು. ಆ ದೃಷ್ಟಿಯಿಂದ ನೋಡಿದರೆ ಶಂಕರಾಚಾರ್ಯರು ತಮ್ಮ ಎಲ್ಲಕ್ಕೂ ಮೊದಲಿನ ಮತ್ತು ಹೆಚ್ಚಿನ ಮಠವನ್ನು ಸ್ಥಾಪಿಸಿದ ಪವಿತ್ರಭೂಮಿಯಿದು. ಕ್ಷಾಮಪೀಡಿತವಾಗಿ ಉತ್ತರಹಿಂದುಸ್ಥಾನವು ಭಯಾನಕವಾದ ಕಾಲದಲ್ಲಿ ಅಲ್ಲಿಂದ ಹೊರಟ ಭದ್ರಬಾಹು ಮುಂತಾದ ಜೈನಶ್ರಮಣರಿಗೆ ಇಂಬುಗೊಟ್ಟು ಸಲಹಿದ ಕರ್ನಾಟಕವು ಇದೇ. ರಾಮಾನುಜಾಚಾರ್ಯರಿಗೆ ಎಡೆಗೊಟ್ಟು ಕಾಪಾಡಿದ ಹೊಯ್ಸಳರು ಇಲ್ಲಿಯೆ ಆಳಿಹೋದರು. ವಾಯುದೇವರ ಅವತಾರವೆಂದು ಪ್ರಸಿದ್ಧರಿರುವ ಮಧ್ವಾಚಾರ್ಯರು ಉಡುಪಿಯ ಹತ್ತರವೇ ಹುಟ್ಟಿ ತಮ್ಮ ಅವತಾರಕಾರ್ಯಗಳನ್ನು ಮಾಡಿ ತೋರಿಸಿದ ಪುಣ್ಯಭೂಮಿಯಿದು. ಪರಮಾತ್ಮನ ಪತಿತೋದ್ಧಾರಕ ಗುಣದ ಮೂರ್ತಿಯಾದ ಬಸವೇಶ್ವರರು ಬಾಗೆವಾಡಿಯಲ್ಲಿಯೆ ಜನ್ಮತಾಳಿ ಕನ್ನಡ ನುಡಿಯನ್ನು ತಮ್ಮ ಮಂತ್ರಶಕ್ತಿಯಿಂದ ಸಮರ್ಥಮಾಡಿದರು. ಅತ್ಯಂತ ದುರವಸ್ಥೆಯೊಳಗಿದ್ದಾಗ ನಮ್ಮ ಉದ್ಧಾರಕ್ಕಾಗಿ ವಿದ್ಯಾಮೂರ್ತಿ ವಿದ್ಯಾರಣ್ಯರು ಹುಟ್ಟಿ ಜ್ಞಾನಾಮೃತವನ್ನೂ ಧೈರ್ಯರಸಾಯನವನ್ನೂ ಕೊಟ್ಟು ನಮ್ಮನ್ನು ಯಾವ ನಾಡಿನಲ್ಲಿ ಸ್ಥಿರಗೊಳಿಸಿ ಸಮಾಧಾನ ಪಡಿಸಿದರೊ ಆ ನಾಡು ಇದೇ ಕರ್ನಾಟಕವು. ವೇದಮಂತ್ರಗಳಿಗೆ ಅರ್ಥ ಬರೆದು ವೇದಾರ್ಥವು ಲೋಪವಾಗದಂತೆ ಎಚ್ಚರಪಟ್ಟ ಸಾಯಣಾಚಾರ್ಯರೂ ಇದೇ ನಾಡಿನಲ್ಲಿ ಜನ್ಮತಾಳಿದರು. ಯಾಜ್ಞವಲ್ಕ್ಯಸ್ಮೃತಿಗೆ ಮಿತಾಕ್ಷರವೆಂಬ ಶ್ರೇಷ್ಠವಾದ ಟೀಕೆಯನ್ನು ಬರೆದ ವಿಜ್ಞಾನೇಶ್ವರನು ಇಲ್ಲಿಯೆ ಹುಟ್ಟಿದವನು. ಭಕ್ತಿಪ್ರಧಾನ ದಾಸಪಂಥವನ್ನು ಪ್ರಚಾರಕ್ಕೆ ತಂದ ಪುರಂದರಾದಿ ದಾಸರು ಇದೇ ಭೂಮಿಯಲ್ಲಿ ಜನ್ಮವೆತ್ತರು. ಉಡುಪಿಯ ಕೃಷ್ಣನನ್ನು ತನ್ನ ಪ್ರೇಮಪ್ರಭಾವದಿಂದ ಮೋರೆ ತಿರುವಹಚ್ಚಿ ನಾಮಬ್ರಾಹ್ಮಣರಾದ ಆಗಿನ ಅರ್ಚಕರನ್ನು ನಾಚಿಸಿದ, ಬೇಡನಿದ್ದರೂ ಸಾಧುವರನಾದ, ಕನಕದಾಸನೂ ಕನ್ನಡನಾಡಿನವನೇ. ಇಂಥಿಂಥ ಧರ್ಮವೀರರು ಯಾವ ಕನ್ನಡನಾಡಿನಲ್ಲಿ ಹುಟ್ಟಿದರೋ ಅದು ಯಥಾರ್ಥವಾಗಿ ಧರ್ಮಭೂಮಿಯು, ಧರ್ಮಭೂಮಿಯೆಂದರೆ ಅಧ್ಯಾತ್ಮಭೂಮಿಯು. ಈ ಅಧ್ಯಾತ್ಮಭೂಮಿಯಲ್ಲಿ ಯೋಗಭೋಗಗಳ ಸಮನ್ವಯವನ್ನು ಮಾಡುವ, ಕ್ರಿಯೆ ಜ್ಞಾನಗಳನ್ನು ಕೂಡಿಸಿ

ಅವುಗಳಿಗೆ ಭಕ್ತಿಯ ಒಪ್ಪಿಡುವ, ಅಭ್ಯುದಯವನ್ನು ದುರ್ಲಕ್ಷಿಸದೆ ನಿಶ್ರೇಯಸ ಪದವಿಯನ್ನು ಅನುಗ್ರಹಿಸುವ ಗೀತೆಯನ್ನು ನೋಡುವದು, ಓದುವದು, ಅದರ ಮನನ ಮಾಡುವದು, ಅದರ ಪ್ರಚಾರ ಮಾಡುವದು ಅತ್ಯಾವಶ್ಯಕವಿದೆ. ಕರ್ನಾಟಕದಲ್ಲಿ ಗೀತಾಧರ್ಮದ ಪುನರವತಾರವಾಗಿ ಮಧ್ವಾಚಾರ್ಯರಂಥ 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ' ಎಂಬ ಭಾವನೆಯಿಂದ ಶ್ರೇಷ್ಠ ಕರ್ಮವನ್ನು ಮಾಡುವವರು, ವಿದ್ಯಾರಣ್ಯರಂಥ ಋಷಿರಾಜರು, ವೀರ ಬುಕ್ಕರಂಥ ರಾಜರ್ಷಿಗಳು, ಭರತೇಶರಂಥ ಯೋಗಿಭೋಗಿಗಳು, ಬಸವೇಶ್ವರರಂಥ ನಿತ್ಯಮುಕ್ತ ನಿಷ್ಕಾಮ ಕರ್ಮಿಗಳು ಹಾಕಿಕೊಟ್ಟ ಮಾರ್ಗದಂತೆ ನಾವು ನಡೆಯುತ್ತ ಹೋದರೆ ಮಾತ್ರ ನಮ್ಮ ಉದ್ಧಾರದ ಆಶೆಯು. ಆದುದರಿಂದ ಗೀತೆಯ ಗುಟ್ಟನ್ನರಿತು ಅದರಂತೆ ಆಚರಿಸುವ ಸ್ಫೂರ್ತಿಯನ್ನು ಪಡೆದು ಈ ಕಾರ್ಯದಲ್ಲಿ ಮುಂದಾಗುವ.

---

# ೪. ಗೀತೆಯ ಭೂಮಿಕೆಯು.

**ಸೂಚನೆ—** ಮೊದಲು ಗೀತೆಯ ಮಹತ್ವವನ್ನು ಹೇಳಿ ಸದ್ಯಸ್ಥಿತಿಗೂ ಆ ಗ್ರಂಥಕ್ಕೂ ಇದ್ದ ಸಂಬಂಧ, ಕರ್ನಾಟಕದಲ್ಲಿ ಸದ್ಯಕ್ಕೆ ಗೀತೆಯ ಅಭ್ಯಾಸವು ಪ್ರಚುರವಾಗುವ ಅವಶ್ಯಕತೆ, ಈ ವಿಷಯಗಳನ್ನು ವಿವರಿಸಿದ್ದಾಯಿತು. ಇನ್ನು ಗೀತೆಯು ಯಾವ ಗ್ರಂಥದಲ್ಲಿರುವದು, ಅದು ಪ್ರವೃತ್ತವಾದ ಕಾಲವೂ ಪ್ರಸಂಗವೂ ಯಾವವು, ಹೇಳಿದವರು ಯಾರು ಮುಂತಾದ ಮಾತುಗಳನ್ನು ಕುರಿತು ಸ್ವಲ್ಪ ವಿಚಾರಮಾಡುವದು ಅಗತ್ಯವು. ಭೂಮಿಕೆಯು ಚನ್ನಾಗಿದ್ದರೆ ಚಿತ್ರವು ಎದ್ದು ಕಾಣುತ್ತಿದೆ ಎಂಬುದು ಎಲ್ಲರಿಗೂ ಗೊತ್ತಿದ್ದಮಾತು. ಚಿತ್ರವನ್ನು ನಿರೀಕ್ಷಿಸಬೇಕಾದರೆ ಅದರ ಭೂಮಿಕೆ ಅದರ ಪಾರ್ಶ್ವಭೂಮಿ ಮುಂತಾದವುಗಳನ್ನು ನೋಡುವದು ಕ್ರಮಪ್ರಾಪ್ತವೇ ಇರುವದು.

**ಗೀತೆಯ ಕಾಲವು—** ಗೀತೆಯು ಮಹಾಭಾರತದ ಭೀಷ್ಮಪರ್ವ ದಲ್ಲಿ ೨೫ನೆಯ ಅಧ್ಯಾಯದಿಂದ ೪೨ನೆಯ ಅಧ್ಯಾಯದ ವರೆಗೆ ಇರುವದು. ಈಗ ಉಪಲಬ್ಧವಿರುವ ಮಹಾಭಾರತವು ಕ್ರಿಸ್ತೀಶಕ ಪೂರ್ವದಲ್ಲಿ ೨೦೦ ವರ್ಷ ರಚಿಸಲ್ಪಟ್ಟಿತೆಂದೂ ಅದಕ್ಕೂ ಪೂರ್ವದಲ್ಲಿ 'ಭಾರತ' ಅಥವಾ 'ಜಯ' — ತತೋ ಜಯಮುದೀರಯೇತ್, ಎಂದು ಮಹಾಭಾರತದ ಆದಿ ಶ್ಲೋಕದಲ್ಲಿ ಇರುವದು — ಎಂಬ ಹೆಸರಿನ ಸಣ್ಣ ಪುರಾಣವಿತ್ತೆಂದೂ ಅದನ್ನೇ ಮುಂದೆ ವ್ಯಾಸರು ವಿಸ್ತಾರವಾಗಿ ಬರೆದರೆಂದೂ ವಿದ್ವಾಂಸರು ಹೇಳುವರು. ಭಾರತೀಯ ಯುದ್ಧದ ಕಾಲವು ಕ್ರಿಸ್ತೀಶಕದ ಪೂರ್ವಕ್ಕೆ ೧೪೦೦ ವರ್ಷವೆಂದು ಅನ್ಯ ಕೆಲವು ವಿದ್ವಾಂಸರ ಮತವು. ಐತಿಹಾಸಿಕ ದೃಷ್ಟಿಯಿಂದ ಅದು ಕೃಷ್ಣಪ್ರಣೀತ ಗ್ರಂಥವಹುದೋ ಅಲ್ಲವೊ, ಅದು ವ್ಯಾಸಕೃತವೇ ಇರಬಹುದು, ಇಂತಹ ದೊಡ್ಡ ಗ್ರಂಥವು ಸಮರಸಮಯ ದಲ್ಲಿ ಹೇಳಲ್ಪಟ್ಟಿರುವದು ಶಕ್ಯವೇ ಇಲ್ಲ ಎಂಬ ಮುಂತಾದ ಸಂಶಯಗಳು ಕೆಲವರಿಂದ ನಮ್ಮ ಮುಂದೆ ಇಡಲ್ಪಡುತ್ತವೆ. ಇವೆಲ್ಲವುಗಳನ್ನು ಸಮಾ ಧಾನಪಡಿಸುವಂತೆ ಉತ್ತರಕೊಡುವದು ಈ ವಿವೇಚನೆಯ ಉದ್ದೇಶವಲ್ಲ. ಆದುದರಿಂದ ಅವುಗಳನ್ನು ನಾವು ಬದಿಗಿರಿಸುವೆವು; ಮತ್ತು ಅವು ಅಧ್ಯಾ ತ್ಮಿಕ ಸಾಧಕರ ದೃಷ್ಟಿಯಿಂದ ಅಷ್ಟೊಂದು ಮಹತ್ವದ ಪ್ರಶ್ನೆಗಳಲ್ಲವೆಂದು ತಿಳಿದು ಅವುಗಳಿಗೆ ಉತ್ತರಕೊಡುವ ಭಾರವನ್ನು ವಿದ್ವಾಂಸರ ಮೇಲೂ ಸಂಶೋಧಕರ ಮೇಲೂ ಹಾಕುತ್ತೇವೆ.

**ಗೀತೋಪದೇಶದ ಪ್ರಸಂಗವು—** ಮಹಾಭಾರತದ ಕಾಲನಿರ್ಣ ಕ್ಕಿಂತ, ಭಾರತೀಯ ಯುದ್ಧದ ಕಾಲನಿಶ್ಚಯಕ್ಕಿಂತ ನಮಗೆ ಗೀತೋಪ ದೇಶದ ಪ್ರಸಂಗವು ಹೆಚ್ಚು ಮಹತ್ವದ್ದೆನಿಸುವದು. ಈ ಪುಸ್ತಕವನ್ನು ಅಧ್ಯಾತ್ಮಿಕ ಸಾಧನೆಯ ದೃಷ್ಟಿಯಿಂದಲೇ ಬರೆಯುತ್ತಿರುವದರಿಂದ ಓದುವ ವರು ಇತ್ತಕಡೆಯೇ ಹೆಚ್ಚು ಲಕ್ಷವನ್ನು ಕೊಡಬೇಕೆಂದು ನಮ್ಮ ಬಿನ್ನಹ ವಿರುವದು. ಭರತಖಂಡದಲ್ಲಿ ಭಾರತೀಯ ಯುದ್ಧದ ಕಾಲಕ್ಕೆ ಕುರುಕುಲ ವೆಂದರೊಂದು ಅತ್ಯಂತ ವಿಸ್ತಾರವಾಗಿ ಬೆಳೆದು ಬಲಾಢ್ಯವಾದ ಪ್ರಚಂಡ ವಂಶವಿತ್ತು. ಆದರೆ ಕುರುರಾಜನಾದ ಧೃತರಾಷ್ಟ್ರ ಮತ್ತು ಪಂಡು ಎಂಬ ಅಣ್ಣತಮ್ಮಂದಿರ ಹೊಟ್ಟೆಯಲ್ಲಿ ಹುಟ್ಟಿದ ಕೌರವ ಪಾಂಡವರ ನಡುವೆ

ಅಣ್ಣತಮ್ಮಕಿಯ ಜಗಳವು ಹುಟ್ಟಿ ಆ ಬೇಗೆಯು ಇಡೀ ಭರತಖಂಡ ವನ್ನು ವ್ಯಾಪಿಸಿತು. ಶಿಷ್ಟಾಯಿಗಿಷ್ಟಾಯಿಗಳು ಮುಗಿದು ಯುದ್ಧದ ಹೊರ್ತು ನಿರ್ಣಯವಾಗುವದಿಲ್ಲವೆಂದು ಕಂಡದೂಡಲೆ ಉಭಯ ಪಕ್ಷ ದವರೂ ಇಡೀ ಭರತಖಂಡದಲ್ಲಿಯ ಎಲ್ಲ ಅರಸರನ್ನು ಕರೆದು ತಮ್ಮ ತಮ್ಮ ಪಕ್ಷಗಳನ್ನು ಬಲಗೊಳಿಸಿ ೧೮ ಅಕ್ಷೌಹಿಣೀ-ಸುಮಾರು ೨ ಕೋಟಿ ಕಾಲಾ ಳುಗಳು ೧೧ ಲಕ್ಷ ರಾವುತರು ಮತ್ತು ೪ ಲಕ್ಷ ರಥಿಕರು-ಸೈನ್ಯವನ್ನು ಕುರುಕ್ಷೇತ್ರದ ಮೇಲೆ ತಂದು ನಿಲ್ಲಿಸಿದರು. ೧೧ ಅಕ್ಷೌಹಿಣಿ ಸೈನ್ಯವು ಕೌರವರ ಪಕ್ಷಕ್ಕಿತ್ತು, ೭ ಅಕ್ಷೌಹಿಣಿ ಸೈನ್ಯವು ಪಾಂಡವರ ಕಡೆಗಿತ್ತು. ಈ ಪ್ರಸಂಗದಲ್ಲಿ ಯಾದವಶ್ರೇಷ್ಠನೂ ವೃಷ್ಣಿಕುಲಲಲಾಮನೂ ಆದ ಶ್ರೀಕೃಷ್ಣನು ಪಾಂಡವರ ಪಕ್ಷವನ್ನು ಕಟ್ಟಿದ್ದನು. ಆದರೆ ತನ್ನ ಯಾದವ ಸೈನ್ಯವನ್ನು ಕೌರವರಿಗೆ ಕೊಟ್ಟು ತಾನು ಅರ್ಜುನನ ಸಾರಥ್ಯವನ್ನು ಮಾತ್ರ ಸ್ವೀಕರಿಸಿದ್ದನು. ಹೀಗೆ ಉಭಯಸೈನ್ಯಗಳು ಸನ್ನದ್ಧವಾಗಿ ಎದುರು ಬದುರು ನಿಂತವು. ಇನ್ನು ಸ್ವಲ್ಪಕಾಲದಲ್ಲಿ ತುಮುಲಯುದ್ಧಕ್ಕೆ ಪ್ರಾರಂಭ ವಾಗುವ ಸಂಧಿಯು. ಆದರೆ ಅಷ್ಟರಲ್ಲಿ ನಡುವೆ ಒಂದು ಅತ್ಯಂತ ಮಹ ತ್ವದ ಸಂಗತಿಯು ಒದಗಿತು. ಅದೇನಂದರೆ, ಅರ್ಜುನನ ವಿಷಾದವು ಮತ್ತು ಅದರ ಸಮಾಧಾನಕ್ಕಾಗಿ ಹೇಳಿದ ಗೀತೆಯ ಉಪದೇಶವು. ನಿಜ ವಾಗಿ ವಿಚಾರಿಸಿದರೆ ಆ ಸೇನಾಸಮುದ್ರವನ್ನೂ ಆ ಉಭಯ ಪಕ್ಷದ ವೀರ ರನ್ನೂ ಆ ರಣಪ್ರಸಂಗವನ್ನೂ ಧರ್ಮರಾಜನ ಪಕ್ಷದ ಸತ್ಯತ್ವವನ್ನೂ ನೋಡಿ ಪ್ರತಿಯೊಬ್ಬ ಕ್ಷಾತ್ರವೀರನ ಬಾಹುಗಳು ಸ್ಫುರಣ ಹೊಂದಲಿಕ್ಕೆ ಬೇಕು. ಇಂಥ ಪ್ರಸಂಗವು ಜನ್ಮದಲ್ಲಿ ಒಂದೇ ಒಂದು ಬರುವದು ಶಕ್ಯವು. ಕುಸ್ತಿಯ ಕಣವನ್ನೂ ಸರಿಜೋಡಿಯ ಆಳನ್ನೂ ನೋಡಿ ಯಾವ ಮಲ್ಲನ ಮೈಯುಬ್ಬಲಿಕ್ಕಿಲ್ಲ? ವಿಸ್ತೃತ ಸಭಾಮಂದಿರವನ್ನೂ ವಿದ್ವಾಂಸ ಸಭಿಕ ರನ್ನೂ ನೋಡಿ ಯಾವ ವಕ್ತೃವಿನ ವಾಣಿಯು ಸ್ಫುರಿಸಲಿಕ್ಕಿಲ್ಲ? ನಿಸ ರ್ಗದ ಬನಸಿರಿಯನ್ನು ನೋಡಿ ಅಥವಾ ಸಂಸಾರದಲ್ಲಿಯ ಅನೇಕ ಕರುಣಾ ಸ್ಪದ ಸಂಗತಿಗಳನ್ನು ನೋಡಿ ಅಥವಾ ದಿವ್ಯ ಸುಂದರಿಯರ ರೂಪವನ್ನು ನೋಡಿ ಯಾವ ಕವಿಯ ವಾಕ್ಪ್ರವಾಹವು ಹರಿಬೀಳಲಿಕ್ಕಿಲ್ಲ? ಆದರೆ ಆ ಎಲ್ಲ ನೋಟವನ್ನು ನೋಡಿ ಹುಟ್ಟ ಕ್ಷತ್ರಿಯನಾದ ಅರ್ಜುನನಿಗೆ ರಣ

ಸ್ಫೂರ್ತಿಯಾಗುವದೊತ್ತಟ್ಟಿಗಿರಲಿ. ಅವನಿಗೆ ರಣಗ್ಲಾನಿಯು ಬಂದಿತು. ಸೋತವನಂತೆ ಸುತ್ತಿಕೊಂಡು ಬಿದ್ದು ಸರ್ವರಿಗೆ ಸೋಜಿಗವಾಗುವಂತೆ ಅವನು ಸ್ವಸ್ಥನಾಗಿಬಿಟ್ಟನು.

**ಅರ್ಜುನನ ಸ್ಥಿತಿಯು**— ಧರ್ಮಯುದ್ಧವೆಂದರೆ ಕ್ಷತ್ರಿಯರಿಗೆ ಒಂದು ಸಾಮಾನ್ಯ ವಿಷಯವು. ಪಾರ್ಥನು ಇಂಥ ಎಷ್ಟೋ ಯುದ್ಧಗಳನ್ನು ಹಿಂದಕ್ಕೆ ಆಡಿದ್ದನು, ಮುಂದೆ ಆಡುವವನಿದ್ದನು. ಕ್ಷಾತ್ರಧರ್ಮದ ವೀರವೃತ್ತಿಗೆ ಸಲ್ಲುವ ಹೋರಾಟಗಳಲ್ಲಿ ಅವನಿಗೆ ಈ ತರದ ದೌರ್ಬಲ್ಯವು ಮತ್ತು ಕನಿಕರವು ಎಂದಿಗೂ ಬಂದಿರಲಿಲ್ಲ. ಆದರೆ ಈ ಘನಘೋರ ಯುದ್ಧಸಂಧಿಯಲ್ಲಿ ಪರಸ್ಪರರನ್ನು ಕಡಿದು ಕೊಲ್ಲಲಿಕ್ಕೆ ಸನ್ನದ್ಧರಾಗಿ ಎದುರುನಿಂತ ದುರ್ಯೋಧನಾದಿ ಬಂಧುಬಳಗದವರನ್ನು ದ್ರೋಣಾಚಾರ್ಯಾದಿ ಗುರುಹಿರಿಯರನ್ನು ಭೀಷ್ಮಾದಿ ಅಜ್ಜಮುತ್ತಂದಿರನ್ನು ಶಲ್ಯಾದಿ ಸ್ನೇಹಿತರನ್ನು ನೋಡಿ ತಾನು ನಡೆಸಿರುವದು ಧರ್ಮಕೃತ್ಯವೋ ಎಂಬ ಸಂಶಯವು ಅವನಿಗೆ ಹುಟ್ಟಿತು. ಇದುವರೆಗೆ ಬಾರದಿದ್ದ ಪ್ರಸಂಗವು ಈಗ ಬಂದಿತು. ಮೈ ಬೆಂವೆಯಿತು, ಬಾಯಿ ಒಣಗಿತು, ಮೋರೆ ಕಳೆಗೆಟ್ಟಿತು, ಕೈಕಾಲು ಹೋದವು, ತನ್ನ ಟಣತ್ಕಾರದಿಂದ ತ್ರಿಲೋಕಗಳನ್ನು ತತ್ತರಿಸುವ ಗಾಂಡೀವವು ಕೈಯೊಳಗಿಂದ ಕಳಚಿ ಬಿದ್ದಿತು. ಎದುರಾದ ಪ್ರಸಂಗವನ್ನು ನೋಡಿ ಎದೆಗೆಟ್ಟಿತು. ಮನಸಿನಲ್ಲಿ ಕಾರುಣ್ಯವು ಹುಟ್ಟಿತು. ಪಿತೃಪಿತಾಮಹರನ್ನು ತುಂಡರಿಸುವದು ಘನಪಾತಕವೆಂಬ ಕಲ್ಪನೆಯು ಬಂದಿತು. ಬಳಗದವರ ನೆತ್ತರದಿಂದ ತಪತಪನೆನ್ನುವ ರಾಜ್ಯಭೋಗಗಳನ್ನು ಭೋಗಿಸುವದಕ್ಕಿಂತ ಸನ್ಯಾಸವು ಲೇಸು, ಬಿಕ್ಷೆಬೇಡುವದುತ್ತಮ ಎಂಬ ವೃಥಾಲಾಪಗಳು, ಕ್ಷತ್ರಿಯನಿಗೆ ಸಲ್ಲದ ಉಕ್ತಿಗಳು, ದುರ್ಬಲ ದಯೆಯ ವಚನಗಳು, ಅವನ ಬಾಯಿಂದ ಬರಲಾರಂಭಿಸಿದವು. ಹಿಂದೆ ತಾನು ಮಾಡಿದ್ದೆಲ್ಲ ಮೂರ್ಖತನವಿರಬಹುದೋ ಯುದ್ಧಮಾಡುವದು ಪಾಪವಿರಬಹುದೋ ಎಂದು ಅರ್ಜುನನಿಗೆ ಎನಿಸಿತು. ಕ್ಷಣಹೊತ್ತು ನ್ಯಾಯಾನ್ಯಾಯದ ವಿಚಾರವು ಅವನನ್ನು ಬಿಟ್ಟಿತು. ತಾವು ಮಾಡುವದೇ ಅನ್ಯಾಯವು ಕೌರವರು ಮಾಡುವದೇ ನ್ಯಾಯವು ಎಂದು ತೋರಿತು. ಕಾಮಾಣಿಯಾದವನಿಗೆ ಎಲ್ಲವೂ ಅರಿಸಿಣ ಬಣ್ಣದ್ದಾಗಿ ಕಾಣುವಂತೆ ಅರ್ಜು

ಸನಿಗೆ ಎಲ್ಲ ಕಡೆಗೂ ಉದಾಸೀನತೆಯೇ ಕಾಣಲಾರಂಭಿಸಿತು. ಕ್ಷತ್ರಿಯರು ಧರ್ಮಯುದ್ಧ ಮಾಡತಕ್ಕದ್ದು, ತಾನು ಕ್ಷತ್ರಿಯನು, ಯುದ್ಧಮಾಡಿ ದುಷ್ಟರನ್ನು ಸಂಹರಿಸಬೇಕು, ಎಂಬ ಮೊದಲಿನ ಧ್ಯೇಯಗಳೆಲ್ಲ ಕರಗಿ ನೀರಾಗಿ ಮುಂದಿನ ಹಾದಿಯು ಕಾಣದಾಗಿ ಅರ್ಜುನನು ಮುಗ್ಧನಂತೆ ನಿಂತನು.

**ಹದಗೆಡುವ ವೇಳೆಯು**— ಅರ್ಜುನನ ಆಯುಷ್ಯದಲ್ಲಿ ಇದು ಒಳ್ಳೇ ಸಂಧಿಸಮಯವು, ಸಂಕ್ರಮಣಾವಸ್ಥೆಯು. ಭಾರತೀಯ ಯುದ್ಧದಲ್ಲಿ ಕೂಡ ಈ ಪ್ರಸಂಗವು ಅನುಪಮವು, ಅನ್ಯಾದೃಶವು. ಈ ಸಮಯದಲ್ಲಿ ಅರ್ಜುನನು ನಿಜವಾಗಿ ಸನ್ಯಾಸವನ್ನು ತಾಳಿ ಗಾಂಡೀವವನ್ನು ಚಲ್ಲಿ ಶಾಟಿಯನ್ನು ಹೊತ್ತು ಹೊರಬಿದ್ದಿದ್ದರೆ ಕುರುಪಾಂಡವರ ಯುದ್ಧದ ಪರಿಣಾಮವು ಏನಾಗುತ್ತಿತ್ತೆಂಬುದನ್ನು ವಿಚಾರಿಸಿದರೆ ಈ ಪ್ರಸಂಗವು ಎಷ್ಟು ಇರುಕಿನದಿತ್ತೆಂಬದು ಪ್ರತೀತಿಗೆ ಬರುವದು. ದುಷ್ಟನಿಗ್ರಹ ಶಿಷ್ಟಪರಿಪಾಲನಕ್ಕಾಗಿ ಅವತಾರವೆತ್ತ ಶ್ರೀಕೃಷ್ಣನು ಇದುವರೆಗೆ ನಾನಾಯುಕ್ತಿಶಕ್ತಿಗಳಿಂದ ಬೇರೆ ಬೇರೆ ದುಷ್ಟರನ್ನು ಸಂಹರಿಸಿದ್ದನು. ಒಮ್ಮೊಮ್ಮೆ ತಾನೇ ಇನ್ನೊಮ್ಮೆ ಮತ್ತೊಬ್ಬರ ಕೈಯಿಂದ ಹೀಗೆ ಸತ್ಯಧರ್ಮದ ಶತ್ರುಗಳನ್ನೆಲ್ಲ ಸೃಷ್ಟಿಯೊಳಗಿಂದ ಸವರಿ ಸವರಿಸಿ ಧರ್ಮರಾಜ್ಯಸ್ಥಾಪನೆಗೆ ಯೋಗ್ಯವಾದ ವಾತಾವರಣವನ್ನೂ ಪರಿಸ್ಥಿತಿಯನ್ನೂ ಉಂಟುಮಾಡಿದ್ದನು. ದುಷ್ಟರ ನಾಶವೆಂಬ ಯಜ್ಞದ ಯಾಜಕನಾದ ಶ್ರೀಕೃಷ್ಣನು ಕುರುಕ್ಷೇತ್ರದ ಪುಣ್ಯಭೂಮಿಯ ಮೇಲೆ ಪಾರ್ಥಸಾರಥಿಯಾಗಿ ಕೌರವರ ಪೂರ್ಣಾಹುತಿಕೊಡುವ ಉದ್ದೇಶದಿಂದ ಎಲ್ಲ ಸಿದ್ಧತೆಯನ್ನು ಮಾಡಿದ್ದನು. ಅರ್ಜುನನೇ ಈ ಕೊನೆಯ ಯಜ್ಞದ ಅಧ್ವರ್ಯುವೆಂದು ಆವನು ಕಲ್ಪಿಸಿದ್ದನು. ಅಷ್ಟರಲ್ಲಿ ಆ ಅಧ್ವರ್ಯುವೇ ಕೈಬಿಡಲಿಕ್ಕೆ ನಿಂತನು. ಯಜ್ಞಘಾತವಾಗುವ ಕಠಿನ ಪ್ರಸಂಗವು ಬಂದೊದಗಿತು. ಈ ಕಪಟನಾಟಕದ ನಾಯಕನೇ ಒಳ್ಳೆ ಇಕ್ಕಟ್ಟಿನ ವೇಳೆಗೆ ತನ್ನ ಭೂಮಿಕೆ ಮಾಡುವದನ್ನು ನಿರಾಕರಿಸಲನುವಾದನು. ಆದರೆ ಶ್ರೀಕೃಷ್ಣನು ನಿಜವಾದ ಸೂತ್ರಧಾರನು. ಅವನು ಸರ್ವಪ್ರೇರಕನು, ಸರ್ವಸ್ಫೂರ್ತಿಯ ಮೂರ್ತಿಯು, ಸರ್ವಜ್ಞಾನದ ಜ್ಯೋತಿಯು, ಸರ್ವನಿಯಾಮಕ ಶಕ್ತಿಯು. ಈ ಸಂಧಿಗೆ ಅರ್ಜುನನ ಮನದಲ್ಲಿ ಮೋಹದ

ಮೋಡಗಳು ಮುಸುಕಿದಾಗ ಒಂದು ಬಗೆಯಿಂದ ಭರತಭೂಮಿಯು ಧರ್ಮದ ಮೇಲೆಯೆ ಅಧರ್ಮದ ದಾಳಿ ಬಂದು ಎತ್ತೆತ್ತಲೂ ನಿರಾಶೆಯ ಅಂಧಃಕಾರವು ಪಸರಿಸಿದಾಗ ಜ್ಞಾನಸೂರ್ಯನ ಕಿರಣಗಳಿಂದ, ಗೀತಾ ಧರ್ಮದ ಉಪದೇಶದಿಂದ ತಮಸ್ಸಿನ ನಾಶಮಾಡಿ ಶ್ರೀಕೃಷ್ಣನು ಯಥಾರ್ಥವಾಗಿ ಧರ್ಮಪ್ರವರ್ತಕನೂ, ತತ್ತ್ವೋಪದೇಶಕನೂ, ಆರ್ಯಶ್ರೇಷ್ಠನೂ, ಭಾರತೀಯರಿಗೆ ಆದರ್ಶಭೂತನೂ ಆದನು.

**ಅರ್ಜುನನ ಮೋಹವು**— ಈ ಪ್ರಸಂಗದಲ್ಲಿ ಅರ್ಜುನನಿಗೆ ಎದುರಾದ ಪ್ರಶ್ನೆಯು ಸಾಮಾನ್ಯವಾದುದಲ್ಲ. ಅವನದು ರಣವೈರಾಗ್ಯವಿದ್ದಿಲ್ಲ. ಅವನಿಗೆ ಭೀತಿಯು ಬಡಕೊಂಡಿರಲಿಲ್ಲ. ಅವನ ಪ್ರಶ್ನೆಯು ಕೇವಲ ವಿಚಾರವಿಷಯಕವಿದ್ದಿಲ್ಲ ಅಥವಾ ತತ್ವಜ್ಞಾನವಿಷಯಕವಿದ್ದಿಲ್ಲ. ಆದರೆ ಯಾವುದನ್ನು ಸಹಜವಾಗಿ ನಿತ್ಯಕರ್ಮದಂತೆ ಮಾಡಲೋಸುಗ ಅವನು ಸಿದ್ಧನಾಗಿ ನಿಂತಿದ್ದನೋ ಆ ಯುದ್ಧವೇ ಪಾಪಕರ್ಮವೆಂದು ಅವನಿಗೆ ತೋರತೊಡಗಿತು. ಯಾವ ತತ್ವಜ್ಞಾನವನ್ನು ಯಾವ ಆದರ್ಶಗಳನ್ನು ಯಾವ ವಿಚಾರಗಳನ್ನು ಮುಂದಿಟ್ಟುಕೊಂಡು ಅರ್ಜುನನು ತನ್ನ ಆಯುಷ್ಯಕ್ರಮವನ್ನು ಇದುವರೆಗೆ ನಡೆಸಿದ್ದನೋ ಅವೆಲ್ಲ ಕುರುಕ್ಷೇತ್ರದಲ್ಲಿ ಕೌರವರು ಎದುರಾದ ಕೂಡಲೇ ಕುಸಿಬಿದ್ದವು. ಮುಂದೆ ಹರಿಯುವ ನೆತ್ತರದ ಕಾವಲಿಗಳಿಗೆ, ಕಾಳಗದಲ್ಲಿ ಆಗುವ ಬಂಧುಗಳ ಕೊಲೆಗೆ ತಾನೇ ಕಾರಣನು ಎಂಬ ಕಲ್ಪನೆಯಿಂದ ಅವನಿಗೆ ನಡುಗು ಹುಟ್ಟಿತು. ಹೀಗೆ ಮೈಗೆ ಕಂಪವು, ಮನಸಿಗೆ ಮೋಹವು, ಬುದ್ಧಿಗೆ ಸಂಶಯವು, ಆತ್ಮಕ್ಕೆ ದೌರ್ಬಲ್ಯವು, ಆವರಿಸಿ ಅವನ ಸ್ಥಿತಿಯು ಅತ್ಯಂತ ಕರುಣಾಸ್ಪದವಾಯಿತು. ಅವನನ್ನು ಶೋಷಿಸುವ ಶೋಕವು ಅಸಹ್ಯವಾಯಿತು. ಅವನ ಇಡೀ ಜೀವಕ್ಕೆ ದೊಡ್ಡ ಧಕ್ಕೆಯು ಬಡಿದು, ಅವನ ಜೀವನವೃಕ್ಷದ ಬೇರುಗಳೆಲ್ಲ ಸಡಿಲಾಗಿ ಏನು ಮಾಡಬೇಕು ಏನು ಬಿಡಬೇಕು ಎಂಬ ಧರ್ಮಸಂಮೂಢ ಸ್ಥಿತಿಗೆ ಅವನು ಈಡಾದನು. ಅವನ ರೋಗವು ಸಾಮಾನ್ಯವಿದ್ದಿಲ್ಲ. ಶಕ್ತಿಪಾತ ಮಾಡುವ ಕ್ಷಯರೋಗವೇ ಅವನಿಗೆ ಗಂಟುಬಿದ್ದಿತ್ತು. ತನ್ನ ಧರ್ಮವೇನು, ತಾನು ಯಾರು, ತನಗೆ ಎದುರಾದವರಾರು, ಅವರನ್ನು ಏಕೆ ಹೊಡೆಯಬೇಕು, ಹೊಡೆಯುವದು ನ್ಯಾಯವೊ ಅನ್ಯಾಯವೊ ಎಂಬು

ದಾವುದೂ ಅವನಿಗೆ ತಿಳಿಯದಂತಾಯಿತು. ಕಣ್ಣು ಕಟ್ಟಿ ಕಾಡಿನಲ್ಲಿ ಬಿಟ್ಟಂತೆ ಅವನ ಗತಿಯಾಯಿತು. ಮುಪ್ಪಿನ ಮುದುಕನ ಕೈಯ ಕೋಲನ್ನೇ ಕಸಿದು ಬೀಸಿದಂತಾಯಿತು. ಮುಂದಾಗುವ ಘಸಕೊಲೆಯು ಕಣ್ಣುಮುಂದೆ ಕಟ್ಟಿದಂತಾಗಿ ಅಸ್ತ್ರಘಾತವು ಬಂದು ಅವನ ಮೈಗೆ ತೊಡೆ ದಂತಾಯಿತು. ಮೈಸೋತು, ಮನವಳಿದು, ಶ್ರದ್ಧೆಯಡಗಿ ಜೀವವು ಬೇಡಾಯಿತು.

**ಅರ್ಜುನನು ಶಿಷ್ಯನು**— ಹೀಗಾಗಲಿಕ್ಕೆ ಅರ್ಜುನನೇನು ಸಾಧಾರಣ ಮನುಷ್ಯನೇ? ಅವನು ಶ್ರೇಷ್ಠ ಸೋಮವಂಶದ ಪ್ರಸಿದ್ಧವಾದ ಕುರುಕುಲದ ಆರ್ಯನು. ಪ್ರವೃತ್ತಿಯಿಂದ ವೀರಕ್ಷತ್ರಿಯನು. ಸಮರದಲ್ಲಿ ಸಿಂಹನು. ಶ್ರೀಕೃಷ್ಣನ ಭಕ್ತಿಸಹವಾಸಗಳಿಂದ ಮುಮುಕ್ಷುವಾದವನು. ಪರಮ ಭಾಗವತನು. ದೈವೀ ಸಂಪತ್ತಿಯಿಂದ ಪರಿಪೂರ್ಣನು. ವನವಾಸ ಮುಂತಾದ ಕಷ್ಟನಷ್ಟಗಳಿಂದ ಸುಟ್ಟ ಸುವರ್ಣದಂತೆ ಪರಿಶುದ್ಧನಾದವನು. ಹೆಚ್ಚಿನ ಸಾಧಕಾಗ್ರಣಿಯು. ಇಂಥ ಯೋಗ್ಯತೆಯುಳ್ಳವನ ಮನಸು ಸಹ ಆ ಪ್ರಸಂಗದಲ್ಲಿ ಬಿರುಗಾಳಿಯ ಬಾಯಿಗೆ ಬಿದ್ದ ಡೋಣಿಯಂತೆ ಚಲಬಿಚಲವಾಗಿ, ದಿಕ್ಕು ತಪ್ಪಿ, ಧೈರ್ಯಬಿಟ್ಟು, ಕಿಂಕರ್ತವ್ಯಮೂಢವಾಯಿತು. ತನ್ನ ಬಳಗದವರನ್ನೇ ತಾನು ಹೇಗೆ ಕೊಲಬೇಕು ಎಂಬ ಪ್ರಶ್ನೆಯು ಕಾಣಲಿಕ್ಕೆ ಚಿಕ್ಕದು. ಆದರೂ ಅದರಿಂದ ಅವನ ಧೈರ್ಯ ಶೌರ್ಯ ಸಾಹಸಗಳೆಲ್ಲ ಮಾಯವಾಗಿ ಅವನು ರಥದಲ್ಲಿ ಕುಕ್ಕರಿಸಿಬಿಟ್ಟನು. ಸುದೈವದಿಂದ ಅವನ ಬದಿಗೆ ಶ್ರೀಕೃಷ್ಣನು ಇದ್ದನೆಂದು ಪರಿಣಾಮವಾಯಿತು. ಅವನೇ ತನ್ನ ತಾರಕನು, ಸಂಶಯನಿವಾರಕನು, ಶೋಕಪರಿಹಾರಕನು, ಜೀವನೋದ್ಧಾರಕನು ಎಂಬದನ್ನು ಗುರ್ತಿಸಿ ಕೂಡಲೆ 'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ'—ಹೇ ಸ್ವಾಮಿನ್ ನಾನು ನಿನ್ನ ಶಿಷ್ಯನು, ನಿನಗೆ ಅನನ್ಯ ಶರಣಾಗತನು, ನನ್ನನ್ನು ಹಾದಿಗೆ ಹಚ್ಚು ಎಂದು ಬೇಡಿಕೊಂಡನು.

**ಪ್ರಶ್ನೆಯು ಸಾಮಾನ್ಯವಲ್ಲ**— ಅರ್ಜುನನು ಸಾಮಾನ್ಯ ಮನುಷ್ಯನಾಗಿದ್ದರೆ ಅಥವಾ ಅವನಿಗೆ ಎದುರಾದ ಪ್ರಶ್ನೆಯು ಸಾಧಾರಣವಾಗಿದ್ದರೆ ಅವನ ಸಮಾಧಾನವನ್ನು ಯಾರಾದರೂ ಸಾಮಾನ್ಯ ಬುದ್ಧಿವಾದದಿಂದ

ಮಾಡಬಹುದಾಗಿತ್ತು. ಸಾಧಾರಣವಾದ ಉಪದೇಶದಿಂದ ಅವನನ್ನು ಸ್ಫೂರ್ತಿಗೊಳಿಸುವದು ಸುಲಭವಾಗುತ್ತಿತ್ತು. ಹ್ಯಾಂವು, ಹುರುಪು, ಸ್ವಾರ್ಥ, ಕೀರ್ತಿಯ ಕಲ್ಪನೆ ಮುಂತಾದ ಭಾವನೆಗಳನ್ನು ಅರ್ಜುನನ ಮನಸಿನಲ್ಲಿ ಎಚ್ಚರಿಸುವದು ಶ್ರೀಕೃಷ್ಣನಿಗೆ ಕಠಿನವಿದ್ದಿಲ್ಲ. ಸಂವಾದದ ಆರಂಭದಲ್ಲಿ ಈ ಭಾವನೆಗಳನ್ನು ಜಾಗೃತಮಾಡಬೇಕೆಂದು ಶ್ರೀಕೃಷ್ಣನು ಪ್ರಯತ್ನವನ್ನಾದರೂ ಮಾಡಿದನು. ಆದರೆ ಅರ್ಜುನನ ರೋಗವು ಇಷ್ಟು ಸುಲಭಸಾಧ್ಯವಿರಲಿಲ್ಲ. ಅರ್ಜುನನ ನಿರುತ್ಸಾಹವಾಗಲಿ ದಯಾಬುದ್ಧಿಯಾಗಲಿ ಅವನ ಕಿಂಕರ್ತವ್ಯಮೂಢತೆಯಾಗಲಿ ಸಾಮಾನ್ಯ ತರ್ಕಕೋಟಿಗಳಿಂದ ಪರಿಹಾರವಾಗುವಂತಹದಿರಲಿಲ್ಲ. 'ಷಂಢನಂತೆ ಹೀಗೆ ಮಾಡಬೇಡ, ಇದು ನಿನಗೆ ಶೋಭಿಸುವದಿಲ್ಲ. ಅನಾರ್ಯನಂತೆ ವರ್ತಿಸಿ ನರಕಕ್ಕೆ ಗುರಿಯಾಗಬೇಡ, ಇದರಿಂದ ಕೀರ್ತಿಗೇಡಿಯಾಗುವಿ. ಹೀಗೆ ಮಾಡಿದರೆ ನಿನಗೆ ಜನರು ಅನೇಕ ಹೆಸರುಗಳನ್ನಿಡುವರು, ಹೇಡಿ ಅನ್ನುವರು. ಸತ್ತರೆ ವೀರಸ್ವರ್ಗವನ್ನು ಹೊಂದುವಿ. ಉಳಿದರೆ ರಾಜ್ಯವನ್ನು ಭೋಗಿಸುವಿ. ಅಂದಮೇಲೆ ನಿನಗೆ ಈ ವಿಚಾರವೇಕೆ? ನೀನು ಕ್ಷತ್ರಿಯನು, ಯುದ್ಧಮಾಡುವದೇ ನಿನ್ನ ಧರ್ಮವು, ಅದನ್ನು ಮಾಡು, ಎರಡನೆಯ ವಿಚಾರವನ್ನು ಮಾಡಬೇಡ,' ಎಂದು ಪರಿಪರಿಯಿಂದ ಬೇಕಾದಷ್ಟು ಹೇಳಿದರೂ ಅರ್ಜುನನಿಗೆ ಅದು ಸಮ್ಮತವಾಗಲಿಲ್ಲ. ಯಾಕಂದರೆ ಬಳಗದವರನ್ನು ಹೇಗೆ ಕೊಲ್ಲಬೇಕು, ಎಂಬುದೊಂದೇ ಪ್ರಶ್ನೆಯು ಅರ್ಜುನನಿಗೆ ಎದುರಾಗಿತ್ತೆಂದು ಮೇಲೆಮೇಲೆ ನೋಡುವವರಿಗೆ ಕಂಡರೂ ಅವನ ಅಂತಃಕರಣದೊಳಗಿನ ಅಲ್ಲೋಲಕಲ್ಲೋಲವು ಅವನ ಇಡೀ ವಿಚಾರದಲ್ಲಿಯೆ ಕ್ರಾಂತಿಯನ್ನು ನಡೆಸಿತ್ತು. ತಾನು ಮಾಡುವವನೆಂಬ ಅಹಂಕಾರದ ಮೂಲಕ, ತಾನು ಮಾಡಿದ ಕರ್ಮವು ತನ್ನ ಬೆನ್ನು ಬಿಡದು ಎಂಬ ವಿಚಾರದ ಮೂಲಕ ಅವನು ತಲ್ಲಣಗೊಳ್ಳುತ್ತಿದ್ದನು. ಇಂಥ ಪ್ರಸಂಗದಲ್ಲಿ ಶ್ರೀಕೃಷ್ಣನಂಥ ಪೂರ್ಣಪ್ರಜ್ಞನೇ ಅವತಾರಿಯೇ ಮನುಷ್ಯನ ಮೋಹವನ್ನು ನಷ್ಟ ಮಾಡಿ ಅವನಿಗೆ ನವಜೀವನವನ್ನು ಕೊಡುವದು ಸಾಧ್ಯವು. ತನಗೆ ದಾರೀ ತೋರುವವನು ಇವನೇ ಎಂಬ ಶ್ರದ್ಧೆಯು ಅರ್ಜುನನಲ್ಲಿ ಹುಟ್ಟಿದ್ದರಿಂದಲೆ ತನ್ನ ಸರ್ವ ಬುದ್ಧಿಸಾಮರ್ಥ್ಯವನ್ನು ಅವನಿಗೆ ಒಪ್ಪಿಸಿ ಅನನ್ಯಭಾವದಿಂದ ಅವನ ಉಪದೇಶದ

ಅಪೇಕ್ಷೆಯನ್ನು ಮಾಡಿ ಆ ಅಮೃತವನ್ನು ಸೇವಿಸಲು ಚಾತಕನಂತೆ ಅರ್ಜುನನು ಉತ್ಕಂಠಿತನಾಗಿ ಕುಳಿತನು.

**ಶ್ರೀಕೃಷ್ಣನು ಗುರುವು**—ಶ್ರೀಕೃಷ್ಣನು ಈ ಪ್ರಸಂಗವನ್ನು ನೋಡಿ ತನ್ನ ಅವತಾರಕೃತ್ಯಗಳಲ್ಲಿಯು ಎಲ್ಲಕ್ಕೂ ಮಹತ್ವದ, ಸರ್ವ ಮಾನವ ಜಾತಿಯ ಹಿತದ, ಅತ್ಯಂದ ಉಚ್ಚತರ ಮಹತ್ಕಾರ್ಯವಾದ ಗೀತೋಪದೇಶವನ್ನು ಮಾಡಿದನು. ಅರ್ಜುನನು ಯಾವ ಪ್ರಕಾರವಾಗಿ ಎಲ್ಲಕ್ಕೂ ಹೆಚ್ಚಿನ ಜ್ಞಾನವನ್ನು ಕೇಳಲಿಕ್ಕೆ ಅಧಿಕಾರಿಯಾಗಿದ್ದನೋ ಅದೇ ರೀತಿ ಶ್ರೀಕೃಷ್ಣನು ಅತ್ಯಂತ ಶ್ರೇಷ್ಠವಾದ ಅಧಿಕಾರಿಯು. ತನ್ನ ಬಾಲ್ಯವನ್ನು ಅಜ್ಞಾತವಾಸವಾದ ಗೋಕುಲದಲ್ಲಿ ಗೋವಳರ ಕೂಡ ಕಳೆದಿದ್ದರೂ ಅವನು ಯಾದವಕುಲಭೂಷಣನು. ಕ್ಷತ್ರಿಯರ ವೀರತೆಯ ಮೂರ್ತಿಯು. ದುಷ್ಟಸಂಹಾರದಲ್ಲಿ ನಿಷ್ಣಾತನು. ತೇಜಸ್ವಿಯಾದ ವೀರಕರ್ಮಗಳನ್ನು ಮಾಡಿ ಮಾಡಿಸುವವರಲ್ಲಿ ಹಿರಿದಾದವನು. ಅವನು ಅಲಿಪ್ತನು, ಮಾಡಿ ಮಾಡದಂತಿರುವವನು. ದುಷ್ಟನಿಗ್ರಹಕ್ಕಾಗಿ, ಶಿಷ್ಟಪರಿಪಾಲನಕ್ಕಾಗಿ, ಧರ್ಮಗ್ಲಾನಿಯಾದಾಗ ಧರ್ಮಸಂಸ್ಥಾಪನಾರ್ಥವಾಗಿ ಜನ್ಮತಾಳಿದವನು. ತನ್ನ ಪ್ರಕೃತಿಯ ಪ್ರಭುವು. ತನ್ನ ಕರ್ತವ್ಯವೆಂಬುದೇನೂ ಇಲ್ಲದಿದ್ದರೂ ಕೇವಲ ಲೋಕಸಂಗ್ರಹಾರ್ಥವಾಗಿ, ಕೇವಲ ಸಮಾಜಸುವ್ಯವಸ್ಥೆಗಾಗಿ ಕೇವಲ ಲೋಕಧಾರಣೆಗಾಗಿ ಕರ್ಮ ಮಾಡುವವನು. ಜನರಿಗೆ ಶ್ರೇಷ್ಠವಾದ ಮೇಲುಪಂಕ್ತಿಯನ್ನು ಹಾಕಿಕೊಡುವವನು. ಅತ್ಯುಚ್ಚವಾದ ಅಧ್ಯಾತ್ಮಿಕ ಸ್ಥಿತಿಯಲ್ಲಿ ಸ್ಥಿರವಾಗಿ ನಿಂತು ನೈಷ್ಕರ್ಮ್ಯಸಿದ್ಧಿಯನ್ನು ಪಡೆದು ಆನಂದಮಯನಿದ್ದು ಲೀಲೆಯಿಂದ ಮಹತ್ಕರ್ಮಗಳನ್ನು ಸರ್ವಭೂತಗಳ ಹಿತಕ್ಕಾಗಿ ಮಾಡುವ ಮಹಾತ್ಮನವನು. ಅವನು ನಿಜವಾಗಿ ತ್ರಿಗುಣಾತೀತ ಸಿದ್ಧಪುರುಷನು. ಯಥಾರ್ಥವಾಗಿ ಅವತಾರಿಯು. ಪರಮಾತ್ಮಸ್ವರೂಪನು. ಲೀಲಾವಿಗ್ರಹಿಯಾಗಿ ಭೂಲೋಕದ ಭಾರವನ್ನಿಳುಹಲಿಕ್ಕೆ ಬಂದವನು. ದಿವ್ಯದೃಷ್ಟಿಯನ್ನು ಕೊಟ್ಟು ವಿಶ್ವರೂಪವನ್ನು ತೋರಿಸುವ ಸಾಮರ್ಥ್ಯವುಳ್ಳವನು. ಸರ್ವಭೂತಾಂತರಾತ್ಮನು. ಸರ್ವಭೂತಗಳ ಸುಹೃದನು. ಇಂಥ ಗುರುವು ದೊರೆತ ಮೇಲೆ ಅರ್ಜುನನ ಭಾಗ್ಯವು ಇಷ್ಟೆಂದು ಬಣ್ಣಿಸಬರುವುದೇ?

**ನರನಾರಾಯಣರು—** ಇದು ಐತಿಹಾಸಿಕದೃಷ್ಟಿಯಿಂದ ಕೃಷ್ಣಾರ್ಜುನರ ವರ್ಣನೆಯಾಯಿತು. ಇನ್ನೊಂದು ಬಗೆಯಿಂದ ನೋಡಿದರೆ ಇವರು ನರನಾರಾಯಣರು. ಯುದ್ಧಾರಂಭದಲ್ಲಿ ಅರ್ಜುನನು ದುರ್ಗಾದೇವಿಯ ಸ್ತವನವನ್ನು ಮಾಡಲು ಆಕೆಯು, 'ನರಸ್ತ್ವಮಸಿ ದುರ್ಧರ್ಷ ನಾರಾಯಣ ಸಹಾಯವಾನ್'— ನೀನು ನಾರಾಯಣನ ಸಹಾಯವುಳ್ಳ ಅಜೇಯನಾದ ನರನಿರುವಿ, ಎಂದು ಅವನನ್ನು ಸಂಬೋಧಿಸಿರುವಳು. ಪುರಾಣಗಳಲ್ಲಿ ಕೂಡ ಕೃಷ್ಣಾರ್ಜುನರು ನರನಾರಾಯಣರ ಅವತಾರವೆಂದು ಉಲ್ಲೇಖಗಳುಂಟು. ಇಲ್ಲಿ ನಾವು ನರನೆಂದರೆ ಸಾಮಾನ್ಯ ಮನುಷ್ಯನೆಂದೂ ನಾರಾಯಣನೆಂದರೆ ಹೃದ್ದೇಶದಲ್ಲಿದ್ದ ಅಂತರ್ಯಾಮಿಯಾದ ಪರಮಾತ್ಮನೆಂದೂ ತಿಳಿದರೆ ಅದೂ ಯುಕ್ತವೇ ಆಗುವದು. ಆ ನಾರಾಯಣನ ಸಹಾಯವಿಲ್ಲದೆ ನರನು ಕೇವಲ ನರಕುರಿಯು. ಅವನ ಸಹಾಯದಿಂದಲೆ ನರನು ಅಜೇಯನಾಗಬಲ್ಲನು, ಅಪರಾಜಿತನಾಗಬಲ್ಲನು. ನರನೆಂದರೆ ಜೀವವು ನಾರಾಯಣನೆಂದರೆ ಆತ್ಮವು. ನರನು ರಥವು ನಾರಾಯಣನು ರಥಿಯು. ನರನು ಪಾರ್ಥನು ನಾರಾಯಣನು ಸಾರಥಿಯು. ಹೀಗೆ ಈ ಗುರುಶಿಷ್ಯರ ಜೋಡಿಯಿರುವದು. ನರನು ಉಪರತನಾಗಿ ಆತ್ಮಸಂಯಮಿಯಾಗಿ ಮುಮುಕ್ಷುವಾಗಿ ಹೃದಯಸ್ಥ ನಾರಾಯಣನಿಗೆ 'ಶಿಷ್ಯಸ್ತೇಽಹಂ' ಎಂದು ಶರಣಾಗತನಾಗಬೇಕು; ಅಂದರೆ ಅವನಿಗೆ ಕರುಣೆ ಹುಟ್ಟಿ ಹೃದಯಾಂಗಣದ ಕುರುಕ್ಷೇತ್ರದಲ್ಲಿ ಸತತ ನಡೆದಿರುವ ಒಳಿತು ಕೆಡಕು, ಶ್ರೇಯಸ್ಸು ಪ್ರೇಯಸ್ಸು, ಹಿತ ಅಹಿತ, ಕುಶಲ ಅಕುಶಲ, ಕಲ್ಯಾಣ ಅಕಲ್ಯಾಣ, ಧರ್ಮ ಅಧರ್ಮ, ಸತ್ಯ ಅಸತ್ಯಗಳ ದಂದ್ವಯುದ್ಧದ ಸಮಯದಲ್ಲಿ ಅವತಾರ ತಾಳಿ ಅಭಯ ಕೊಟ್ಟು ನೈಷ್ಕರ್ಮ್ಯ ಮತ್ತು ಪರಮಾತ್ಮಾರ್ಪಣ ಯೋಗವನ್ನುಪದೇಶಿಸಿ ವಿಶ್ವರೂಪವನ್ನು ತೋರಿ ನರನನ್ನು ಧನ್ಯಧನ್ಯ ಮಾಡಿ ಬಿಡುವನು. ಈ ದೃಷ್ಟಿಯಿಂದ ನೋಡಿದರೆ ಭಾರತೀಯ ಯುದ್ಧವು ಒಮ್ಮೆಯೆ ಆಗಿಲ್ಲ. ಅದು ಸತತವೂ ಪ್ರತಿಯೊಬ್ಬನ ಅಂತಃಕರಣದಲ್ಲಿ ಪ್ರತಿಕ್ಷಣಕ್ಕೆ ನಡೆದಿರುವದು. ಗೀತೋಪದೇಶವನ್ನು ಒಮ್ಮೆಯೆ ಮಾಡಿ ನಾರಾಯಣನು ದಣಿಯಲಿಲ್ಲ. ನಿತ್ಯಶಃ ಮುಮುಕ್ಷುಗಳ ಹೃದಯದಲ್ಲಿ ನಾರಾಯಣನು ಅವತರಿಸಿ ಅವರಿಗೆ ಗೀತಾಮೃತವನ್ನು ಕುಡಿಸುತ್ತಿರು

ವಸು. ಆದರೆ ನಾವು ಮಾತ್ರ ನಿಜವಾದ ನರರಾಗಬೇಕು, ಅರ್ಜುನರಾಗಬೇಕು. ಮುಮುಕ್ಷುಗಳಾಗಬೇಕು 'ಶಿಷ್ಯಸ್ತೇಽಹಂ' ಎಂದು ಆತ್ಮಾರ್ಪಣ ಮಾಡಿ ಅಂತರ್ಯಾಮಿಯಾದ ಪರಮಾತ್ಮನ ಚರಣದಲ್ಲಿ ಅನನ್ಯಭಾವದಿಂದ ಲೀನರಾಗಬೇಕು. ಅಂದರೆ ನಾರಾಯಣನು ದೂರನಿಲ್ಲ.

**ಧರ್ಮಸಂಕಟವು**— ಇರಲಿ. ಈ ಬಗೆಯಿಂದ ಅರ್ಜುನನು ಗೀತೆಯ ಉಚ್ಚ ಉಪದೇಶಕ್ಕೆ ಅಧಿಕಾರಿಯು, ಶ್ರೀಕೃಷ್ಣನು ಆ ಉಪದೇಶವನ್ನು ಕೊಡಲಿಕ್ಕೆ ಅಧಿಕೃತನು. ಯುದ್ಧಸಂಧಿಗೆ ಆದ ಅರ್ಜುನನ ಮನಸ್ಥಿತಿಯು ಎಲ್ಲ ಸಾಧಕರಿಗೂ ಮುಮುಕ್ಷುಗಳಿಗೂ ಪರಿಚಿತವೇ ಇರುವದು. ಅಂಥ ಮತಿಯು ಉತ್ಪನ್ನವಾಗಲಿಕ್ಕೆ ಯಾವದೊಂದು ವ್ಯವಹಾರಿಕ ಪ್ರಸಂಗವು ನಿಮಿತ್ತಕಾರಣವಾಗುತ್ತಿದೆ. ಇಲ್ಲಿ ಬಳಗದವರ ಕೂಡ ಬಂದ ಯುದ್ಧಪ್ರಸಂಗವೇ ಅರ್ಜುನನ ಆ ಮನಸ್ಥಿತಿಗೆ ತಾತ್ಕಾಲಿಕ ಕಾರಣವಾಯಿತು. ಆದರೆ ಆ ಪ್ರಶ್ನೆಗಳು ಅವನ ಮನಸಿನಲ್ಲಿ ಅನೇಕ ಸಾರೆ ಬಂದು ಹೋಗಿರಲಿಕ್ಕೆ ಬೇಕು. ಈಗ ಉಕ್ಕಿ ಬಂದು ಅವು ಹೊರಚೆಲ್ಲಿದವು. ಹಾಗೆ ಸಂಸಾರದಲ್ಲಿಯು ಬಗೆಬಗೆಯ ಇಕ್ಕಟ್ಟಿನ ಪ್ರಸಂಗಗಳಲ್ಲಿ, ಇದನ್ನು ನಾನು ಮಾಡಬೇಕೋ ಬಿಡಬೇಕೋ, ನಾನು ಧರ್ಮಿಯೋ ಅಧರ್ಮಿಯೋ ಎಂಬ ಪ್ರಶ್ನೆಯು ಉತ್ಪನ್ನವಾಗುತ್ತಿದೆ. ಇಲ್ಲಿ ಅರ್ಜುನನಿಗೆ ಧರ್ಮಸಂಕಟವು ಎದುರಾಯಿತು. ಕ್ಷತ್ರಿಯನಂತೆ ಸತ್ಪಕ್ಷವನ್ನು ಹಿಡಿದು ಹೊಡೆದಾಡುವದೂ ಧರ್ಮವು, ಬಳಗದವರನ್ನು ಹೊಡೆಯದಿರುವದೂ ಧರ್ಮವು. ಎರಡು ಧರ್ಮಗಳಲ್ಲಿ ಯಾವ ಧರ್ಮವನ್ನು ಮಾಡಬೇಕು, ಯಾವುದನ್ನು ಬಿಡಬೇಕು, ಯಾವುದು ಹೆಚ್ಚಿನದು ಎಂಬ ಪ್ರಶ್ನೆಯೆ ಧರ್ಮಸಂಕಟವೆನಿಸುವದು. ಕಳವು ಮಾಡಬೇಕೊ ಮಾಡಬಾರದೋ ಎಂಬುದು ಧರ್ಮಸಂಕಟವಲ್ಲ! ಜೀವ ಹೋಗುವ ಪ್ರಸಂಗ ಬಂದಾಗ— ಮಹಾಭಾರತದಲ್ಲಿ ನಾಯಿಯ ಮಾಂಸವನ್ನು ಕಳವುಮಾಡುವಾಗ ವಿಶ್ವಾಮಿತ್ರನಿಗೆ ಬಂದಂತೆ, ಛಾಂದೊಗ್ಯೋಪನಿಷತ್ತಿನಲ್ಲಿ ಉಷಸ್ತಿ ಚಾಕ್ರಾಯಣನಿಗೆ ಎಂಜಲ ತಿನ್ನುವ ಪ್ರಸಂಗ ಬಂದಂತೆ—ಕಳವು ಮಾಡಬೇಕೋ ಜೀವವನ್ನು ಕಳಕೊಳ್ಳಬೇಕೋ ಎಂಬುದು ಧರ್ಮಸಂಕಟವು. ಆ ಕಾಲಕ್ಕೆ ಮನಸ್ಸೆಲ್ಲ ಕಲೆಸಿದಂತಾಗಿ ಧರ್ಮಾಧರ್ಮ ಕಾರ್ಯಾಕಾ

ಗಳ ಗೊಂದಲವೆದ್ದು ಮನುಷ್ಯನಿಗೆ ಏನೂ ಕಾಣದಂತಾಗುತ್ತಿದೆ. ಅಂಥ ಸಮಯದಲ್ಲಿ ಉಪರತಿಯಾಗಿ ನಾವು ಪರಮಾತ್ಮನಿಗೆ ಶರಣಾಗತರಾಗಿ ಅವನಿಂದ ದಿಕ್ಕನ್ನು ಕೇಳುವದುಂಟು.

**ವ್ಯವಹಾರದ ಪ್ರಶ್ನೆಗೆ ವೇದಾಂತಿಕ ಉತ್ತರವು—** ಇಂಥ ಒಂದು ಪ್ರಸಂಗದಲ್ಲಿಯೆ ಗೀತೆಯ ಉಪದೇಶವಾಗಿರುವದು. ಅರ್ಜುನನ ಪ್ರಶ್ನೆಯು ವ್ಯಾವಹಾರಿಕವಿತ್ತು. ಆದರೆ ಆ ಪ್ರಶ್ನೆಯ ಬೇರುಗಳು ಆಧ್ಯಾತ್ಮಿಕ ಭೂಮಿಯಲ್ಲಿದ್ದವು. ಆದುದರಿಂದ ಸಾಮಾನ್ಯ ಸಮಾಧಾನದಿಂದ ಅವನಿಗೆ ತೃಪ್ತಿಯಾಗಲಿಲ್ಲ. ಕೇವಲ ವಾಚಿಕ ತತ್ವವಿಚಾರವು ಅಥವಾ ಬೌದ್ಧಿಕ ಪ್ರಶ್ನೆಯಾಗಿದ್ದರೆ ಕೃಷ್ಣಾರ್ಜುನರು ತತ್ವವಿಚಾರದ ಮಾತುಗಳನ್ನಾಡುವ ಅಥವಾ ಸರಸಸಲ್ಲಾಪಗಳನ್ನಾಡುವ ಯಾವದಾದರೊಂದು ಪ್ರಸಂಗದಲ್ಲಿ ಗೀತೆಯ ಉಪದೇಶವು ಮಾಡಲ್ಪಡಬಹುದಾಗಿತ್ತು. ಆದರೆ ವಸ್ತುಸ್ಥಿತಿಯು ಹಾಗಿರಲಿಲ್ಲ. ಪ್ರತ್ಯಕ್ಷ ವ್ಯವಹಾರಮಾಡುವ ಒಂದು ಪ್ರಸಂಗದಲ್ಲಿ ಪ್ರವೃತ್ತಿಪರ ಮಾರ್ಗದಿಂದ ಸಾಗುತ್ತಿರುವಾಗ ಒಂದು ಸಮಯದಲ್ಲಿ ಗೀತಾಧರ್ಮವು ಉಪದಿಷ್ಟವಾಯಿತು. ಅರ್ಜುನನ ಅಲೆದಾಡುವ ಮನಸನ್ನು ಮನಗಾಣಿಸಿ ಆಧ್ಯಾತ್ಮಿಕ ಪ್ರವೃತ್ತಿಮಾರ್ಗದಲ್ಲಿ—ಸಾಮಾನ್ಯ ಪ್ರವೃತ್ತಿಯಲ್ಲ— ಅವನನ್ನು ದೃಢಮಾಡಲಿಕ್ಕೆ, ಹೆಚ್ಚು ಧೈರ್ಯದಿಂದ ಹೆಚ್ಚಿನ ಆತ್ಮವಿಶ್ವಾಸದಿಂದ ಅವನು ನಿಃಸಂಶಯನಾಗಿ ಘೋರವಾದ ರಣಕರ್ಮದಲ್ಲಿ ಮುಂದುವರಿಯಬೇಕೆಂಬ ಉದ್ದೇಶದಿಂದ, ಅವನು ಪರಮಾತ್ಮನ ಕೈಯಲ್ಲಿ ಸಾಧನನಾಗಿ ಲೋಕಸಂಗ್ರಹದ ಅವಶ್ಯವಾದ ಕರ್ತವ್ಯವನ್ನು ನಿರ್ಲಿಪ್ತನಾಗಿ ಮಾಡಬೇಕೆಂದು ಗೀತೆಯ ಅವತಾರವಾಯಿತು. ಗೀತೆಯ ಉಪದೇಶಕ್ಕಾಗಿ ಶ್ರೀಕೃಷ್ಣನು ಸಮರಾಂಗಣವನ್ನೇ ಆರಿಸಿದುದು ಇದಕ್ಕಾಗಿಯೆ. ಸಂಸಾರದ ಗಲಿಬಿಲಿಯಿಂದ ಗಿಜುಗುಟ್ಟುವ ಜನರ ಸಂದಣಿಯಿಲ್ಲದ, ದೂರವಿರುವ ಶಾಂತ ಋಷ್ಯಾಶ್ರಮದಲ್ಲಿ ಅಥವಾ ನಿರ್ಜನಾರಣ್ಯದಲ್ಲಿ ಈ ಉಪದೇಶವಾಗಿಲ್ಲ. ಆದರೆ ಕುರುಪಾಂಡವರು ತಮ್ಮ ರಾಜ್ಯಭಾಗಕ್ಕಾಗಿ ಹೋರಾಡಲಿಕ್ಕೆ ಸಿದ್ಧರಾಗಿ ರಣದಲ್ಲಿ ನಿಂತಿರಲು ಧರ್ಮಾಧರ್ಮದ ಗೊಂದಲದಲ್ಲಿ ಬಿದ್ದ ಅರ್ಜುನನ ದುರ್ಬಲ ಮನವನ್ನು ದುಷ್ಕರ ಕೊಲೆಗಾಗಿ ಪ್ರವೃತ್ತಮಾಡುವ ಉದ್ದೇಶದಿಂದ ಶ್ರೀಕೃಷ್ಣನು ಗೀತೆಯನ್ನು ಹೇಳಿರುವನು. ವ್ಯಾವ

ಹಾರಿಕ ಪ್ರಶ್ನೆಯನ್ನು ವೇದಾಂತಿಕ ದೃಷ್ಟಿಯಿಂದ, ತತ್ವಗಳ ಆಧಾರದಿಂದ ಸುವ್ಯವಸ್ಥಿತವಾಗಿ ಬಿಡಿಸಿ ಆಧ್ಯಾತ್ಮಿಕ ಜೀವನದ ಉಪದೇಶವನ್ನು ಶ್ರೀಕೃಷ್ಣನು ಈ ಸಮಯದಲ್ಲಿ ಮಾಡಿರುವನು.

**ಅನುಭೂತಿಯೇ ಆಧಾರವು—** ಆದರೆ ಈ ಕಾರ್ಯವನ್ನು ಗೀತೆಯು ಬಹಳೇ ಸುಂದರವಾಗಿ ಮಾಡಿರುವದು. ವ್ಯವಹಾರವನ್ನು ವೇದಾಂತಿಕ ದೃಷ್ಟಿಯಿಂದ ಹೇಗೆ ಮಾಡಬೇಕು, ಕರ್ಮದ ಸೋಂಕು ತಟ್ಟದೆ ಕರ್ತವ್ಯಗಳನ್ನು ಹೇಗೆ ಮಾಡಬೇಕು, ಆನಂದಮಯ ಆಧ್ಯಾತ್ಮಿಕ ಜೀವನವನ್ನು ಹೇಗೆ ಪಡೆಯಬೇಕು ಇದನ್ನು ಕಲಿಯುವದಾದರೆ ಗೀತೆಯ ಕಡೆಗೆ ಹೋಗಬೇಕು. ಅರ್ಜುನನಿಗೆ ಎದುರಾದ ಪ್ರಶ್ನೆಯು ಬಹಳೇ ಕಠಿನವಿತ್ತೆಂಬುದನ್ನು ಎಲ್ಲರೂ ಒಪ್ಪಬೇಕಾಗುವದು. ಆದರೆ ಆ ಪ್ರಶ್ನೆಯನ್ನು ಬಿಡಿಸುವ ಕಾರ್ಯವನ್ನು ಗೀತೆಯು ಜಾತಿಧರ್ಮ, ಕುಲಧರ್ಮ, ಅಭಿಮಾನ, ಅಹಂಕಾರ, ಸ್ವಾರ್ಥ, ವಾಚಿಕ ಒಣ ತತ್ವಜ್ಞಾನ, ಬರಿಯ ನೀತಿವಿಚಾರ, ಅಧಿಕಾರವಾಣಿ ಮುಂತಾದ ಯಾವದೇ ಆಧಾರಗಳನ್ನವಲಂಬಿಸದೆ ಆತ್ಮಸಾಕ್ಷಾತ್ಕಾರದ ಹಾಗೂ ಆಧ್ಯಾತ್ಮಿಕ ಜೀವನದ ಅತ್ಯಂತ ಉಚ್ಚವಾದ ಆಂತರಿಕ ಅನುಭವದ ಬಲದಿಂದಲೆ ಕೈಗೂಡಿಸಿರುವದು. ಈ ಬಗೆಯ ಸಾಕ್ಷಾತ್ಕಾರವು ಅನಾದಿಯು, ಅನಂತವು. ಆಧ್ಯಾತ್ಮಿಕ ರಾಜಮಾರ್ಗದಿಂದ ಸಾಗುವ ಸಾಧಕರಿಗೆ ಇದು ಸಾಧ್ಯವು. ಇಂಥ ಅನುಭವಕ್ಕೆ ಬರುವ ಆತ್ಮಸತ್ಯವನ್ನೇ ಮೂಲಾಧಾರವಾಗಿಟ್ಟುಕೊಂಡು ಗೀತೆಯು ವ್ಯವಹಾರಿಕ ಕರ್ಮಾಕರ್ಮಗಳ ಮತ್ತು ಧರ್ಮಾಧರ್ಮಗಳ ತೊಡಕನ್ನು ಬಿಡಿಸಿ ನಿಚ್ಚಳವಾದ ಮಾರ್ಗದನ್ನು ತೋರಿಸಿರುವದು. ಆತ್ಮಸತ್ಯವು ನಿತ್ಯವು, ಅಬಾಧಿತವು. ಸರ್ವ ಋಷಿಮುನಿಗಳಿಗೆ ಸಮ್ಮತವು. ಅಂತರಾತ್ಮನಿಗೆ ಪರಿಚಿತವು. ಆತ್ಮನಿಷ್ಠರಿಗೆ ಗೋಚರವು. ನಿರಾಧಾರನಾಗಿನಿಂತ ಅರ್ಜುನನಿಗೆ ಗೀತೆಯು ಈ ಸನಾತನ ಸತ್ಯವನ್ನುಪದೇಶಿಸಿ ನವಜೀವಾಳವನ್ನು ಕೊಟ್ಟಿತು. 'ನನ್ನ ಮೋಹವು ನಷ್ಟವಾಯಿತು, ನನಗೆ ಆತ್ಮಸ್ಮೃತಿಯು ಬಂದಿತು, ನೀನು ಹೇಳಿದಂತೆ ಕೇಳುವೆನು' ಎಂದು ಅರ್ಜುನನ ಕಡೆಯಿಂದ ಅನಿಸಿಬಿಟ್ಟಿತು. ಹೀಗೆ ಗೀತೆಯ ಉಪದೇಶಾನುಸಾರವಾಗಿ ಹೊಸ ಶಕ್ತಿಯಿಂದ ಪ್ರೇರಿತನಾಗಿ ಅರ್ಜುನನು ನಿರ್ಮಮ

ಬುದ್ಧಿಯಿಂದ ಭೀಷ್ಮಾದಿಗಳನ್ನು ಸಹ ಕೊಲ್ಲಲಿಕ್ಕೆ ಸಿದ್ಧನಾಗಿ ಧರ್ಮ ರಾಜ್ಯಸ್ಥಾಪನೆಗೆ ಸಹಾಯಕನಾದನು.

**ಭೂಮಿಕೆಯು—** ಈ ಬಗೆಯಿಂದ, ಸಮರಭೂಮಿಯು, ಸುತ್ತಲೂ ಸೈನ್ಯಸಾಗರವು, ಅಧರ್ಮ ಮೂರ್ತಿಗಳಾದ ಕೌರವರೂ ಧರ್ಮ ಮೂರ್ತಿಗಳಾದ ಪಾಂಡವರೂ ಹಂಗುದೊರೆದು ತಮ್ಮ ಪಕ್ಷದ ವಿಜಯಕ್ಕಾಗಿ ಹೋರಾಡಲನುವಾದ ಪ್ರಸಂಗವು. ವೀರಾಗ್ರಣಿಯಾದ ಅರ್ಜುನನು 'ಸ್ವಲ್ಪೇನೈವಾಪಿ ಕಾಲೇನ ಶತ್ರೂನ್ ಜೇಷ್ಯಸಿ ಪಾಂಡವ'— ಅಲ್ಪಕಾಲದಲ್ಲಿಯೇ ನೀನು ಶತ್ರುಗಳನ್ನು ಸಂಹರಿಸುವಿ— ಎಂದು ದುರ್ಗಾದೇವತೆಯಿಂದ ಆಶೀರ್ವಾದವನ್ನು ಪಡೆದಿದ್ದರೂ ಬಂಧುಬಳಗದವರನ್ನು ಖಡ್ಗದಿಂದ ಸವರಲಿಕ್ಕೆ ಮನಸಾಗದೆ ಧರ್ಮಸಂಕಟದಲ್ಲಿ ಸಿಕ್ಕು ತತ್ತರಿಸುತ್ತಿರುವ ಸಮಯವು. ಇಂಥ ಇರುಕಿನ ಇಕ್ಕಟ್ಟಿನ ಪ್ರಸಂಗದಲ್ಲಿ ಹಿಂಸೆ ಅಹಿಂಸೆ, ಶತ್ರು ಮಿತ್ರ ಎಂಬ ದ್ವಂದಗಳನ್ನು ಮೀರಿದ ತ್ರಿಗುಣಾತೀತನಾದ ಲೀಲಾವಿಗ್ರಹಿ ಕಾಲಪುರುಷನಾದ ಶ್ರೀಕೃಷ್ಣನು ನಸುನಗುತ್ತ ದುಷ್ಟನಿಗ್ರಹ ಶಿಷ್ಟಪರಿಪಾಲನದ ಉಪದೇಶ ಮಾಡಿದನು. ಅರ್ಜುನನ ಸರ್ವ ಸಂಶಯಗಳನ್ನು ಪರಿಹರಿಸಿ ಅತ್ಯಂತ ಉಚ್ಚವಾದ ಆಧ್ಯಾತ್ಮಿಕ ಜ್ಞಾನಾಮೃತವನ್ನು ಅವನಿಗೆ ಕುಡಿಸಿ ಅವನ ಕೈಯಿಂದ ವೀರಕೃತ್ಯಗಳನ್ನು ಮಾಡಿಸಿದನು.

**ಗೀತೆಯ ಸಾಮರ್ಥ್ಯವು—** ಹೀಗೆ ಇದು ಗೀತೆಯ ಸಂಕ್ಷಿಪ್ತ ಭೂಮಿಕೆಯು. ಈ ಪ್ರಸಂಗದಲ್ಲಿ ಯಾವ ಉಪದೇಶದಿಂದ ಅರ್ಜುನನು ವೀರಕಾರ್ಯಕ್ಕೆ ಪ್ರವೃತ್ತನಾದನೊ ಅದೇ ಗೀತೆಯು. ಯಾವ ಉಕ್ತಿಯಿಂದ ನವಜೀವನದ ಸಂಚಾರವಾಗಿ ಅವನು ಲೋಕಸಂಗ್ರಹಕ್ಕಾಗಿ ಅತ್ಯವಶ್ಯವಿರುವ ರಾಷ್ಟ್ರಕಾರ್ಯವನ್ನು ಮಾಡತೊಡಗಿದನೊ ಆ ಉಕ್ತಿಯೆ ಗೀತೆಯು. ಯಾವ ವಾಣಿಯು ಬಲದಿಂದ ಅರ್ಜುನನ ಷಂಢತನವು ಅಳಿದು ಕ್ಷುದ್ರತನವು ನೀಗಿಹೋಗಿ ಅವನಲ್ಲಿ ಆರ್ಯತೇಜವು ಬೆಳಗಲಾರಂಭಿಸಿತೊ ಆ ದಿವ್ಯವಾಣಿಯೆ ಗೀತೆಯು. ಅರ್ಜುನನ ಮನಸಿನಲ್ಲಿಯ ನಾನಾ ಧರ್ಮಸಂಕಟಗಳ ತೊಡಕುಗಳನ್ನು ಕಡಿದು ಸರಲ ಮಾರ್ಗವನ್ನು ಮಾಡಿದ ಖಡ್ಗವೇ ಗೀತೆಯು. ಮಾನವೀ ಬುದ್ಧಿಗೆ ತೋರುವ ತತ್ವಗಳ

ಲ್ಲಿಯ ಪರಸ್ಪರ ವಿರೋಧದ ಸಮನ್ವಯ ಮಾಡಿ ಬೇಸಾದ ಆಧ್ಯಾತ್ಮಿಕ ರಾಯಬೀದಿಯನ್ನು ಹಾಕಿಕೊಟ್ಟ ತತ್ವಬೋಧೆಯೆ ಗೀತೆಯು. ಎಲ್ಲ ಸಂಸಾರದ ಪ್ರಶ್ನೆಗಳನ್ನೂ ವ್ಯವಹಾರದ ಒಗಟುಗಳನ್ನೂ ಆತ್ಮಸಾಕ್ಷಾತ್ಕಾರದ ಆಧಾರದಿಂದ ಬಿಡಿಸುವ ಮಂತ್ರವೆ ಗೀತೆಯು, ನಮ್ಮ ಇಡೀ ಜೀವನವನ್ನೆ ಪರಮಾತ್ಮಮಯ ಮಾಡಿ ಅದನ್ನು ಚಿನ್ನದಂತೆ ಬೆಳಗಿಸುವ ದಿವ್ಯ ರಸಾಯನವೆ ಗೀತೆಯು. ನಾವು ನಮ್ಮ ಸಕಲ ಕರ್ಮಗಳನ್ನು ಸರ್ವ ಸಮರ್ಪಣಬುದ್ಧಿಯಿಂದ ಪರಮಾತ್ಮನ ನಿಮಿತ್ತಮಾತ್ರರಾಗಿ ಮಾಡಿ ನಿರ್ಲಿಪ್ತರಿದ್ದು ಸದಾನಂದ ಲೀಲೆಯಲ್ಲಿ ಯಾವಾಗಲೂ ಲೋಲಾಡುವ ಸಾಮರ್ಥ್ಯವನ್ನು ಕೊಡುವ ಜೀವನಾಮೃತವೆ ಗೀತೆಯು. ಆಧ್ಯಾತ್ಮಿಕ ಜ್ಞಾನದ ತಿರುಳನ್ನು ತಿಳುಹಿ ಭಕ್ತಿಜ್ಞಾನಕರ್ಮಗಳ ಏಕವಾಕ್ಯತೆಯನ್ನು ಮಾಡಿ ಸಂಪೂರ್ಣ ಯೋಗಸ್ಥಿತಿಯನ್ನು ಪ್ರಾಪ್ತಮಾಡಿಕೊಟ್ಟು ಸಾಧಕರನ್ನು ಜೀವನ್ಮುಕ್ತರನ್ನಾಗಿ ಮಾಡುವ ಶ್ರೇಷ್ಠ ಶಕ್ತಿಯುಳ್ಳ ಪರಮಗ್ರಂಥವೆ ಗೀತೆಯು. ಸಕಲರೂ ಇದನ್ನರಿತು ಧನ್ಯರಾಗಲಿ.

---

## ೫. ಗೀತೆಯಲ್ಲಿಯ ಸನಾತನಧರ್ಮವು.

---

**ಸೂಚನೆ—** ಗೀತೆಯು ಯಾವ ಪ್ರಸಂಗದಲ್ಲಿ, ಯಾರಿಂದ, ಯಾರಿಗೆ ಮತ್ತು ಯಾವ ಉದ್ದೇಶದಿಂದ ಹೇಳಲ್ಪಟ್ಟಿತು ಇದನ್ನು ಹೋದ ಪ್ರಕರಣದಲ್ಲಿ ಹೇಳಿದೆ. ಇನ್ನು ಇಂಥ ಪ್ರಸಂಗದಲ್ಲಿ ಉಪದೇಶಿಸಿದ ಗೀತೆಯನ್ನು ನಾವು ಯಾವ ಬುದ್ಧಿಯಿಂದ ಕೈಯಲ್ಲಿ ಹಿಡಿಯಬೇಕೆಂಬುದನ್ನು ಸ್ವಲ್ಪ ಹೇಳಿ ಆ ಮೇಲೆ ಆ ಗ್ರಂಥದಲ್ಲಿಯ ಸನಾತನ ಧರ್ಮದ ದರ್ಶನಕ್ಕೆ ತೆರಳುವ.

**ಯಾವ ಬುದ್ಧಿಯಿಂದ ಓದಬೇಕು—** ಗೀತೆಯ ಪ್ರಸಂಗ ಮತ್ತು ಅದರ ಯೋಗ್ಯತೆ ಇವೆರಡನ್ನೂ ನೋಡಿದರೆ ಇದು ಅಸಾಮಾನ್ಯ ಗ್ರಂಥವೆಂಬುದು ಒಮ್ಮೆಲೆ ಕಂಡುಬರುವದು. ಇಂಥ ಗ್ರಂಥದ ಉಪದೇಶವು ಏನಿದೆ ಇದನ್ನು ನೋಡುವದಕ್ಕೂ ಪೂರ್ವದಲ್ಲಿ ಇದರ ಅಭ್ಯಾಸವನ್ನು

ಯಾವ ಬುದ್ಧಿಯಿಂದ ಯಾವ ಪೂರ್ವಭಾಸನೆಯಿಂದ ಆರಂಭಿಸಬೇಕು ಇದರ ದಿಗ್ದರ್ಶನವನ್ನು ಮಾಡುವದು ಅವಶ್ಯವು. ಯಾವಾಗಲೂ ಯಾವದೇ ವಿದ್ಯೆಯು ಅಧಿಕೃತನಿಂದ ಕೊಡಲ್ಪಟ್ಟು ಅಧಿಕಾರಿಯಿಂದ ಗ್ರಹಿಸಲ್ಪಟ್ಟ ತೆಂದರೆ ಯೋಗ್ಯವಾಗುವದು. ಗೀತೆಯನ್ನು ಎಲ್ಲರೂ ಓದಬಹುದು, ಕೇಳ ಬಹುದು; ಆದರೂ ಅದರ ಯೋಗ್ಯ ಫಲವು ದೊರೆಯಬೇಕಾದರೆ, ಶ್ರೀಕೃ ಷ್ಣನು ಕೊನೆಗೆ ಹೇಳಿದಂತೆ, ತಪಸ್ಸಿಲ್ಲದವನಿಗೆ, ಭಕ್ತನಿಲ್ಲದವನಿಗೆ, ಕೇಳುವ ಇಚ್ಛೆ ಇಲ್ಲದವನಿಗೆ, ದೋಷಬುದ್ಧಿಯಿಂದ ನೋಡುವವನಿಗೆ ಇದನ್ನು ಹೇಳಕೂಡದು. ಅರ್ಥಾತ್ ನಾವು ಯೋಗ್ಯ ಶಿಷ್ಯರಾಗಬೇಕಾದರೆ ನಮ್ಮಲ್ಲಿ ತಪಸ್ಸು, ಭಕ್ತಿ, ಕೇಳುವ ಇಚ್ಛೆ ಮತ್ತು ಗುಣೈಕದೃಷ್ಟಿ ಇವು ಅವಶ್ಯವಿರುವವು. ಅರ್ಜುನನ ಮನಃಸ್ಥಿತಿಯು ಗೀತೆಯನ್ನು ಕೇಳುವಾಗ ಆ ತರಹದ್ದಿತ್ತು. ಆದುದರಿಂದಲೆ ಶ್ರೀಕೃಷ್ಣನು ಈ 'ಗುಹ್ಯಾತ್ ಗುಹ್ಯ ತರಂ'— ಗುಟ್ಟಿನ ಗುಟ್ಟನ್ನು— ಅವನಿಗೆ ಹೇಳಿದನು. ಅರ್ಜುನನ ಗುಣ ಗಳ ಅಲ್ಪಾಂಶವಾದರೂ ನಮ್ಮಲ್ಲಿ ಇರದೇ ಹೋದರೆ ನಾವು ಗೀತೆಯನ್ನು ಕೇಳಲಿಕ್ಕೆ ಅನರ್ಹರು. ಗೀತೆಯು ಒಳ್ಳೇ ಕಾವ್ಯವಿದೆ, ಅದನ್ನು ದೊಡ್ಡ ವರು ಹೇಳಿದ್ದಾರೆ, ಅದು ಚನ್ನಾಗಿ ಅಚ್ಚಾಗಿದೆ, ಅದು ಧರ್ಮಾರ್ಥವಾಗಿ ದೊರೆತಿದೆ ಎಂಬ ಮುಂತಾದ ವಿಚಾರಗಳಿಂದ ಪ್ರೇರಿತರಾಗಿ ಓದಿದರೆ ಅದ ರಿಂದ ಆಗತಕ್ಕ ನಿಜವಾದ ಲಾಭವು ಎಂದಿಗೂ ಆಗದು. ಅದೇ ನಮ್ಮ ಅಂತಃಕರಣವು ಅರ್ಜುನನಂತೆ ಧರ್ಮಸಂಕಟದಿಂದ ತಲ್ಲಣಿಸುತ್ತಿದ್ದರೆ, ಕರ್ಮದ ಲೇಪವು ತೊಡೆಯುವದೆಂದು ಮನಸು ಭಯಗೊಂಡಿದ್ದರೆ, ಕ್ಷಣ ಭಂಗುರ ಸುಖವನ್ನು ಬಿಟ್ಟು ಶಾಶ್ವತ ಸುಖವನ್ನು ಪಡೆಯಬೇಕೆಂದು ಇಚ್ಛೆ ಇದ್ದರೆ, ಈ ಗ್ರಂಥವನ್ನು ಕೈಯಲ್ಲಿ ಕೊಳ್ಳಬೇಕು. ನಾವು ನರರು ಹೃದಯಸ್ಥ ನಾರಾಯಣನನ್ನು ಜಾಗೃತಮಾಡಿ ಅವನ ಈ ಲೀಲಾವಿಹಾರ ದಲ್ಲಿ ಅವನ ನಿಮಿತ್ತಮಾತ್ರರಾಗಿ ನಡೆಯುವ ಆನಂದವನ್ನು ಪಡೆಯುವ ದಿದ್ದರೆ ಈ ಪುಸ್ತಕವನ್ನು ಓದಬೇಕು. ವಾಣಿಯಿಂದ ಓದಿ ಬುದ್ಧಿಯಿಂದ ತಿಳಿದು ಒಗೆದುಬಿಡುವ ಪುಸ್ತಕವು ಇದಲ್ಲ. ಸಕಲ ಜೀವನವನ್ನು ಅಧ್ಯಾ ತ್ಮಮಯ ಮಾಡುವದೇ ಇದರ ಉದ್ದೇಶವಿರುವುದರಿಂದ ಅಧ್ಯಾತ್ಮಾನುಭ ವಕ್ಕೆ ಸಿದ್ಧರಾಗಿ ನಾವು ಗೀತೆಯ ಅಭ್ಯಾಸವನ್ನು ಪ್ರಾರಂಭಿಸಬೇಕು.

ಯಾಕಂದರೆ ಅನುಭೂತಿಯೇ ಆಧ್ಯಾತ್ಮಶಾಸ್ತ್ರದ ತಳಹದಿಯು. ಅದು ಇಲ್ಲದ ಕೇವಲ ಶಾಬ್ದಿಕ ಅಥವಾ ಬೌದ್ಧಿಕ ಜ್ಞಾನಕ್ಕೆ ಅಧ್ಯಾತ್ಮದಲ್ಲಿ ವಿಶೇಷ ಮಹತ್ವವಿಲ್ಲ. ಎಲ್ಲ ಗ್ರಂಥಗಳನ್ನೋದಿ ಪರಿಶೀಲಿಸಿದರೂ ಆಧ್ಯಾತ್ಮಾನುಭವವು ಏನೂ ಇಲ್ಲದೆ ಹೋದರೆ 'ಕತ್ತೆಯು ತಾ ಹೊತ್ತರೇನು' ಎಂಬಂತೆ ಸ್ಥಿತಿಯಾಗುವದು. ಗುಡ್ಡದಂಥ ಪಾಂಡಿತ್ಯಕ್ಕಿಂತಲೂ ಎಳ್ಳಷ್ಟು ಆತ್ಮಾನುಭವವು ಹೆಚ್ಚು ಮಹತ್ವದ್ದಿರುವದು. 'ಸ್ವಲ್ಪಮಪ್ಯಸ್ಯಧರ್ಮಸ್ಯ ತ್ರಾಯತೇ ಮಹತೋ ಭಯಾತ್'', ಎಂಬ ಗೀತೆಯ ಉಕ್ತಿಯಂತೆ ಆತ್ಮಾನುಭವದ ಕಿಂಚಿದಂಶವು ಸಹ ಮೋಕ್ಷಕ್ಕೆ ಸಾಧನೀಭೂತವಾಗುತ್ತಿದೆ. ಆದುದರಿಂದ ಗೀತೋಪದೇಶವನ್ನು ಕೇಳಲನುವಾದವರಿಗೆ ಕೆಳಗಿನದೊಂದೇ ಪ್ರಾರ್ಥನೆಯಿರುವದು.

**ಓದುಗರಿಗೆ ಬಿನ್ನಹವು—** ಓದುವವರು ಜೀವನಸಮುದ್ರದ ತಳವನ್ನು ಕಂಡು ಮತ್ತೆ ಮೇಲೆ ಬರಲಿಕ್ಕೆ ಸಿದ್ಧರಾಗಬೇಕು ಅಂದರೆ ದಿವ್ಯಜ್ಞಾನದ ಮುತ್ತು ಈ ಗೀತೆಯಲ್ಲಿ ದೊರಕುವದು. ಅಲ್ಲೋಲಕಲ್ಲೋಲವಾದ ಈ ಜೀವನಸಮುದ್ರವನ್ನು ಶುದ್ಧಬುದ್ಧಿಯ ಮೇರುದಂಡದಿಂದ ಕಡೆದು ದಿವ್ಯಾಮೃತವನ್ನು ತೆಗೆದು ಸೇರೆಮಾಡಲಿಕ್ಕೆ ನಾವು ಸನ್ನದ್ಧರಾಗಲಿಕ್ಕೆ ಬೇಕು. ಏನೋ ಒಂದು ಜನ್ಮವು ಬಂದಿರುವದು, ಹೇಗಾದರೂ ಇದ್ದು ಬಿದ್ದು ಮಣ್ಣು ವೈಯನ್ನು ಮಣ್ಣಲ್ಲಿಕ್ಕಿ ಮಾಯವಾದರಾಯಿತು, ಎಂಬ ಕ್ಷುದ್ರತಾಮಸ ವೃತ್ತಿಯನ್ನು ಬಿಟ್ಟು ಇಲ್ಲಿಯೆ, ಈ ದೇಹದಲ್ಲಿರುವಾಗಲೆ ನಮ್ಮ ಆತ್ಮದ ಅಮರತ್ವವನ್ನು ಅನುಭವಿಸಿಬಿಡುವೆವೆಂಬ ಉತ್ಸಾಹವನ್ನು ನಾವು ಹಿಡಿಯಲಿಕ್ಕೆ ಬೇಕು. ನಡೆಯಿರಿ. ಅನ್ನಮಯಾದಿ ಕೋಶಗಳನ್ನು ದಾಟಲನುವಾಗುವ. ಈ ಮಾರ್ಗದಿಂದ ಸಾಗುತ್ತಿರುವಾಗ ಆತ್ಮಜ್ಞಾನದ ವಿದ್ಯುತ್ತಿನ ಸೆಳಕುಗಳನ್ನು ಸಹಿಸಲಿಕ್ಕೆ ಸಿದ್ಧರಾಗುವ. ಪ್ರತಿಯೊಂದು ಬಗೆಯ ಕ್ಷುದ್ರತ್ವ, ದೌರ್ಬಲ್ಯ, ಕ್ಲೈಬ್ಯಗಳನ್ನು ಕಾಲ್ಕೆಳಗೆ ಮೆಟ್ಟಿ ವೀರಪಾರ್ಥನಂತೆ ಮುಂದಾಗಿರಿ. ಪಾರ್ಥಸಾರಥಿಯನ್ನು ನಿಮ್ಮ ಅಂತಃಕರಣದ ಸಾರಥಿಯನ್ನಾಗಿ ನೇಮಿಸಿರಿ. ಗೀತೆಯು ಆಧ್ಯಾತ್ಮಿಕ ಜೀವನದ ಆದಿಗ್ರಂಥವೆಂದು ಅದನ್ನು ಕೈಯಲ್ಲಿ ಹಿಡಿಯಿರಿ. ಅಂಥ ಶ್ರದ್ಧೆಯಿಂದ ಅದನ್ನು ಓದಬೇಡಿರಿ. ಕೇವಲ ಶ್ರೀಕೃಷ್ಣನು ಅದನ್ನು ಹೇಳಿದ

ನೆಂದು ಅದನ್ನು ಪೂಜಿಸಬೇಡಿರಿ. ವ್ಯಾಸರು ಸುರಿದರೆಂಬ ಮಾತ್ರಕ್ಕೆ ಅದನ್ನು ಆದರಿಸಬೇಡಿರಿ ಆ ಗ್ರಂಥವು ಅನಾದಿ ಸತ್ಯವನ್ನು ಹೇಳುವದು. ಯಾವ ಸತ್ಯವನ್ನು ನೀವು ನಿಮ್ಮ ಅಂತಃಕರಣದಲ್ಲಿ ಅನುಭವಿಸಬಹುದೋ ಅಂತಹದನ್ನೇ ಹೇಳುವದು. ಸಂಶಯಗ್ರಸ್ತ ಅರ್ಜುನನ ಮನಸನ್ನು ಪರಿಪರಿಯಿಂದ ತಣಿಸಿ ತೃಪ್ತಮಾಡಿದ ಪರಮಾತ್ಮನು ನಿಮ್ಮೆಲ್ಲರ ಹೃದಯದಲ್ಲಿರುವನು. ಅವನನ್ನು ದೊರಕಿಸಬೇಕೆಂಬ ಎಚ್ಚರವು ನಮಗೆ ಹುಟ್ಟಲಿಕ್ಕೆ ಗೀತೆಯೊಂದು ಸಾಧನವು. ಕುರುಕ್ಷೇತ್ರದ ಪುಣ್ಯಭೂಮಿಯಮೇಲೆ ಅರ್ಜುನನಿಗೆ ಆದ ಮಂತ್ರೋಪದೇಶದ ಪುನರುಚ್ಚಾರವು, ಪುನಃಸ್ಫೂರ್ತಿಯು, ಧರ್ಮಕ್ಷೇತ್ರವಾದ ನಮ್ಮ ಹೃದಯಾಕಾಶದಲ್ಲಿ ಈ ಕ್ಷಣಕ್ಕೆ ಆಗುವದು ಶಕ್ಯವು. ಅದನ್ನನುಭವಿಸುವ ನಿಶ್ಚಯವು ಮಾತ್ರ ಬೇಕು. ಈ ಗೀತೆಯೆಂಬ ಚಿನ್ನದ ಪರೀಕ್ಷೆಯನ್ನು ಅನುಭವದ ಒರೆಗಲ್ಲಿನ ಮೇಲೆ ಮಾಡಿರಿ. ಒರೆಗಲ್ಲಿಗೆ ಸರಿದೋರಿದರೆ ನಿಮಗೆ ಉಪಯುಕ್ತವಾಗುವದು. ಇಲ್ಲದಿದ್ದರೆ ನೀವು ಇದನ್ನು ಬಿಟ್ಟುಬಿಡಬಹುದು. ನೋಡಿರಿ. ಆಧ್ಯಾತ್ಮಿಕ ಜೀವನದ ನಿಜ ನಿತ್ಯಾನಂದದ ಸೊಬಗು ನಿಮಗೆ ಸ್ವಲ್ಪಾದರೂ ಸೋಂಕಿದ್ದರೆ ಈ ಗ್ರಂಥದ ವಾಚನ ಮನನ ನಿಧಿಧ್ಯಾಸಗಳು ನಿಮಗೆ ಮಿತಿಮೀರಿದ ಆನಂದವನ್ನು ಕೊಡುವವು. ಗೀತೆಯನ್ನು ಕೈಯಲ್ಲಿ ಹಿಡಿಯುವವರಿಗೆ ಇನ್ನೊಮ್ಮೆ ನಾವು ಹೇಳುವದೇನಂದರೆ ಎಲ್ಲ ಸ್ಥಿತಿಯಲ್ಲಿಯೂ ಆತ್ಮಾನಂದವೇ ನಮ್ಮೆಲ್ಲರ ಗುರಿಯಿರುವದು. ‘ಆತ್ಮನಃ ಕಾಮಾಯ ಸರ್ವಂ ಪ್ರಿಯಂ ಭವತಿ’ ಎಂಬ ಸನಾತನ ತತ್ವವು ಅಕ್ಷರಶಃ ನಿಜವಿರುವದು. ಆದರೆ ಆ ಆನಂದವು ನಮ್ಮೆಲ್ಲರಿಗೂ ದೊರೆಯದೆ ಇದ್ದುದರಿಂದ ನಾವು ಅದನ್ನು ಅಲ್ಲಿ ಇಲ್ಲಿ ಆ ಈ ವಸ್ತುವಿನಲ್ಲಿ ಹುಡುಕುವೆವು. ಆ ಆತ್ಮಾನಂದವನ್ನು ದೊರಕಿಸಿಕೊಟ್ಟು ಪರಮಾತ್ಮನ ಈ ಸೃಷ್ಟಿಲೀಲೆಯಲ್ಲಿ ಭಾಗಿಗಳಾಗುವ ಭಾಗ್ಯವನ್ನು ನಮ್ಮಡಿಯಲ್ಲಿ ಕಟ್ಟಿಕೊಡುವದಕ್ಕಾಗಿಯೆ ಗೀತೆಯ ಅವತಾರವಿರುವದು. ಈ ದೃಷ್ಟಿಯಿಂದ ಈ ಬುದ್ಧಿಯಿಂದ ಗೀತೆಯನ್ನು ಪರಿಶೀಲಿಸಿರಿ. ಅಂದರೆ ಗೀತೆಯ ಗುಟ್ಟು ತಿಳಿದು ಧನ್ಯರಾಗುವಿರಿ.

**ಸನಾತನ ಮತ್ತು ಯುಗಧರ್ಮಗಳು—** ಯಾವ ಬುದ್ಧಿಯಿಂದ ಗೀತೆಯನ್ನು ಓದಬೇಕೆಂಬುದನ್ನು ನೋಡಿದಮೇಲೆ ಗೀತಾಧರ್ಮವನ್ನು

ವಿಚಾರಿಸುವ ಮೊದಲು ಅದರಲ್ಲಿ ಹೇಳಿದ ಸನಾತನ ಮತ್ತು ಯುಗಧರ್ಮ ಗಳೆಂದರೇನು ಇದನ್ನು ನೋಡಬೇಕಾಗಿದೆ. ಯಾವುದು ತ್ರಿಕಾಲಾಬಾಧಿತ ವಾಗಿ ಒಂದೇಸವನೆ ಅಚ್ಚಳಿಯದೆ ಇರುವದೊ ಅದೇ ಸನಾತನ, ಶಾಶ್ವತ, ನಿತ್ಯ, ಸತ್ಯ, ಧರ್ಮವು. ಯಾವುದು ದೇಶಕಾಲಪರಿಸ್ಥಿತಿಯಂತೆ ಬದಲಾ ಗುಪದೊ ಅದೇ ಕಾಲಧರ್ಮವು, ಯುಗಧರ್ಮವು. ಸನಾತನಧರ್ಮವು ಯಾವದೇ ದೇಶಕಾಲಪರಿಸ್ಥಿತಿಯಲ್ಲಿ ಸತ್ಯವಿರುವದು, ಅದು ಅಮರ್ಯಾ ದಿತವು. ಯುಗಧರ್ಮವು ಕಾಲಕಾಲಕ್ಕೆ ಬದಲಾಗುವದು, ದೇಶಕಾಲ ಸ್ಥಿತಿಗಳಿಂದ ಮರ್ಯಾದಿತವು. ಪ್ರತಿಯೊಂದು ಧರ್ಮಗ್ರಂಥದಲ್ಲಿ ಸನಾ ತನ ಮತ್ತು ಯುಗಧರ್ಮಗಳ ಬೆರಿಕೆಯಿರುವದು ಸ್ವಾಭಾವಿಕವೇ. ಆದರೆ ಯಾವ ಗ್ರಂಥದಲ್ಲಿ ಸನಾತನಧರ್ಮವೇ ಹೆಚ್ಚಾಗಿ ಮತ್ತು ಹೆಚ್ಚಿನ ಅಧಿಕಾ ರದಿಂದ ಉಪದೇಶಿಸಲ್ಪಟ್ಟಿರುತ್ತದೊ ಆ ಗ್ರಂಥವೇ ಚಿರಕಾಲ ಬಾಳುವದು. ಸನಾತನಧರ್ಮವು ಸೂರ್ಯನಿದ್ದಂತೆ, ಸಮುದ್ರವಿದ್ದಂತೆ, ಯುಗಧರ್ಮ ಗಳು ದೀಪಗಳಿದ್ದಂತೆ, ಕೆರೆತೊರೆಗಳಿದ್ದಂತೆ. '........ಪ್ರತಿಷ್ಠಾಹಂ........ ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ' ಎಂದು ಶ್ರೀಕೃಷ್ಣನು (ಅ. ೧೪- ಶ್ಲೋ. ೨೭) ಹೇಳಿದ್ದಾದರೂ ಇದೇ ಅರ್ಥದಲ್ಲಿಯೆ. ಗೀತೆಯಲ್ಲಿ ಯುಗಧರ್ಮವು ಅತ್ಯಲ್ಪವಿದೆ. ಆದುದರಿಂದಲೆ ಅದು ಇದುವರೆಗೆ ಬಾಳಿ ಇನ್ನೂ ನಮ್ಮೆಲ್ಲರಿಗೆ ಸರ್ವಮಾನ್ಯವಾಗಿರುವದಲ್ಲದೆ ಪಾಶ್ಚಾತ್ಯರಿಗೂ ಪರ ಧರ್ಮೀಯರಿಗೂ ಆದರಣೀಯವಾಗಿದ್ದು ಇನ್ನೂ ಪ್ರಸಾರ ಹೊಂದುತ್ತ ಲಿದೆ. ಆದುದರಿಂದಲೆ ಈ ಗ್ರಂಥವು ಹಳೆಯದಾದರೂ ನಾವು ಈಗ್ಯೂ ಅದರಿಂದ ಸ್ಫೂರ್ತಿಯನ್ನು ಪಡೆಯುತ್ತಲಿದ್ದೇವೆ. ಗೀತೆಯಲ್ಲಿಯ ಗಹನ ಗಂಭೀರ ವಿಚಾರಗಳಾಚೆಗೆ ಇನ್ನೂ ಯಾವ ತತ್ವಜ್ಞಾನಿಗಳೂ ಹೋಗಲು ಸಾಧ್ಯವಾಗಿಲ್ಲ. ಮಂತ್ರಕರ್ತೃಗಳಾದ ಉಪನಿಷದಾದಿಗಳನ್ನು ಬರೆದ ಋಷಿಗಳು ಯೋಗಸ್ಥಿತಿಯಲ್ಲಿರುವಾಗ ಕಂಡುಹಿಡಿದ ವ್ಯಕ್ತಾವ್ಯಕ್ತಸೃಷ್ಟಿ ಗಳ ಗುಹ್ಯಗಳನ್ನು ಬಹಿರ್ಮುಖ ಪ್ರವೃತ್ತಿಯುಳ್ಳ ಈಗಿನ ಎಷ್ಟೋ ದಾರ್ಶ ನಿಕರು ತಿಳಿದುಕೊಳ್ಳುವದು ಸಹ ಕಷ್ಟವಾಗಿದೆ. ಗೀತೆಯ ಸಂಗತಿಯಾದ ರೂ ಅದೇ ಇರುವದು. ವಿಶಿಷ್ಟದೇಶಕಾಲಪರಿಸ್ಥಿತಿಗೆ ಅವಶ್ಯವಿದ್ದ ಗ್ರಂಥ ಗಳು ಆಯಾ ದೇಶಕಾಲಪರಿಸ್ಥಿತಿಗಳು ಅಳಿದುಹೋದವೆಂದರೆ ನಷ್ಟ

ಪ್ರಾಯವಾಗುತ್ತವೆ. ಆದರೆ ಗೀತೆಯಂತೆ ಸನಾತನಧರ್ಮವನ್ನು ಹೇಳುವ ಗ್ರಂಥಗಳು ಜನರ ಚಿತ್ತಕ್ಕೆ ನಿತ್ಯನವೀನವಾದ ಬೆಳಕನ್ನು ಕೊಡುತ್ತವೆ. ಪ್ರತಿಯುಗದಲ್ಲಿ ಪ್ರತಿಪ್ರಸಂಗದಲ್ಲಿ ಪ್ರತಿಪರಿಸ್ಥಿತಿಯಲ್ಲಿ ಪ್ರತಿಯೊಬ್ಬನಿಗೆ ಹೊಸ ಸ್ಫೂರ್ತಿಯನ್ನು ಕೊಡುವ ಗ್ರಂಥಗಳಲ್ಲಿ ಗೀತೆಯು ಅತ್ಯಂತ ಶ್ರೇಷ್ಠವಾದದ್ದೆಂದು ಹೇಳಬಹುದು.

**ಸನಾತನ ತತ್ವಜ್ಞಾನವು**– ಯಾವದೇ ಧರ್ಮದ ವಿಚಾರಮಾಡುವಾಗ ಅದರಲ್ಲಿ ಯಾವಾಗಲೂ ಎರಡು ಭಾಗಗಳನ್ನು ಮಾಡಬೇಕಾಗುವದು. ಒಂದು ತತ್ವಜ್ಞಾನವು ಇನ್ನೊಂದು ಅದರ ಸಾಕ್ಷಾತ್ಕಾರಸಾಧನವಾದ ಆಚಾರವು. ತತ್ವಸ್ವರೂಪವು ಯಾವಾಗಲೂ ಹೆಚ್ಚು ನಿಶ್ಚಿತವು ಮತ್ತು ಅಬಾಧಿತವಿರುವದು. ದೇಶ, ಕಾಲ, ವ್ಯಕ್ತಿ ಮುಂತಾದವುಗಳು ಬದಲಾದಂತೆ ಆಚಾರವು ಬದಲಾಗುವದು. ಹೀಗಿದ್ದರೂ ಪಾಶ್ಚಾತ್ಯರಂತೆ ನಮ್ಮಲ್ಲಿ ತತ್ವಜ್ಞಾನವು ಬೇರೆ ಮತ್ತು ಆಚಾರವು ಬೇರೆ ಹೀಗೆ ಇದುವರೆಗೆ ಎಂದೂ ಆಗಿಲ್ಲ. ನಮ್ಮ ತತ್ವಜ್ಞಾನಿಗಳು ಸ್ವತಃ ತಾವೇ ಆಚಾರಶೀಲರಿದ್ದು ತಮ್ಮ ತತ್ವಜ್ಞಾನಕ್ಕನುಗುಣವಾದ ಆಚಾರವನ್ನು ಕಾಲಕಾಲಕ್ಕೆ ಪ್ರಸ್ಥಾಪಿಸುತ್ತ ಬಂದಿದ್ದಾರೆ. ಮತತ್ರಯಸ್ಥಾಪಕರು ತತ್ವಜ್ಞಾನಿಗಳಿದ್ದುದಲ್ಲದೆ ಆಚಾರಧರ್ಮಸ್ಥಾಪಕರೂ ಇದ್ದರು. ಅವರು ಬರಿಯ ತತ್ವಜ್ಞಾನದ ಹೊತ್ತಿಗೆಗಳನ್ನು ಹೊಸೆದು ಹೊರಟು ಹೋಗಲಿಲ್ಲ. ಆದರೆ ಅದಕ್ಕನುಸರಿಸಿ ಪ್ರತ್ಯಕ್ಷ ಆಚರಣೆ ಹೇಗೆ ಮಾಡಬೇಕೆಂಬುದನ್ನು ನಿಶ್ಚಯಿಸಿ ಅದರಂತೆ ತಾವು ಮಾಡಿ ಜನರಿಂದ ಹಾಗೆ ಮಾಡಿಸಿ ಹೋದರು. ಗೀತಾಧರ್ಮದ ಮಾತಾದರೂ ಹೀಗೆಯೆ ಇರುವದು. ಗೀತೆಯು ಬರಿಯ ತತ್ವಜ್ಞಾನವನ್ನು ಹೇಳುವದಿಲ್ಲ. ಅದರ ಜೊತೆಗೆ ಆ ತತ್ವಕ್ಕನುಸರಿಸಿರುವ ಆಚಾರವನ್ನು ಹೇಳುವದು. ಆದರೆ ಇಲ್ಲಿ ಈಗ ಅದರಲ್ಲಿಯ ಸನಾತನ ತತ್ವಜ್ಞಾನವನ್ನೇ ಮೊದಲು ನೋಡಬೇಕಾಗಿದೆ.

**ಸಿದ್ಧಿಯು**— ತತ್ವಜ್ಞಾನವೆಂದರೆ ಆಯಾ ಧರ್ಮಕ್ಕೆ ಆಧಾರಭೂತವಾದ ಸತ್ಯಗಳ, ಪ್ರಮೇಯಗಳ, ಜ್ಞಾನವು. ಮನುಷ್ಯನ ಪರಮಧ್ಯೇಯವು, ಜೀವ ಜಗತ್ತು ಪರಮವಸ್ತು ಇವುಗಳ ಪರಸ್ಪರ ಸಂಬಂಧವು, ಕರ್ಮ, ಕರ್ಮಬಂಧನ ಮುಂತಾದವುಗಳ ಬಗ್ಗೆ ಆಯಾ ಧರ್ಮದವರು ಮಾಡಿಟ್ಟ

ಸಿದ್ಧಾಂತಗಳೇ ಆಯಾ ದರ್ಮದ ತತ್ವಜ್ಞಾನವೆನಿಸುವದು. ಹಾಗೆ ಗೀತೆಯ ತತ್ವಜ್ಞಾನವೇನಿರುವದು ಇದನ್ನು ನೋಡುವ. ಮೊದಲು ಗೀತೆಯ ದೃಷ್ಟಿಯಿಂದ ಪರಮ ಪದವು, ಪರಾಸಿದ್ಧಿಯು, ಸಂಸಿದ್ಧಿಯು, ಮನುಷ್ಯನ ಎಲ್ಲಕ್ಕೂ ಹೆಚ್ಚಿನ ಧ್ಯೇಯವು ಯಾವುದು ಇದನ್ನು ವಿಚಾರಿಸಿದರೆ, ಬ್ರಾಹ್ಮೀ ಸ್ಥಿತಿಯು, ಬ್ರಹ್ಮನಿರ್ವಾಣವು, ಜನ್ಮ ಮೃತ್ಯುವನ್ನು ದಾಟುವದು ಅಥವಾ ಇನ್ನೊಂದು ಬಗೆಯಿಂದ ಹೇಳುವದೆಂದರೆ, ಪರಮಾತ್ಮನಲ್ಲಿ ಸಾಯುಜ್ಯವನ್ನು ಹೊಂದುವದು, ಅವನಲ್ಲಿ ಪ್ರವೇಶಿಸುವದು ಇದೇ ಇರುವದು. ಇದು ದೇಹ ಬಿಟ್ಟಮೇಲಿನ ಪರಮಸ್ಥಿತಿಯು. ದೇಹವಿರುವಾಗ ಪಾಪಪುಣ್ಯಗಳನ್ನು ದಾಟಿರೋಣ, ಸುಖದುಃಖಗಳಾಚೆಗಿರೋಣ, ಪರಮ ಶಾಂತಿ ಮತ್ತು ನಿಶ್ಚಲವಾದ ಸುಖವನ್ನನುಭವಿಸೋಣ, ಕರ್ಮದಿಂದ ಅಲಿಪ್ತವಿರೋಣ ಇದೇ ಗೀತೆಯಂತೆ ಹೆಚ್ಚಿನ ಧ್ಯೇಯವು. ಈ ಬಗೆಯಿಂದ, ನರನು ಬದುಕಿರುವಾಗ ಪರಮಾತ್ಮನ ಜ್ಞಾನಭಕ್ತಿಗಳಿಂದ ಕೂಡಿದವನಿದ್ದು ಕರ್ಮಬಂಧನದಿಂದ ಅಲಿಪ್ತವಿರುವದು ಮತ್ತು ದೇಹ ಬಿಟ್ಟಮೇಲೆ ಪುನರ್ಜನ್ಮರಹಿತ ಪರಮಾತ್ಮಸಾಯುಜ್ಯವನ್ನು ಪಡೆಯುವದು ಇದೇ ಮನುಷ್ಯನ ಪರಮ ಧ್ಯೇಯವೆಂದು ಗೀತೆಯ ನಿಶ್ಚಯವಿರುವದು. ಸುಖದುಃಖಾದಿ ದ್ವಂದ್ವಗಳ ಗೊಂದಲದಿಂದ ಬೇಸರಗೊಂಡ, ತ್ರಿವಿಧ ತಾಪಗಳಿಂದ ತಲ್ಲಣಿಸುತ್ತಿರುವ, ಜೀವನು ಅಥವಾ ವ್ಯಕ್ತಿಯು ಈ ಸ್ಥಿತಿಯನ್ನು ಹೊಂದಬೇಕೆಂದು ಯಾವಾಗಲೂ ಆತುರಪಡುತ್ತಿರುವನು. ಆ ಸ್ಥಿತಿಯನ್ನು ಪಡೆಯಲಿಕ್ಕೆ ಬೇರೆ ಬೇರೆ ಸಾಧನಗಳು ಅಥವಾ ಮಾರ್ಗಗಳಿರುವವು. ಅವುಗಳನ್ನು ಮುಂದಿನ ಪ್ರಕರಣಗಳಲ್ಲಿ ವಿವೇಚಿಸಬೇಕಾಗಿದೆ. ಅದಕ್ಕೂ ಪೂರ್ವದಲ್ಲಿ ಗೀತೆಯಲ್ಲಿ ವಿವರಿಸಿರುವಂತೆ ಅದರ ತತ್ವಜ್ಞಾನವನ್ನು ಇಲ್ಲಿ ಸಂಕ್ಷೇಪದಿಂದ ಹೇಳುವ ವಿಚಾರವಿದೆ.

**ಜೀವ ಜಗತ್ ಮತ್ತು ಈಶ್ವರ—** ಎಲ್ಲಕ್ಕೂ ಮೊದಲು ಮನುಷ್ಯನಿಗೆ 'ನಾನು ಇರುವೆನು' ಎಂಬ ಭಾನವು ಆಗುವದು ಮತ್ತು ಈ ಭಾನವು, ಈ ಎಚ್ಚರವು, ಈ ಜ್ಞಾನವು, ಅವನು ಏನು ಮಾಡಿದರೂ ಅವನನ್ನು ಬಿಡುವದಿಲ್ಲ. ಈ ಭಾನವಿದ್ದ ಚಿತ್ತವೇ ಅಹಂಕಾರವಿಶಿಷ್ಟ ಜೀವವೆನಿಸುವದು. ಆ ಮೇಲೆ ಅವನಿಗೆ ಇಂದ್ರಿಯಗೋಚರವಾಗುವ ಸೃಷ್ಟಿಯ ಭಾನವು

ಆಗುವದು. ಹೀಗೆ ಗೋಚರವಾಗುವದೆಲ್ಲ ಜಗತ್ ಎನಿಸುವದು. ಮುಂದೆ ಜಗತ್ಕರ್ತನು ಯಾರಾದರೂ ಇರಲಿಕ್ಕೆಬೇಕು, ತನಗೂ ಜಗತ್ತಿಗೂ ಮೂಲ ಕಾರಣವೇನಾದರೊಂದು ಇದೆ ಎಂದು ವಿಚಾರಿಸುತ್ತ ಹೋಗಲಾಗಿ ಪರಮಾತ್ಮನ ಕಲ್ಪನೆಯು ಅವನಿಗೆ ಬರುವದು. ಹೀಗೆ ಜೀವ, ಜಗತ್, ಪರಮೇಶ್ವರ, ಅಥವಾ ಜ್ಞಾತಾ, ಜ್ಞಾನ, ಜ್ಞೇಯ ಈ ತ್ರಿಪುಟಿಯ ಸಮಗ್ರ ಮತ್ತು ಅಸಂಶಯ ಜ್ಞಾನವೇ ತತ್ವಜ್ಞಾನವೆನಿಸುವದು. ಈ ಮೂರು ವಸ್ತುಗಳ ಯಥಾರ್ಥ ಸಂಬಂಧವು ತಿಳಿಯಿತೆಂದರೆ ಮತ್ತು ಆ ತಿಳಿವು ಸ್ಥಿರವಾಯಿತೆಂದರೆ ಮನುಷ್ಯನು ಸಿದ್ಧನಾಗುವನು. ಇದೇ ವಿಷಯವನ್ನು ಗೀತೆಯು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ರೀತಿಯಿಂದ ಹೇಳಿರುವದು. ಕ್ಷೇತ್ರ ಅಂದರೆ ಪ್ರಕೃತಿಯಿಂದಾದ ಶರೀರವು, ಕ್ಷೇತ್ರಜ್ಞ ಅಂದರೆ ಪುರುಷನು; ಪ್ರಕೃತಿ ಅಂದರೆ ಸೃಷ್ಟಿನಿರ್ಮಾಣಶಕ್ತಿ, ಪುರುಷ ಅಂದರೆ ಸುಖದುಃಖಗಳಿಗೆ ಕಾರಣನಾದವನು; ಕ್ಷರ ಅಂದರೆ ನಾಶಹೊಂದುವ, ಅಕ್ಷರ ಅಂದರೆ ನಾಶರಹಿತ ಅವ್ಯಕ್ತ; ಹೀಗೆ ಬೇರೆ ಬೇರೆ ಶಬ್ದಗಳ ಉಪಯೋಗವು ಮಾಡಲ್ಪಟ್ಟಿದ್ದರೂ ಗೀತೆಯ ತತ್ವಜ್ಞಾನದಲ್ಲಿ ಎಲ್ಲಿಯೂ ವಿರೋಧವಾಗಲಿ ಅಪದ್ಧತೆಯಾಗಲಿ ಕಂಡುಬರುವದಿಲ್ಲ.

**ಪರಮಾತ್ಮನು**— ಮೊದಲು ಜ್ಞೇಯದ, ಪರಮಾತ್ಮನ ಅಥವಾ ಪುರುಷೋತ್ತಮನ ಕಲ್ಪನೆಯನ್ನು ನೋಡುವ. ಗೀತೆಯಲ್ಲಿ ವರ್ಣಿಸಲ್ಪಟ್ಟ ಪರಮಾತ್ಮನು ಅನಂತಗುಣನೂ ಅನಂತಶಕ್ತಿಯೂ ಇದ್ದು ಸರ್ವವ್ಯಾಪಕನು, ಸರ್ವಭರ್ತನು, ಸೃಷ್ಟಿನಿರ್ಮಾಣಕ್ಕೆ ಅಧ್ಯಕ್ಷನು, ಪ್ರಕೃತಿಯ ಪ್ರೇರಕನು, ಎಲ್ಲರ ಅಂತಃಕರಣದಲ್ಲಿದ್ದು ಎಲ್ಲರನ್ನು ಯಂತ್ರದಂತೆ ತಿರುಗಿಸುವವನು, ಯಜ್ಞ ಮತ್ತು ತಪಸ್ಸುಗಳ ಭೋಕ್ತೃವು, ಎಲ್ಲ ಭೂತಗಳ ಸ್ನೇಹಿತನು, ಯೋಗೇಶ್ವರನು, ಕ್ಷರಾಕ್ಷರಗಳಾಚೆಗಿರುವವನು, ಸ್ವತಂತ್ರನು, ಸ್ವಯಂಭುವು, ಅನಾದಿಯು, ಅನಂತನು, ವಿಶ್ವರೂಪನು, ಇರುವನು. 'ವಾಸುದೇವಃ ಸರ್ವಮಿತಿ,' ಅವನೇ ಎಲ್ಲವೂ ಇರುವನು. ವಿನಾಶಗಳಲ್ಲಿ ಅವನು ಅವಿನಾಶಿಯು, ವಿಭಕ್ತ ಪದಾರ್ಥಗಳಲ್ಲಿ ಅವಿಭಕ್ತನು, ಎಲ್ಲ ಕಡೆಗೂ ಒಂದೇ ಬಗೆಯಾಗಿ ತುಂಬಿದವನು. ಈ ಪರಮಾತ್ಮನೇ ತಾನು ಅಧ್ಯಕ್ಷನಿದ್ದು ಅನಾದಿಯಾಗಿರುವ ತನ್ನ ಪ್ರಕೃತಿಯದ್ವಾರಾ, ತನ್ನ

ಯೋಗಮಾಯಾ ಎಂಬ ಶಕ್ತಿಯ ದ್ವಾರಾ, ಈ ಸೃಷ್ಟಿಯನ್ನು ನಿರ್ಮಿಸುವನು. ಬ್ರಹ್ಮಯೋನಿಯಲ್ಲಿ ತಾನೇ ಎಲ್ಲ ವಿಶ್ವದ ಬೀಜವನ್ನಿಟ್ಟು ಸೃಷ್ಟಿಗೆ ಕಾರಣನಾಗುವನು. ಆದರೆ ಸ್ವತಂತ್ರನಿರುವದರಿಂದ ಇವನು ಬದ್ಧನಾಗನು. ಕರ್ತನಿದ್ದು ಅಕರ್ತನಿವನು.

**ಪ್ರಕೃತಿಯು**— ಇನ್ನು ಪ್ರಕೃತಿಯು ಪರಮಾತ್ಮನ ಶಕ್ತಿಯು. ಅದು ಪರಾ ಮತ್ತು ಅಪರಾ ಎಂದು ಎರಡು ವಿಧವು. ಪೃಥ್ವಿ ಅಪ್ ತೇಜ ವಾಯು ಆಕಾಶ ಎಂಬ ಪಂಚಮಹಾಭೂತಗಳು, ಅಹಂಕಾರ, ಬುದ್ಧಿ ಮತ್ತು ಅವ್ಯಕ್ಯ ಶಕ್ತಿ ಹೀಗೆ ಎಂಟುಗೂಡಿ ಅಪರಾ ಪ್ರಕೃತಿಯೆನಿಸುವದು. ಜೀವರೂಪವಾಗಿರುವದು ಪರಾಪ್ರಕೃತಿಯು. ಆದರೆ ಇವೆರಡೂ ಪರಮಾತ್ಮಸಂಕಲ್ಪದಿಂದಲೆ ಕಾರ್ಯಕಾರಿಯಾದವುಗಳು. ಪರಮಾತ್ಮನ ಸನಾತನ ಅಂಶವೇ ಜೀವಲೋಕದಲ್ಲಿ ಜೀವರೂಪವಾಗಿರುವದು, ಇಲ್ಲಿ ಶುಭಾಶುಭ ಕರ್ಮಗಳಿಂದ ಸುಖದುಃಖಗಳಿಗೂ ಭೂಲೋಕ ಸ್ವರ್ಲೋಕಾದಿಗಳಿಗೂ ಈಡಾಗಿರುವದು. ಪ್ರಕೃತಿಯು ಸತ್ವ, ರಜ, ತಮ ಎಂಬ ತ್ರಿಗುಣದಿಂದ ಕೂಡಿದ್ದು ಇರುವದು. ಇವುಗಳಲ್ಲಿ ಸತ್ವವು ಸಮಾವಸ್ಥೆಯಲ್ಲಿರಲು ಯತ್ನಿಸುವಂತಹದು, ರಜಸ್ಸು ಕಾಮನೆಗಳನ್ನುತ್ಪನ್ನಮಾಡಿ ಕರ್ಮಪ್ರವೃತ್ತಿಯನ್ನುಂಟುಮಾಡುವದು, ತಮಸ್ಸು, ಅಜ್ಞಾನ, ಆಲಸ್ಯ, ಪ್ರಮಾದ ಮುಂತಾದವುಗಳಿಗೆ ಕಾರಣವಾಗುವದು. ಇವು ಮೂರು ಜೀವನಿಗೆ ಬಂಧಕವಾದವುಗಳು. ಪ್ರಕೃತಿಗೆ ಅಥವಾ ಅದರ ಗುಣಗಳಿಗೆ ಅಥವಾ ಅವುಗಳ ವಿಕಾರಕ್ಕೆ ಸ್ವತಂತ್ರ ಸಾಮರ್ಥ್ಯವೇನೂ ಇಲ್ಲವೆಂಬುದನ್ನು ಮಾತ್ರ ನಾವು ಲಕ್ಷದಲ್ಲಿಡತಕ್ಕದ್ದು.

**ಜೀವವು**— ಪರಮಾತ್ಮನ ಅಂಶನಾಗಿ ಪ್ರಕೃತಿಯಲ್ಲಿಳಿದ ಜೀವನು ಅವನ ಯೋಗಮಾಯೆಯಿಂದ ಸಮಾವೃತನಾಗಿ ತನ್ನ ಅಹಂಕಾರದ ಮೂಲಕ, ತನ್ನ ಕಾಮನೆಗಳಿಂದ, ತನ್ನ ಕಲ್ಪನೆಗಳಿಂದ ಬದ್ಧನು. ತನ್ನ ಕರ್ಮಗಳಿಂದ ತಾನೇ ಬದ್ಧನಾಗಿ ಜನ್ಮಜನ್ಮಾಂತರಗಳನ್ನು ಅನುಭವಿಸುತ್ತಿರುವನು. ಬದ್ಧನು ಎಂದರೆ ಸುಖದುಃಖಾದಿ ದ್ವಂದ್ವಗಳಿಗೆ ಒಳಗಾದವನು. ಅಹಂಕಾರವಳಿದರೆ, ಅವನು ಕಾಮನೆಯನ್ನು ಬಿಟ್ಟರೆ, ಕಲ್ಪನೆಗಳಿಗೆ ಒಳಗಾಗದೆ ತನ್ನಷ್ಟಕ್ಕೆ ತಾನೇ ತನ್ನಲ್ಲಿಯೆ ಲೀನನಾದರೆ ಅವನಿಗೆ

ಅತ್ಯಂತ ಶಾಂತಿಯು ದೊರೆಯುವದು. ಜೀವನು ಯಥಾರ್ಥ ಜ್ಞಾನವನ್ನು ಮಾಡಿಕೊಂಡು, ಸ್ವಸ್ವರೂಪವನ್ನರಿತು, ಪರಮಾತ್ಮಧ್ಯಾನದಲ್ಲಿ ಭಕ್ತಿಪೂರ್ವಕವಾಗಿ ನಿಮಗ್ನನಾದನೆಂದರೆ ಅವನು ತ್ರಿಗುಣಾತೀತನಾಗುವನು, ಕರ್ಮಬಂಧನದಿಂದ ಮುಕ್ತನಾಗುವನು. ಹೀಗೆ ಮಾಡದೆ ಬರಿ ಕಾಮ್ಯಕರ್ಮಗಳನ್ನು ಮಾಡುತ್ತಹೋದರೆ ಅವನಿಗೆ ಸ್ವರ್ಗಾದಿ ಭೋಗಗಳು ದೊರೆಯುವವು, ಆದರೆ ಜನ್ಮಮರಣರಹಿತ ಮುಕ್ತಿಯು ದೊರೆಯದು. ಜೀವನು ಯಾವಾಗಲೂ ಆತ್ಯಂತಿಕ ಮತ್ತು ನಿರಂತರ ಸುಖವನ್ನೇ ಅಪೇಕ್ಷಿಸುತ್ತಿರುವದರಿಂದ ಅವನು ಈ ಮಾರ್ಗದಿಂದಲೆ ಹೋಗಲಿಕ್ಕೆಬೇಕು. ಇಲ್ಲದಿದ್ದರೆ ಇಷ್ಟಸಾಧ್ಯವು ಅಶಕ್ಯವು.

**ಕರ್ಮವೂ ಬಂಧಕತ್ವವೂ—** ಸೃಷ್ಟಿವ್ಯಾಪಾರಗಳೆಲ್ಲ ಕರ್ಮವೆನಿಸುವವು. ಅವುಗಳನ್ನು ಜೀವನು ಕಾಮ್ಯಬುದ್ಧಿಯಿಂದ ಮಾಡಿದರೆ ಬಂಧಕವಾಗುವವು, ಅಂದರೆ ಅವು ಸುಖದುಃಖಗಳಿಗೆ ಕಾರಣವಾಗುವವು. ಮತ್ತೆ ಕರ್ಮವನ್ನು ಮಾಡಬೇಕು ಎಂಬ ಬುದ್ಧಿಯನ್ನು ಹುಟ್ಟಿಸುವವು, ಪುನರ್ಜನ್ಮಕ್ಕೆ ಕಾರಣವಾಗುವವು. ಆದರೆ ಯಜ್ಞಭಾವನೆಯಿಂದಲೂ ಸಮತ್ವಬುದ್ಧಿಯಿಂದಲೂ ಪರಮಾತ್ಮಾರ್ಪಣ ಮಾಡಿಯೂ ಕರ್ಮಗಳನ್ನಾಚರಿಸುತ್ತ ಹೋದರೆ ಅವು ಬಂಧಕವಾಗದೆ ಮುಕ್ತಿಸಾಧಕವಾಗುವವು. ಜೀವನು ಕರ್ಮವನ್ನು ನಿಲ್ಲಿಸುವದು ಅಸಾಧ್ಯವು. ಪ್ರಕೃತಿಯು ಅನಾದಿಯಿದ್ದಂತೆ ಕರ್ಮಪ್ರವಾಹವೂ ಅನಾದಿಯು. ಕರ್ಮದ ಆತ್ಯಂತಿಕ ನಾಶವು ಅಸಂಭವನೀಯವು ಆದರೆ ಜೀವನು ಮೇಲೆ ಹೇಳಿದಂತೆ ಕರ್ಮದ ಬಂಧಕತ್ವವನ್ನು ತೆಗೆದು ಕರ್ಮವನ್ನು ಜಯಿಸಬಹುದು. ಅದೇ ನೈಷ್ಕರ್ಮ್ಯಸಿದ್ಧಿಯು.

**ತತ್ವಸಾರವು—** ಈ ಎಲ್ಲ ತತ್ವಜ್ಞಾನದ ಸಾರಸರ್ವಸ್ವವನ್ನು ಸ್ವಲ್ಪದರಲ್ಲಿ ಹೇಳಬೇಕೆಂದರೆ, ಸರ್ವವ್ಯಾಪಿಯಾದ ಸರ್ವಶಕ್ತಿಮಾನ್ ಪುರುಷೋತ್ತಮನು ಅನಾದಿಯಾದ ತನ್ನ ತ್ರಿಗುಣಾತ್ಮಕ ಪ್ರಕೃತಿಯ ಮುಖಾಂತರವಾಗಿ ಸೃಷ್ಟಿಯನ್ನು ನಿರ್ಮಿಸುವನು. ಚೈತನ್ಯರೂಪನಾಗಿ ಅವನು ಎಲ್ಲೆಲ್ಲಿಯೂ ವಾಸಿಸುತ್ತಿರುವನು. ಜೀವಕೋಟಿಯಲ್ಲಿ ಅವನ ಸನಾತನ ಅಂಶವೇ ದೇಹಾದಿಗಳಲ್ಲಿ ಸೇರಿ ಸಂಸೃತಿಯ ಕರ್ಮಚಕ್ರದಲ್ಲಿ ಸಿಕ್ಕು

ತಾನು ದೇಹವು, ಅಲ್ಪವು, ಎಂಬ ಅಹಂಕಾರದಿಂದ ದ್ವಂದಕ್ಕೆ ಒಳಗಾಗಿ ಒದ್ದಾಡುವದು. ಈ ಸ್ಥಿತಿಯೊಳಗಿಂದ ಮುಕ್ತವಾಗಬೇಕೆಂಬ ಇಚ್ಛೆಯಿಂದ ಜೀವವು ಯಾವಾಗಲೂ ಯತ್ನಿಸುವದು. ಆ ಯತ್ನವು ಸಾಕಷ್ಟು ಬಲವುಳ್ಳದ್ದಾಯಿತೆಂದರೆ, ತಾನು ಪರಮಾತ್ಮನ ಸನಾತನ ಅಂಶವು, ಅಜರವು, ಅಮರವು, ತಾನು ತ್ರಿಗುಣಾತೀತವು, ದ್ವಂದ್ವಾತೀತವು ಎಂಬ ಜ್ಞಾನವಾಗಿ ದೇಹವಿರುವ ವರೆಗೆ ಕರ್ಮ ಮಾಡಿದರೂ ಬ್ರಹ್ಮಾರ್ಪಣ ಮಾಡುತ್ತಿರುವದರಿಂದ ಅವುಗಳ ಲೇಪವಾಗದೆ ಪುನರ್ಜನ್ಮದ ಬೀಜವನ್ನು ಹುರಿದುಬಿಟ್ಟು, ದೇಹವಳಿದ ಕೂಡಲೆ ಪರಮಾತ್ಮಸಾಯುಜ್ಯವನ್ನು ಹೊಂದಿ ಅನಂತಾನಂದದ ಪಟ್ಟವನ್ನೇರುವದು ಅಥವಾ ಪರಮಾತ್ಮಸಂಕಲ್ಪವಿದ್ದರೆ ಜನ್ಮಾಂತರಗಳಲ್ಲಿ ನಿತ್ಯಮುಕ್ತನಿದ್ದು ಲೋಕೋದ್ಧಾರದ ಕಾರ್ಯವನ್ನು ಮಾಡುವದು. ಇದೇ ತತ್ವಜ್ಞಾನವು. ಇದೇ ಅಧ್ಯಾತ್ಮವು. ಈ ಜ್ಞಾನದಿಂದ ಪ್ರೇರಿತರಾಗಿ ಜೀವನವನ್ನು ಅಧ್ಯಾತ್ಮಮಯ ಮಾಡಿದರೆ ಸಿದ್ಧಿಯು ನಮ್ಮ ಕೈಸೇರುವದು.

**ಸನಾತನ ಮಾರ್ಗವು**—ಹೀಗೆ ಮನುಷ್ಯನ ಪರಮಸಾಧ್ಯ, ಪರಮಾತ್ಮಸ್ವರೂಪ, ಪ್ರಕೃತಿ ಮತ್ತು ಗುಣಗಳ ಸ್ವರೂಪ, ಜೀವಸ್ವರೂಪ ಮತ್ತು ಅದರ ಬದ್ಧತೆ ಇವುಗಳನ್ನು ಸಂಕ್ಷೇಪದಿಂದ ಹೇಳಿದ್ದಾಯಿತು. ಆದರೆ ಜೀವನು ಆ ಸಾಧ್ಯವನ್ನು, ಆ ಪರಮಾನಂದವನ್ನು, ದೊರಕಿಸುವ ಬಗೆ ಹೇಗೆ? ಇದರ ಬಗ್ಗೆ ಗೀತೆಯು ಯಾವ ಸನಾತನ ಮಾರ್ಗವನ್ನು ಹೇಳುವದು? ದೇಶಕಾಲಪರಿಸ್ಥಿತಿಯಿಂದ, ಶಿಷ್ಯನ ವಿಶಿಷ್ಟ ತರಗತಿಯಿಂದ ಮರ್ಯಾದಿತವಾಗದೆ ಇರುವ ಸನಾತನ ಮಾರ್ಗವೊಂದನ್ನು ಗೀತೆಯು ಹೇಳುವದು. ಅದಾವದೆಂದರೆ ಪರಮಾತ್ಮನಿಗೆ ಅನನ್ಯಭಾವದಿಂದ ಶರಣಾಗತನಾಗುವದು. ಪ್ರತಿಜೀವನಿಗೆ ತಾನು ಅಲ್ಪನು, ಪಾಪಿಯು, ದುಃಖಿಯು, ಅಪೂರ್ಣನು ಎಂಬ ಭಾನವಿರುವದು. ಅವನು ಎರಡನೆಯ ಯಾವ ವಿಚಾರವನ್ನೂ ಮಾಡದೆ ಅನಂತ, ನಿಷ್ಪಾಪ, ಆನಂದಮಯ, ಪೂರ್ಣ ಪರಮಾತ್ಮನಿಗೆ ಸ್ವಾತ್ಮಾರ್ಪಣವನ್ನು ಮಾಡಿ ಅವನ ಪ್ರೇರಣೆಯಿಂದ ಪ್ರವೃತ್ತನಾಗಬೇಕು. ಈ ಮಾರ್ಗವು ಯಾವ ದೇಶಕಾಲಗಳನ್ನಾಗಲಿ, ಜಾತಿಗೋತ್ರಗಳನ್ನಾಗಲಿ, ಅಧಿಕಾರ ಅನಧಿಕಾರಗಳನ್ನಾಗಲಿ ಅವಲಂಬಿಸಿಲ್ಲ. ಇದು ನಿತ್ಯ

ಮತ್ತು ಸನಾತನ ಮಾರ್ಗವು, ಸಾರ್ವತ್ರಿಕ ಮಾರ್ಗವು. ಈ ಸಾಧನದಲ್ಲಿ, ನಾನೊಬ್ಬ ಜೀವನೆಂಬರಿವು, ಪರಮಾತ್ಮನು ಈ ಸೃಷ್ಟಿಗೆ ಅಧ್ಯಕ್ಷನಾಗಿರುವ ಅನಂತಶಕ್ತಿಯು ಎಂಬ ಶ್ರದ್ಧೆ. ಇವೆರಡು ಇದ್ದರೆ ಸಾಕು. ತನ್ನ ಚಿತ್ತವನ್ನು ಈ ರೀತಿ ಪರಮಾತ್ಮನ ಚರಣಗಳಲ್ಲಿಟ್ಟು ನಮ್ಮ ಎಲ್ಲ ಕರ್ಮಗಳನ್ನು ಅವನಿಗೆ ಅರ್ಪಿಸುತ್ತ ಹೋದರೆ ಪರಮಸಿದ್ಧಿಯು ಕ್ಷಿಪ್ರದಲ್ಲಿಯೆ ದೊರೆಯುವದೆಂದು ಗೀತೆಯ ಸಿದ್ಧಾಂತವಿರುವದು. ಮೇಲಿನದು ಗೀತೆಯಲ್ಲಿಯ ಸನಾತನತತ್ವಜ್ಞಾನವು, ಇದು ಗೀತೆಯಲ್ಲಿಯ ಸನಾತನ ಆಚಾರವು.

**ಆಧ್ಯಾತ್ಮಿಕ ಜೀವನವು**— ಈ ರೀತಿಯಾಗಿ, ಯುದ್ಧಪ್ರಸಂಗ, ಅರ್ಜುನನೆಂಬ ವ್ಯಕ್ತಿ, ಕ್ಷತ್ರಿಯಧರ್ಮ ಮುಂತಾದ ಯಾವ ವಿಶಿಷ್ಟ ದೇಶಕಾಲ ಪ್ರಸಂಗಗಳನ್ನನುಲಕ್ಷಿಸದೆ ಗೀತೆಯು ಯಾವ ಸನಾತನವಾದ ಸತ್ಯವನ್ನು ಹೇಳುವದು ಇದನ್ನು ಅತಿ ಸಂಕ್ಷೇಪದಿಂದ ಹೇಳಿದೆವು. ಈ ತತ್ವಜ್ಞಾನವು ಅತ್ಯಂತ ಸುಲಭವೂ ಆಬಾಲವೃದ್ಧರಿಗೂ ತಿಳಿಯುವಂತಹದೂ ಇರುವದು. ಈ ಕಾಣಿಸುವ ದ್ರೃಶ್ಯಸೃಷ್ಟಿಯ ಮೂಲಕ್ಕೆ ಇದ್ದ ಆದಿಶಕ್ತಿ ಪರಮಾತ್ಮನನ್ನು ತಿಳಿದುಕೊಳ್ಳಿರೆಂದೂ ಆ ಅರಿವಿನ ಬೆಳಕಿನಲ್ಲಿ ಜೀವಿಸಿರೆಂದೂ ಅಧ್ಯಾತ್ಮಮಯ ಜೀವನದ ಮಾರ್ಗವನ್ನು ಗೀತೆಯು ಹೇಳುವದು. ಜೀವಾತ್ಮನನ್ನು ಪರಮಾತ್ಮನ ಚರಣದಲ್ಲಿ ಅರ್ಪಣ ಮಾಡುವ ಪರಮಾತ್ಮಯೋಗವನ್ನು ಗೀತೆಯು ಉಸುರುವುದು. ಈ ಧರ್ಮವು ಎಲ್ಲಕ್ಕೂ ಹೆಚ್ಚಿನದು, ಎಲ್ಲಕ್ಕೂ ಗೂಢವಾದದ್ದು. ಆದರೆ ಎಲ್ಲ ದೇಶಕಾಲಪರಿಸ್ಥಿತಿಗೂ ಸಾಮಾನ್ಯವಾದದ್ದು, ಎಲ್ಲ ಸಾಧಕರಿಗೂ ಸಮಾನವಾದದ್ದು. ಆದುದರಿಂದ ಅದು ಸನಾತನವು, ಶಾಶ್ವತವು, ನಿತ್ಯವು, ತ್ರಿಕಾಲಾಬಾಧಿತವು. ಈ ಧರ್ಮದಿಂದ ಸರ್ವರಿಗೆ ಸಿದ್ಧಿಯು ದೊರೆಯುವದು ನಿಶ್ಚಯವು.

---

# ೬. ಗೀತೆಯಲ್ಲಿಯ ಯುಗಧರ್ಮವು.

**ಸೂಚನೆ**— ದೇಶಕಾಲಪರಿಸ್ಥಿತಿಗಳಿಂದ ಅಮರ್ಯಾದಿತವಾದ ತತ್ವಜ್ಞಾನವು ಮತ್ತು ಅಧ್ಯಾತ್ಮವು ಹೇಳಲ್ಪಟ್ಟಿತು. ಜೀವನವನ್ನು ಅಧ್ಯಾತ್ಮಮಯ ಮಾಡಿಬಿಡುವ ಸನಾತನ ಮತ್ತು ಶಾಶ್ವತ ಮಾರ್ಗವಾದರೂ ಹೇಳ

ಲ್ಪಟ್ಟಿತು. ಇನ್ನು ಗೀತೆಯ ಕಾಲ, ಪ್ರಸಂಗ, ಉಪದೇಶಕನ ಮತ್ತು ಉಪದೇಶ ಪಡೆದವನ ವೈಶಿಷ್ಟ್ಯಗಳು ಇವುಗಳಿಂದ ಮರ್ಯಾದಿತವಾದ ಯುಗಧರ್ಮವನ್ನು ಇಲ್ಲಿ ಸ್ವಲ್ಪ ವಿವೇಚಿಸಬೇಕಾಗಿದೆ.

**ಯುಗಧರ್ಮವೆಂದರೇನು—** ಸನಾತನಧರ್ಮವು ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಸಾಮಾನ್ಯವಾಗಿರುವ ಧರ್ಮವು. ಯುಗಧರ್ಮವು ವಿಶಿಷ್ಟ ದೇಶಕಾಲಪರಿಸ್ಥಿತಿ, ವ್ಯಕ್ತಿ, ಪ್ರಸಂಗ, ಇವುಗಳಿಗೆ ಅನ್ವಯಿಸುವಂತಹದು. ಧರ್ಮಕ್ಕೆ ಎರಡು ಮೈಗಳೆಂದು ಈ ಮೊದಲೇ ಹೇಳಿದೆ. ಆ ಎರಡೂ ಮೈಗಳಲ್ಲಿ ಮತ್ತೆ ಸನಾತನಭಾಗ ಮತ್ತು ಯುಗಭಾಗ ಎಂದು ವಿಭಾಗಿಸಬಹುದು. ಒಂದು ಉದಾಹರಣೆಯನ್ನು ಕೊಡದ ಹೊರ್ತು ಈ ವಿಷಯವು ಸ್ಪಷ್ಟವಾಗದು. ಪರಮಾತ್ಮನು ಇರುವನು, ಇದು ಸನಾತನ ಸತ್ಯವು; ಸಿದ್ಧಿಗಾಗಿ ಜೀವನು ಅವನಿಗೆ ಸ್ವಾತ್ಮಾರ್ಪಣ ಮಾಡಬೇಕು, ಇದು ಸನಾತನ ಸಾಧನವು. ಗೀತೆಯ ೧೧ ನೆಯ ಅಧ್ಯಾಯದಲ್ಲಿ ಅರ್ಜುನನು ಸಾಕ್ಷಾತ್ಕರಿಸಿದ ವಿಶ್ವರೂಪವು ಸನಾತನವು. ಆದರೆ ವಿಶ್ವರೂಪದಲ್ಲಿ ಅವನು ಕೊನೆಗೆ ನೋಡಿದ ವಿಕ್ರಾಳಸ್ವರೂಪವು, ಕಾಲಸ್ವರೂಪವು ಆ ಕಾಲಕ್ಕೆ ಲೋಕಕ್ಷಯ ಮಾಡುವದಕ್ಕಾಗಿ ಧರಿಸಿದ ಯುಗಸ್ವರೂಪವು. 'ಮಾಮೇಕಂ ಶರಣಂ ವ್ರಜ' ಎಂದು ಪರಮಾತ್ಮನು ಜೀವನಿಗೆ ಹೇಳುವದು ಸನಾತನ ಸಾಧನವು; ನೀನು ಕ್ಷತ್ರಿಯನು, ಕೌರವರ ಕೂಡ ಯುದ್ಧಮಾಡಿ ತದ್ವಾರಾ ನನ್ನನ್ನರ್ಚಿಸು, ಎಂದು ಹೇಳುವದು ಯುಗಸಾಧನವು. ನರನಾರಾಯಣರು ಸನಾತನರು, ಆದರೆ ಕೃಷ್ಣಾರ್ಜುನರು ಯುಗಪುರುಷರು. ಈ ದೃಷ್ಟಿಯಿಂದ ಇನ್ನು ಈ ಗೀತೆಯಲ್ಲಿಯ ಯುಗಧರ್ಮದ ಕಡೆಗೆ ನೋಡುವ.

**ಯುಗಧರ್ಮದ ಸೀಮೆ—** ಸನಾತನಧರ್ಮವು ಇಡೀ ವಿಶ್ವದಲ್ಲಿಯು ಯಾವದೇ ದೇಶದಲ್ಲಿಯ ಯಾವದೇ ಕಾಲದಲ್ಲಿಯ ಯಾವದೇ ವ್ಯಕ್ತಿಗೆ ಸಾಮಾನ್ಯವಾಗಿರುವುದರಿಂದ ಅದು ಅತ್ಯಂತ ವ್ಯಾಪಕವಿರುವದು. ಗೀತೆಯಲ್ಲಿ ಮುಖ್ಯವಾಗಿ ಸನಾತನಧರ್ಮವೇ ಹೆಚ್ಚಾಗಿ ಹೇಳಲ್ಪಟ್ಟದ್ದರಿಂದ ಅದು ಇಡೀ ಮಾನವಜಾತಿಗೆ ಧರ್ಮಪುಸ್ತಕವಾಗುವಂತಿದೆ. ಈಗ ಬೇರೆ ಬೇರೆ ಜನಾಂಗಗಳಲ್ಲಿ ಪ್ರಚಲಿತವಿದ್ದ ಬಾಯಬಲ್ಲ, ಕುರಾನ, ಧಮ್ಮಪದ, ಕಾನಫ್ಯೂಸಿಯಸ್ಸನ ವಚನಗಳು, ಝುರಥುಷ್ಟ್ರನ ಉಪದೇಶವು,

ಜಿನೋಪದೇಶವು, ಗೀತೆ ಮುಂತಾದ ಧರ್ಮಪುಸ್ತಕಗಳಲ್ಲಿ ಒಂದನ್ನೇ ಇಡೀ ಜಗತ್ತಿಗೆ ಸಾಮಾನ್ಯ ಧರ್ಮಪುಸ್ತಕವನ್ನು ಮಾಡಬೇಕಾದರೆ ಯಾವು ದನ್ನು ಮಾಡಬೇಕೆಂದು ನಿಃಪಕ್ಷಪಾತಿಯಾದವರನ್ನು ಕೇಳಿದರೆ ಅವರು 'ಗೀತೆ' ಯೆಂದು ಒಂದೇ ಉಸುರುನಿಂದ ಹೇಳುವರು. ಯಾಕಂದರೆ ಅದು ಸಂಪೂರ್ಣ ತತ್ವಗ್ರಂಥವಿರುವದಿದ್ದು ಮತ್ತೆ ಮೇಲೆ ಸನಾತನಧರ್ಮದ ಆದಿಗ್ರಂಥವಾಗಿದೆ. ಯುಗಧರ್ಮದ ಪುಸ್ತಕಗಳಲ್ಲಿ ಈ ಸಾಮರ್ಥ್ಯವೂ ಈ ವ್ಯಾಪಕತ್ವವೂ ಇರಲಾರದು. ಯುಗಧರ್ಮವು ಆಯಾ ದೇಶಕಾಲ ಗಳಲ್ಲಿ ಮಾತ್ರ ಉಪಯುಕ್ತವಾದುದು. ಅದು ಎಲ್ಲ ಕಡೆಗೂ ಯಾವಾ ಗಲೂ ಅನುಸರಿಸಲಿಕ್ಕೆ ಬರಲಾರದು.

**ಗೀತೆಯಲ್ಲಿಯ ಯುಗಧರ್ಮವು**— ಗೀತೆಯು ಭರತಖಂಡದಲ್ಲಿ ಭಾರತೀಯ ಯುದ್ಧದಕಾಲಕ್ಕೆ ಅರ್ಜುನನೆಂಬ ಕ್ಷತ್ರಿಯನನ್ನು ಯುದ್ಧಕ್ಕೆ ಪ್ರವರ್ತಿಸುವದಕ್ಕಾಗಿ ಶ್ರೀಕೃಷ್ಣನೆಂಬ ಅವತಾರಿಕನಿಂದು ಹೇಳಲ್ಪಟ್ಟಿತು. ಆದುದರಿಂದ ಅದರಲ್ಲಿ ಯುಗಧರ್ಮದ ಹಲಕೆಲವು ಮಾತುಗಳು ಬರು ವದು ಸಹಜವು. ಚಾತುರ್ವರ್ಣ್ಯವು, ಕ್ಷಾತ್ರಧರ್ಮವು, ಯಜ್ಞದ ಕಲ್ಪ ನೆಯು, ಅವತಾರದ ಕಲ್ಪನೆಯು, ಕಾಲಸ್ವರೂಪದ ದರ್ಶನವು ಇವೆಲ್ಲ ಭರತಖಂಡವನ್ನು ಬಿಟ್ಟು ಇನ್ನೊಂದೆಡೆಗೆ ಇಲ್ಲ. ಯುದ್ಧವು, ಅರ್ಜುನನ ಕ್ಷತ್ರಿಯತ್ವವು, ಅವನ ವಿಷಣ್ಣತೆ ಇವು ಆ ಪ್ರಸಂಗವನ್ನು ತೋರಿಸುವವು. ಹೀಗೆ ಈ ವಿಷಯಗಳ ಬಗ್ಗೆ ಗೀತೆಯಲ್ಲಿದ್ದ ಉಲ್ಲೇಖಗಳು ಮತ್ತು ಅವುಗಳನ್ನವಲಂಬಿಸಿದ ಉಪದೇಶದ ಮಾತುಗಳು ಆಯಾ ದೇಶಕಾಲ ಪ್ರಸಂಗಗಳನ್ನಷ್ಟೇ ಅನ್ವಯಿಸುವವು. ಹೀಗಿದ್ದರೂ ಅನೇಕ ಸಾರೆ ಗೀತೆಯು ಇಂಥ ವಿಶಿಷ್ಟ ಸಂಗತಿಗಳಿಗೆ ಸಹ ಬಹಳೇ ಕೌಶಲ್ಯದಿಂದ ಸಾಮಾನ್ಯಸ್ವರೂಪವನ್ನು ಕೊಟ್ಟು ಅವು ಸಕಲ ಮಾನವರಿಗೂ ಅನ್ವಯಿ ಸುವಂತೆ ಮಾಡುವದು. ಇದು ಗೀತೆಯಲ್ಲಿಯ ವಿಶೇಷವು. ಚಾತುರ್ವ ರ್ಣ್ಯವೆಂದ ಕೂಡಲೆ ಜನ್ಮವಿಶಿಷ್ಟ ವರ್ಣದ ಕಲ್ಪನೆಯೇ ಬಂದೀತೆಂದು, ಮುಂದೆ ಒಮ್ಮೆಲೆ 'ಗುಣಕರ್ಮ ವಿಭಾಗಶಃ' ಎಂಬ ವಿವೇಚನೆ ಇದೆ. ಕ್ಷಾತ್ರಧರ್ಮವೆಂದರೆ ಹಿಂದೂಧರ್ಮೀಯರಿಗಷ್ಟೆ ಸಂಬಂಧವಿದ್ದುದು ಎಂದು ತಿಳಿಯಬಾರದೆಂದು 'ದಾನಮೀಶ್ವರ ಭಾವಶ್ಚ' ಎಂಬ ಮುಂತಾದ

ಗುಣಕರ್ಮಗಳಿಂದ, ಲಕ್ಷಣಗಳಿಂದ ಲಕ್ಷಿತವಾದದ್ದು ಎಂದು ಉಲ್ಲೇಖಿವಿದೆ. ಅವತಾರವೆಂದ ಕೂಡಲೆ ದಶಾವತಾರದ ಕಲ್ಪನೆಯುಷ್ಟೇ ಬರಬಾರದೆಂದು 'ಯದಾಯದಾ ಹಿ ಧರ್ಮಸ್ಯಗ್ಲಾನಿರ್ಭವತಿ........ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ' ಎಂದು ಶ್ರೀಕೃಷ್ಣನು ಸಾಮಾನ್ಯ ಅವತಾರನಿಯಮವನ್ನು ಹೇಳಿದ್ದಾನೆ. ಯಜ್ಞವೆಂದರೆ ಜ್ಯೋತಿಷ್ಟೋಮಾದಿ ಅಥವಾ ಅಶ್ವಮೇಧಾದಿಗಳಷ್ಟೇ ಇಲ್ಲಿ ಹೇಳಲ್ಪಟ್ಟಿಲ್ಲವೆಂದು ತೋರಿಸಲಿಕ್ಕೆ ಶ್ರೀಕೃಷ್ಣನು ಯಜ್ಞದ ಮುಖ್ಯ ಲಕ್ಷಣವನ್ನು ಕಂಡುಹಿಡಿದು ದ್ರವ್ಯಯಜ್ಞ, ತಪೋಯಜ್ಞ ಪ್ರಾಣಯಜ್ಞ ಮುಂತಾದವುಗಳನ್ನು ಬಹಳೇ ಸುಂದರವಾಗಿ ವರ್ಣಿಸಿದ್ದಾನೆ. ಕಾಲಸ್ವರೂಪವು ಕೇವಲ ಸಂಹಾರಕಶಕ್ತಿಯು ತಾತ್ಪೂರ್ತಿಕ ದಿಗ್ದರ್ಶನವೆಂದು ತೋರಿಸಿದ್ದಾನೆ. ಹೀಗೆ ಅಲ್ಲಲ್ಲಿ ಯುಗಧರ್ಮವನ್ನು ಹೇಳುವ ಪ್ರಸಂಗವು ಬಂದರೂ ಅದಕ್ಕೆ ಸಂಕುಚಿತತ್ವವು ಉಂಟಾಗಬಾರದೆಂದೂ ಗೀತೆಯು ಕೇವಲ ಹಿಂದೂಧರ್ಮೀಯರಿಗೆ ಮಾತ್ರ ಅನ್ವಯಿಸದೆ ಇಡೀ ಜಗತ್ತಿಗೆ ಸಂಬಂಧಪಟ್ಟಿರುವದೆಂದು ಸಿದ್ಧ ಮಾಡಲಿಕ್ಕೂ ಶ್ರೀಕೃಷ್ಣನು ಯುಗಧರ್ಮಕ್ಕೆ ಅಲ್ಲಲ್ಲಿ ಸಾಮಾನ್ಯಸ್ವರೂಪವನ್ನೂ ವ್ಯಾಪಕಸ್ವರೂಪವನ್ನೂ ಸನಾತನಸ್ವರೂಪವನ್ನೂ ಕೊಟ್ಟಿರುವನು.

**ವಿವಿಧಮಾರ್ಗಗಳು**—ಗೀತೆಯಲ್ಲಿ ಸನಾತನಧರ್ಮವೇ ಒತ್ತಿ ಒತ್ತಿ ಹೇಳಲ್ಪಟ್ಟದ್ದರಿಂದ ಅದರಲ್ಲಿ ಪರಮಾತ್ಮಸಾಧನೆಯು, ಪರಮಪದವನ್ನು ದೊರಕಿಸುವ ವಿವಿಧಮಾರ್ಗಗಳು ಹೇಳಲ್ಪಟ್ಟಿವೆ. ಅವು ಒಂದಕ್ಕೊಂದು ಹೆಚ್ಚು ಎಂದು ಹೇಳಬೇಕೆಂದು ಅಥವಾ ಅವುಗಳಲ್ಲಿ ಯಾವದೇ ಉಚ್ಚನೀಚತೆಯನ್ನು ತೋರಿಸಬೇಕೆಂದು ಶ್ರೀಕೃಷ್ಣನ ಉದ್ದೇಶವಿದ್ದಂತೆ ಎಲ್ಲಿಯೂ ತೋರುವದಿಲ್ಲ. ಹೀಗಿದ್ದರೂ ಒಂದೆರಡು ಕಡೆಗೆ 'ಕರ್ಮಯೋಗೋ ವಿಶಿಷ್ಯತೇ' ಎಂಬ ಮುಂತಾದ ಶಬ್ದಪ್ರಯೋಗವು ಬಂದಿದೆ. ಶ್ರೀಕೃಷ್ಣನು ಹೀಗೆ ಮಾಡಿದುದು ಅವುಗಳಲ್ಲಿಯ ಉಚ್ಚನೀಚತೆಯ ಭಾವವನ್ನು ತೋರಿಸುವದಕ್ಕಾಗಿಯಲ್ಲ. ಆದರೆ ಆ ಮಾರ್ಗದ ಸುಲಭತೆ ಮತ್ತು ವಿಶೇಷತಃ ಅರ್ಜುನನಿಗೆ ಉಪದೇಶವು ನಡೆದಿರುವದರಿಂದ ಅವನಿಗೆ ಅದೇ ಮಹತ್ವದ್ದೆಂದು ಬಲಪಡಿಸಿ ಹೇಳವುದೇ ಶ್ರೀಕೃಷ್ಣನ ಉದ್ದೇಶವಾಗಿದೆ. ಶ್ರೀಕೃಷ್ಣನು ಯಾವಾಗಲೂ ಎಲ್ಲ ಮಾರ್ಗಗಳ ಸಮನ್ವಯವನ್ನೂ ಎಲ್ಲ

ಮಾರ್ಗಗಳ ಸಮಾನತೆಯನ್ನೂ ಹೇಳುವನು. ಕರ್ಮಯೋಗವನ್ನು ಹೇಳುವಾಗ ಸಹ, ಸಂಕಲ್ಪದ ಸನ್ಯಾಸ ಮಾಡದೆ ಕರ್ಮಯೋಗವು ಸಾಧಿಸದು, ಎಂದು ಅವನು ಹೇಳುವನು. ಅವು ಒಂದಕ್ಕೊಂದು ಹೆಚ್ಚು ಕಡಿಮೆ ಇಲ್ಲವೆಂದು ಹೇಳುವದೇ ಅವನ ಉದ್ದೇಶವು. ಶ್ರೀಕೃಷ್ಣನ ಇಡೀ ಧೋರಣವನ್ನು ತಿಳಿದುಕೊಳ್ಳದೆ ಯಾವದೇ ಒಂದು ಮಾರ್ಗವು ಹೆಚ್ಚಿನದು, ಅದನ್ನೇ ಅನುಸರಿಸಬೇಕು ಎಂದು ಯಾರಾದರೂ ಹಟವನ್ನು ಹಿಡಿದರೆ ತಪ್ಪಾಗುವುದು. ಯಾಕೆಂದರೆ ಬೇರೆ ಬೇರೆ ಜನರು ತಮ್ಮ ಸ್ವಭಾವದಂತೆ ಬೇರೆ ಬೇರೆ ಯಜ್ಞಗಳನ್ನು (೪ನೆಯ ಅಧ್ಯಾಯ)........ಜ್ಞಾನಯಜ್ಞೇನ ಚಾಪ್ಯನ್ಯೇ........ಮಾಡುವರು. ಬೇರೆ ಬೇರೆ ಜನರು (೧೩ನೆಯ ಅಧ್ಯಾಯ ಮಂತ್ರ ೨೪-೨೬) ಧ್ಯಾನ, ಸಾಂಖ್ಯ, ಕರ್ಮ ಮುಂತಾದವುಗಳಲ್ಲಿ ಯಾವುದಾದರೊಂದು ಯೋಗದಿಂದ ಪರಾವಿದ್ಯೆಯನ್ನು ಪಡೆಯುವರೆಂದು ಶ್ರೀಕೃಷ್ಣನು ಹೇಳಿದ್ದಾನೆ. ಈ ರೀತಿಯಾಗಿ ಯಾವುದೊಂದು ಹೆಚ್ಚು ಎಂದು ಯಾರೂ ಹಟ ಹಿಡಿಯದೆ ಅಧ್ಯಾತ್ಮಜ್ಞಾನವನ್ನು ಪಡೆದು ಮೋಕ್ಷಭಾಗಿಯಾಗುವ ಸದುದ್ದೇಶದಿಂದ ನೀವು ಯಾವಾಗಲೂ ಪರಮಾತ್ಮನಿಗೆ ಸರ್ವಸ್ವವನ್ನು ಅರ್ಪಿಸುತ್ತಿರಬೇಕು, ಎಂಬ ಸರ್ವಧರ್ಮಸಮನ್ವಯರೂಪವಾದ ಉಪದೇಶವನ್ನು ಶ್ರೀಕೃಷ್ಣನು ಕೊನೆಗೆ ಮಾಡಿರುವನು. ಶ್ರೀಕೃಷ್ಣನು ಅಲ್ಲಲ್ಲಿ ವಿವಿಧಮಾರ್ಗಗಳನ್ನು ಹೇಳಿದ್ದರೂ ಅವು ಯುಗಧರ್ಮಗಳೇ ಸೈ. ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವ್ಯಕ್ತಿಗಳಿಗೆ ಅವು ಉಪಯುಕ್ತವಾದವುಗಳು. ಆದರೆ 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ ಅವನ ಉಪದೇಶಸರ್ವಸ್ವದ ಸಾರವಾದ ಸನಾತನ ಧರ್ಮವೇ ವಿಹಿತವೆಂದು ಹಿಂಬಾಲಿಸಿದರೆ ಎಲ್ಲ ಬಗೆಯ ಆಗ್ರಹಗಳೂ ನಮ್ಮ ಪಂಥವು ಹೆಚ್ಚು ನಿಮ್ಮದು ಹೀನವೆಂಬ ಅಹಂಕಾರವೂ ಅಳಿದು ಎಲ್ಲರಿಗೂ ತಮ್ಮ ತಮ್ಮ ಶಕ್ತಿಸಾಮರ್ಥ್ಯಗಳಿಗನುಸರಿಸಿ, ತಮ್ಮ ಒಲವಿನಂತೆ ಸ್ವಧರ್ಮಾಚರಣೆ ಮಾಡಲಿಕ್ಕೆ ಅನುಕೂಲವಾಗುವದು.

---

## ೭. ಯೋಗಪಂಚಕವು.



**ಸೂಚನೆ—** ಗೀತೆಯಲ್ಲಿ ಯುಗಧರ್ಮವನ್ನು ಹೇಳಿದ್ದರೂ ಅದಕ್ಕೆ ಶ್ರೀಕೃಷ್ಣನು ಆಗಾಗ್ಗೆ ಸನಾತನ ಧರ್ಮದ ಸ್ವರೂಪವನ್ನು ಹೇಗೆ ಕೊಟ್ಟಿರುವನೆಂಬುದನ್ನು ಹೇಳಿ ಗೀತೆಯಲ್ಲಿ ಸಿದ್ಧಿಯನ್ನು ಪಡೆಯುವ ೮ ಮಾರ್ಗಗಳನ್ನು ಇಲ್ಲಿ ವಿವರವಾಗಿ ವಿವೇಚಿಸುವ ವಿಚಾರವಿದೆ.

**ಯೋಗವೆಂದರೇನು—** ಯೋಗವೆಂಬ ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಇಲ್ಲಿ ಅದನ್ನು ವಿಶಿಷ್ಟಾರ್ಥದಲ್ಲಿಯೆ ಉಪಯೋಗಿಸಿದೆ. ಯೋಗವೆಂದರೆ ಸಿದ್ಧಿಯನ್ನು, ಪರಮ ಪದವಿಯನ್ನು, ಮೋಕ್ಷವನ್ನು ಪಡೆಯುವ ಸಾಧನವು, ಮಾರ್ಗವು, ಪಂಥವು, ವಿಶಿಷ್ಟ ಆಚಾರವು, ನಡೆಯು. ಈಗಿದ್ದ ನಮ್ಮ ಅಪೂರ್ಣತ್ವವನ್ನು ಕಳೆದು ದುಃಖಮಯ ಸ್ಥಿತಿಯನ್ನು ದಾಟಿ ಹೋಗುವ ಸಾಧನಕ್ಕೆ ಯೋಗವೆಂಬ ಹೆಸರು. ನಾವು ಯಾವ ಸ್ಥಿತಪ್ರಜ್ಞ, ಅಥವಾ ಬ್ರಾಹ್ಮೀಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳಬೇಕಾಗಿದೆಯೋ ಯಾವ ಅಚ್ಚಳಿಯದ ಸುಖವನ್ನು ಪಡೆಯಬೇಕಾಗಿದೆಯೋ ಯಾವ ನಿತ್ಯಾನಂದ ಸ್ಫೂರ್ತಿಯನ್ನು ಹೊಂದಬೇಕಾಗಿದೆಯೋ ಅದನ್ನು ದೊರಕಿಸಲಿಕ್ಕೆ ಬುದ್ಧಿಪುರಸ್ಸರವಾಗಿ, ಸಂಕಲ್ಪಪೂರ್ವಕವಾಗಿ ಸಾವಧಾನದಿಂದ ಮಾಡುವ ಪ್ರಯತ್ನಕ್ಕೆ ಯೋಗವೆಂದು ಕರೆಯುವರು. ಈ ರೀತಿ ಯೋಗವು ನಡೆಯಬೇಕಾದರೆ ಮೊದಲು ಸಿದ್ಧಸ್ಥಿತಿಯ ಸ್ಪಷ್ಟಕಲ್ಪನೆ, ಅದನ್ನು ಪಡೆಯಬೇಕೆಂಬ ದೃಢಸಂಕಲ್ಪ, ಅದಕ್ಕಾಗಿ ವಿವೇಕಪೂರ್ವಕ ಯಾವುದೊಂದು ಪ್ರಯತ್ನ, ಇಷ್ಟು ಘಟಕಗಳು ಅವಶ್ಯವಾದವುಗಳು. ಇವುಗಳಲ್ಲಿ ಮೊದಲನೆಯದನ್ನು ವಿಚಾರಿಸುವ.

**ಪರಮಸಿದ್ಧಿ—** ಯಾವುದಾದರೊಂದು ಸಾಧನವನ್ನು ಕೈಕೊಳ್ಳಬೇಕಾದರೆ ನಮ್ಮ ಗುರಿಯ, ನಮ್ಮ ಧ್ಯೇಯದ ಅಚ್ಚುಕಟ್ಟಾದ ಕಲ್ಪನೆಯು ನಮಗೆ ಇರುವದು ಅವಶ್ಯವು. ಅದಿಲ್ಲದೆ ಹೋದರೆ ನಾವು ಹಾದೀ ತಪ್ಪಿ ಅಡ್ಡದಾರೀ ಹಿಡಿಯುವ ಸಂಭವವಿದೆ. ನಾವೆಲ್ಲರೂ ದುಃಖರಹಿತಸುಖಾಪೇಕ್ಷಿಗಳೆಂಬಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಸುಖವು ಎರಡು

ಬಗೆಯುದಿರುವದು. ಇಂದ್ರಿಯಗಳದ್ವಾರಾ ವಿಷಯುಗಳ ಉಪಭೋಗದಿಂದ ಬಂದುದು ಒಂದು ಸುಖವು, ಇನ್ನೊಂದು ಒಳಗಿಂದೊಳಗೆಯೆ ಆತ್ಮನಲ್ಲಿ ಸ್ಫುರಿಸುವ ಅತೀಂದ್ರಿಯ ಸುಖವು; ಮೊದಲನೆಯದು ಇಂದ್ರಿಯ ಸುಖವು ಅಥವಾ ವಿಷಯಸುಖವು, ಎರಡನೆಯದು ಆತ್ಮಸುಖವು; ಒಂದು ಪ್ರೇಯಸ್ಸು ಇನ್ನೊಂದು ಶ್ರೇಯಸ್ಸು; ಒಂದು ಇಹಸುಖವು ಮತ್ತೊಂದು ಪರಸುಖವು; ಒಂದರಲ್ಲಿ ವಿಷಯಗಳು ಸಾಧನಗಳು ಇಂದ್ರಿಯವು ಮುಖವು, ಇನ್ನೊಂದರಲ್ಲಿ ಆತ್ಮಜ್ಞಾನವೇ ಸಾಧನವು ಆತ್ಮನೇ ಮುಖವು; ಒಂದು ಪರತಂತ್ರವು ಮತ್ತೊಂದು ಸ್ವತಂತ್ರವು; ಒಂದು ಪರಾವಲಂಬಿಯು ಇನ್ನೊಂದು ನಿರಾಲಂಬವು; ಒಂದು ಚಲವು ಇನ್ನೊಂದು ಸ್ಥಿರವು; ಒಂದು ಅನಿತ್ಯವು ಮತ್ತೊಂದು ನಿತ್ಯವು; ಒಂದು ದುಃಖಮಿಶ್ರಿತವು ಇನ್ನೊಂದು ದುಃಖರಹಿತವು. ಈ ಎರಡು ಬಗೆಯ ಸುಖಗಳಲ್ಲಿ ಈ ಎರಡು ತರಹದ ಆನಂದಗಳಲ್ಲಿ ಎಲ್ಲರೂ ಬಯಸುವದು ನಿತ್ಯ ನಿಶ್ಚಲ ಸುಖವೇ ಎಂದು ಬೇರೆ ಹೇಳಬೇಕಾಗಿಲ್ಲ. ಆ ಬಗೆಯ ನಿತ್ಯಾನಂದದಲ್ಲಿ ಯಾವಾಗಲೂ ಸ್ಥಿರವಾಗಿರಬೇಕೆಂಬುದೆ ಎಲ್ಲರ ಧ್ಯೇಯವು. ನಾವು ಏನೇ ಮಾಡುತ್ತಿರಲಿ, ಕೂತಿರಲಿ, ನಿಂತಿರಲಿ, ಮಾತಾಡುತ್ತಿರಲಿ ಯುದ್ಧಮಾಡುತ್ತಿರಲಿ, ಆ ಸುಖವು ನಮ್ಮ ಅಂತಃಕರಣದೊಳಗಿಂದ ಅಳಿದಿರಬಾರದೆಂದೇ ನಮ್ಮ ಬಯಕೆಯು. ಯಾವುದು ದೊರಕಿದರೆ ದುಃಖವೆಂಬುದೆಲ್ಲ ಹೋಗುವದು, ಯಾವುದು ಸಿಕ್ಕರೆ ಅದಕ್ಕೂ ಹೆಚ್ಚಿನದೇನೂ ಇಲ್ಲವೆಂಬ ಭಾವನೆಯಾಗುವದು, ಯಾವುದು ಸ್ಥಿರವಾಯಿತೆಂದರೆ ಮಹದ್ದುಃಖವು ಸಹ ತೊಂದರೆ ಕೊಡಲಾರದು, ಎಂದು ಈ ಆತ್ಯಂತಿಕ, ಅತೀಂದ್ರಿಯ, ಬುದ್ಧಿಗ್ರಾಹ್ಯ ಸುಖದ ವರ್ಣನೆಯನ್ನು ಗೀತಾಕಾರರು (೬-೨೧, ೨೨) ಮಾಡಿರುವರು. ಈ ಸ್ಥಿತಿಯೆ ಪುರುಷನ ಪರಮಸಾಧ್ಯವು.

**ಜೀವನ್ಮುಕ್ತಿ ಮತ್ತು ವಿದೇಹಮುಕ್ತಿ**— ಈ ದೇಹವಿರುವವರೆಗೆ ಮೇಲೆ ಹೇಳಿದ ನಿತ್ಯಾನಂದಸ್ಥಿತಿಯು ಪ್ರಾಪ್ತವಾಯಿತೆಂದರೆ ಅದಕ್ಕೆ ಜೀವನ್ಮುಕ್ತಿ ಎನ್ನುವರು. ದೇಹಪಾತದನಂತರ ಜೀವನ್ಮುಕ್ತನು ವಿದೇಹಮುಕ್ತಿಯನ್ನು ಪಡೆದು ಪರಮಾತ್ಮಸಾಯುಜ್ಯವನ್ನು ಹೊಂದಬಹುದು. ಇಹದಲ್ಲಿ ಜೀವನ್ಮುಕ್ತನಾಗದಿದ್ದವನು ಪರದಲ್ಲಿ ಸಾಯುಜ್ಯವನ್ನು ಪಡೆಯನು.

ಯಾಕಂದರೆ ಜೀವನ್ಮುಕ್ತನಾಗದಿದ್ದವನಿಗೆ ಕರ್ಮಬಂಧವು ಉಳಿದಂತಾಯಿತು. ಕರ್ಮಬಂಧನವಿದ್ದವನಿಗೆ ಸಾಯುಜ್ಯವು ದೊರೆಯದು. ಆದುದರಿಂದ ಜೀವನ್ಮುಕ್ತಿಯನ್ನು ಪಡೆಯುವದೇ ಪರಮಸಾಧ್ಯವೆನ್ನಬಹುದು. ಮನುಷ್ಯನು ಜೀವನ್ಮುಕ್ತನಾಗುವದು ಸಾಧ್ಯವೆಂದು ಗೀತೆಯಲ್ಲಿ 'ಇಹೈವ ತೈರ್ಜಿತಃ ಸರ್ಗಃ', 'ಅಭಿತೋ ಬ್ರಹ್ಮನಿರ್ವಾಣಂ', 'ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ', 'ಏಷಾ ಬ್ರಾಹ್ಮೀ ಸ್ಥಿತಿಃ' ಮುಂತಾದ ವರ್ಣನೆಗಳಿರುವವು. ಪರಮಾತ್ಮನ ಸಮಗ್ರ ಮತ್ತು ಅಸಂಶಯ ಜ್ಞಾನವಾಗಿ ಮನಸು ದ್ವಂದ್ವಗಳಿಂದ ಚಲಿಸದಂತೆ ಸ್ಥಿರವಾಗಿ ಅಂತಃಕರಣವು ಪರಮಾತ್ಮನಲ್ಲಿ ನೆಲೆಗೊಂಡಿತೆಂದರೆ ಮನುಷ್ಯನ ಚಿತ್ತವು ಸುಖವನ್ನು ಪಡೆಯಲು ಸಮರ್ಥವಾಗುವದು. ಅವನಿಗೆ ಆಮೇಲೆ ಕರ್ಮಲೇಪವಾಗದು. ದುಃಖಗಳು ಮುಟ್ಟವು. ಅವನು ನಿತ್ಯಮುಕ್ತನು, ನಿತ್ಯಾನಂದಿಯು. ಸದೈವ ಆ ಚಿತ್ಸ್ಥಿತಿಯು ನಿಶ್ಚಲವಾಯಿತೆಂದರೆ ಅದೇ ಜೀವನ್ಮುಕ್ತಿಯು.

**ಮುಮುಕ್ಷುತ್ವವು**— ಇಂದ್ರಿಯ ಸುಖಗಳೇ ನಿಜವಾದ ಸುಖಗಳು, ಆತ್ಮಸುಖವೆಂದರೆ ಮೃಗಜಲವು, ಭ್ರಮವು, ಆತ್ಮವಂಚನೆಯು ಎಂದು ಅನ್ನುವವರು ಕೆಲವರಿರುವರು. ಆದರೆ ಅವರಿಗೆ ಅನುಭವವನ್ನು ಪಡೆದು ನೋಡಿರೆಂದು ಹೇಳುವದೊಂದೇ ಮಾರ್ಗವು. ಸಕ್ಕರೆ ತಿನ್ನದೆ ಅದು ಕಹಿ ಇದೆ ಎಂದು ಅನ್ನುವವನಿಗೆ, ಅದನ್ನು ತಿಂದು ನೋಡು, ಎಂದು ಹೇಳುವದೇ ಉಪಾಯವು. ಇಷ್ಟು ಮೀರಿ ಅವನು ಅದರ ರುಚಿಯನ್ನು ನೋಡಲು ಸಹ ಒಪ್ಪದಿದ್ದರೆ ಅವನ ಹಾದೀ ಬಿಟ್ಟು ಬಿಡಬೇಕಾಗುವದು. ಸಾಮಾನ್ಯ ಜನರು ತಮ್ಮ ಆಯುಷ್ಯವನ್ನು ಹೇಗೋ ಏನೋ ಕಳೆದು ಬಿಡುತ್ತಾರೆ. ತಮ್ಮ ಜೀವನದ ಜೀವಾಳವೇನು, ಈ ತಮ್ಮ ಜನ್ಮದ ಗುಟ್ಟೇನು ಗುರಿಯೇನು ಎಂಬುದನ್ನು ಕ್ಷಣಹೊತ್ತಾದರೂ ವಿಚಾರಿಸದೆ, ಇಂದ್ರಿಯಗಳ ಹಸಿವೆ ನೀರಡಿಕೆಗಳನ್ನು ಆರಿಸುವದರಲ್ಲಿಯೆ ಆಯುಷ್ಯವನ್ನು ಹಾಳು ಮಾಡುತ್ತಾರೆ. ಅಹಂಕಾರದ ಪೂರ್ತಿ, ಕಾಮವಾಸನೆಗಳ ತೃಪ್ತಿ, ಸ್ವಾರ್ಥಸುಖದ ಪ್ರಾಪ್ತಿ, ಸ್ವಾಧಿಕಾರ ಕೀರ್ತಿಗಳ ಪ್ರಶಸ್ತಿ ಇವೇ ಜೀವನೋದ್ದೇಶಗಳಾಗಿರುವದರಿಂದ ಚಂಚಲ ಮನಸಿಗೆ ಬೇಕಾಗುವ ಅಸ್ಥಿರಾನಂದವನ್ನು ಸಾಧಿಸುವದರಲ್ಲಿಯೆ ಜೀವನಸರ್ವಸ್ವವು ನಷ್ಟವಾಗುತ್ತದೆ. ಆತ್ಮಾನಂದದ

ಷವಿಯು ಹತ್ತುವದರೊಳಗಾಗಿಯೆ ಯಮನ ದೂತರು ನಮ್ಮನ್ನು ಸೆಳೆದೊಯ್ಯಲು ಸಿದ್ಧರಾಗುತ್ತಾರೆ. ಈ ಕ್ಷುದ್ರ ಜೀವನೋದ್ದೇಶಗಳನ್ನು ಬೀಸಾಟ ಆತ್ಮಾನಂದದ ಅಕ್ಷಯ ಅಮೃತವನ್ನು ಸೇವಿಸಬೇಕೆಂದು ಉಪರತಿ ಹುಟ್ಟಿದ ದಿವಸವೆ ನಾವು ನಿಜವಾದ ಮುಮುಕ್ಷುಗಳಾಗುವೆವು. ಆ ಆತ್ಮಸುಖವು ಮರಣಪಶ್ಚಾತ್ ಯಾವದಾದರೊಂದು ಲೋಕದಲ್ಲಿ ದೊರೆಯುತಕ್ಕುದಿದೆ ಎಂದು ನಾವು ತಿಳಿಯಕೂಡದು. ಆ ಆನಂದವು ಇದೇ ಜನ್ಮದಲ್ಲಿ ಇದೇ ಮಾನವೀ ದೇಹದಲ್ಲಿ ಇದೇ ಕ್ಷಣಕ್ಕೆ ನಮಗೆ ದೊರೆಯಬಹುದೆಂದು ನಮ್ಮ ಗ್ರಂಥಗಳು ನಮಗೆ ಸಾರಿ ಸಾರಿ ಹೇಳುತ್ತವೆ. ಪುನರ್ಜನ್ಮದಲ್ಲಿ ವಿಶ್ವಾಸವಿಲ್ಲದವರು ಸಹ ಈ ಮಾರ್ಗಕ್ಕೆ ಬಂದು ನೋಡಬೇಕು, ಎಂದು ಅಧ್ಯಾತ್ಮವಾದಿಗಳು ಅವರನ್ನು ಆಹ್ವಾನಿಸುವರು. ಯಾವದೇ ಕಾರಣದ ಮೂಲಕ ಆತ್ಮಾನಂದದ ನೀರಡಿಕೆ ಉಂಟಾಯಿತೆಂದರೆ ಅಲ್ಲಿ ಮುಮುಕ್ಷುತ್ವವು ಮೊಳೆತಿತೆನ್ನಬೇಕು. ಆಮೇಲೆ ಆ ಪರಮಸ್ಥಿತಿಯನ್ನು ಹೇಗೆ ಪಡೆಯಬೇಕೆಂಬ ವಿಚಾರವು ಸಹಜವೇ ತಲೆದೋರುವದು.

**ಯೋಗಪಂಚಕವು**— ಪರಮ ಪದವನ್ನು ಪಡೆಯಲು ಅನೇಕ ಮಾರ್ಗಗಳಿರುವವೆಂದು ಬೇರೆ ಬೇರೆ ಗ್ರಂಥಗಳು, ಬೇರೆ ಬೇರೆ ಧರ್ಮಗಳು ಬೇರೆ ಬೇರೆ ಮಾರ್ಗಗಳನ್ನು ಹೇಳಿರುವವು. ಆದರೆ ಈ ಸನಾತನವಾದ ವಿಶಾಲ ಭಾರತವರ್ಷದಲ್ಲಿ ಆ ಎಲ್ಲ ಮಾರ್ಗಗಳು ಒಮ್ಮಿಲ್ಲೊಮ್ಮೆ ಪ್ರಚಲಿತವಿದ್ದವೆಂದೂ ಅವುಗಳಲ್ಲಿ ಎಷ್ಟೋ ಈಗ್ಯೂ ಪ್ರಚಲಿತವಿರುವವೆಂದೂ ಕಂಡುಬರುವದು. ಆರ್ಯರು ತಮ್ಮ ತತ್ವಜ್ಞಾನವನ್ನಷ್ಟೇ ಪೂರ್ತಿಗೊಳಿಸಿ ತೃಪ್ತರಾಗಲಿಲ್ಲ. ಆದರೆ ತತ್ವಜ್ಞಾನದ ಒಳಗಣ್ಣಿನಿಂದ ಕಂಡ ಕಣಸನ್ನು ಸತತವೂ ಕಣ್ಣಮುಂದೆ ನಿಲ್ಲುವಂತೆ ಹೇಗೆ ಮಾಡಬೇಕು ಮತ್ತು ಅದರಂತೆ ತಮ್ಮ ಜೀವನಕ್ರಮವನ್ನು ಹೇಗೆ ನಡೆಸಬೇಕು ಎಂಬದನ್ನು ಪರಿಶೋಧಿಸಲಿಕ್ಕೆ ಅವರು ಅತ್ಯಂತ ಪರಿಶ್ರಮವನ್ನು ಮಾಡಿರುವರು. ಮನುಷ್ಯನಲ್ಲಿ ಪ್ರಾಣಶಕ್ತಿ, ಕ್ರಿಯಾಶಕ್ತಿ, ಭಾವನಾಶಕ್ತಿ, ಮನಃಶಕ್ತಿ ಹಾಗೂ ಜ್ಞಾನಶಕ್ತಿ ಹೀಗೆ ಐದು ಶಕ್ತಿಗಳಿರುವವೆಂದು ನಾವು ಹೇಳಬಹುದು. ಇವುಗಳ ಗುಣಕಾರ್ಯಗಳನ್ನು ಪರೀಕ್ಷಿಸಿ, ಇವುಗಳಿಗನುಸರಿಸಿ, ಇವುಗಳ ಆಧಾರದಿಂದ ನಮ್ಮ ಪೂರ್ವಜರು ಐದು ಯೋಗಮಾರ್ಗಗಳನ್ನು

ಪ್ರಚಾರದಲ್ಲಿ ತಂದರೆನ್ನಲಿಕ್ಕೆ ಚಿಂತೆಯಿಲ್ಲ. ಮುಮುಕ್ಷುವಾದ ಪ್ರತಿಯೊಂದು ಜೀವನು, ತಾನು ಅಪೂರ್ಣನಿದ್ದು ಪೂರ್ಣನಾಗಬೇಕು ಎಂದು ಹವಣಿಸುವ ಪ್ರತಿಯೊಬ್ಬ ಮನುಷ್ಯನು, ಪರಮಾತ್ಮ ಸಾಯುಜ್ಯವನ್ನು ಹೊಂದಲಿಕ್ಕೆ ಹಗಲಿರುಳು ಹೆಣಗುತ್ತಿರುತ್ತಾನೆ. ತಾನು ಪೂರ್ಣಾನಂದವನ್ನು ಪಡೆಯ ಬೇಕು ಎಂದು ಯಾವಾಗಲೂ ಹವಣಿಸುತ್ತಾನೆ. ಹೀಗೆ ಹವಣಿಸುವಾಗ ತನ್ನಲ್ಲಿ ಮೇಲ್ಕಾಣಿಸಿದ ಯಾವ ಶಕ್ತಿಯ ವಿಕಾಸವು ವಿಶೇಷವಾಗಿರು ತ್ತದೋ ಆ ಶಕ್ತಿಯದ್ವಾರಾ ಅದರ ಸಹಾಯದಿಂದ ಮೋಕ್ಷವನ್ನು ಪಡೆಯ ಲಿಚ್ಛಿಸುತ್ತಾನೆ. ಈ ಸಹಜ ಮತ್ತು ಸ್ವಾಭಾವಿಕ ಸಂಗತಿಗನುಸರಿಸಿಯೇ ಯೋಗಪಂಚಕದ ಪ್ರವೃತ್ತಿಯಾಗಿರುವದು. ಭರತಖಂಡದಲ್ಲಿ ಈ ಐದೂ ಮಾರ್ಗಗಳೂ ಸಮಸಮಾನವಾಗಿ ಪರಿಪೂರ್ಣದಶೆಯನ್ನು ಹೊಂದಿವೆ ಯೆಂದರೂ ಸಲ್ಲುವದು. ಸದ್ಯಕ್ಕೆ ಪ್ರತಿಯೊಂದು ಮಾರ್ಗಕ್ಕೆ ಅದರ ಪ್ರವ ರ್ತಕ ಋಷಿಯು, ಅದರದೊಂದು ಶಾಸ್ತ್ರವು, ಅದರ ಪೋಷಕರು, ಅದರ ಅನುಯಾಯಿಗಳು ಇರುವದರಿಂದ ಎಲ್ಲವುಗಳಿಗೂ ಸುವ್ಯವಸ್ಥಿತಸ್ವರೂ ಪವು ಬಂದಿರುವದು. ಆದರಿಂದ ಆಯಾ ಮಾರ್ಗಗಳದೊಂದು ಸಾಂಪ್ರ ದಾಯವೇ ಸಿದ್ಧವಾಗಿರುವದು. ದುರ್ದೈವದಿಂದ ಸಾಂಪ್ರದಾಯದೋಷ ಗಳಾದರೂ ಅವುಗಳಲ್ಲಿ ಸೇರಿವೆ. ತಮ್ಮ ಸಾಂಪ್ರದಾಯದ ಅಭಿಮಾನ, ಅನ್ಯ ಸಾಂಪ್ರದಾಯವನ್ನು ಹೀಯಾಳಿಸುವ ಬುದ್ಧಿ, ತಮ್ಮದೇ ಶ್ರೇಷ್ಠ ವೆಂಬ ಭಾವನೆ, ತತ್ವಕ್ಕಿಂತ ಆಚಾರದ ಕಡೆಗೆ ಹೆಚ್ಚು ಲಕ್ಷ ಎಂಬ ದೋಷ ಗಳ ಮೂಲಕ ವ್ಯಾಪಕದೃಷ್ಟಿಯು ಅಳಿದಿರುವದು. ಪ್ರತಿಸಾಂಪ್ರದಾಯ ದವರು ಗೀತೆಯು ತಮ್ಮ ಸಾಂಪ್ರದಾಯದ್ದು ಎಂದು ಅದನ್ನು ಜಗ್ಗಾಡು ತ್ತಿರುವ ಪ್ರವೃತ್ತಿಯೂ ಕಂಡುಬರುವದು. ಈ ವಿಷಯವನ್ನು ಮುಂದಿನ ಪ್ರಕರಣದಲ್ಲಿ ನಾವು ಚರ್ಚಿಸಬಹುದು. ಇಲ್ಲಿ ಹೇಳಬೇಕಾಗಿರುವದೇ ನಂದರೆ, ಶ್ರೀಕೃಷ್ಣನು ಗೀತೋಪದೇಶವನ್ನು ಮಾಡುವ ಕಾಲದಷ್ಟೊತ್ತಿಗೆ ಈ ಎಲ್ಲ ಯೋಗಮಾರ್ಗಗಳು ಭರತಖಂಡದಲ್ಲಿ ಪ್ರಚಲಿತವಾಗಿದ್ದವು. ಇವು ಬೀಜರೂಪದಿಂದ ಉಪನಿಷದಾದಿ ಗ್ರಂಥಗಳಲ್ಲಿ ಉಕ್ತವಾಗಿವೆ. ಆ ಬೀಜಗಳೇ ಮುಂದೆ ಒಡೆದು ವೃಕ್ಷಗಳಾಗಿ ಸ್ವತಂತ್ರಮಾರ್ಗಗಳಾದವು. ಆದರೆ ಗೀತೆಯು ಯಾವ ಒಂದೇ ಯೋಗಮಾರ್ಗವನ್ನವಲಂಬಿಸದೆ ಅವೆಲ್ಲ

ವುಗಳನ್ನು ಒಂದು ಬಗೆಯಿಂದ ದಾಟಿ ಅವೆಲ್ಲವುಗಳಿಗೆ ಸಾಮಾನ್ಯವಾದ ಆತ್ಮಸಾಕ್ಷಾತ್ಕಾರ ಅಥವಾ ಪರಮಾತ್ಮಯೋಗವೆಂಬುದನ್ನೇ ಧ್ಯೇಯವನ್ನಾಗಿಟ್ಟುಕೊಂಡು ಈ ಎಲ್ಲ ಮಾರ್ಗಗಳ ಸುಂದರ ಸಮನ್ವಯವನ್ನು ಮಾಡಿ ಸಮಾಜಕ್ಕೆ ಸಂಪೂರ್ಣಯೋಗವೆಂಬ ಸುಲಭ ಸಮಂಜಸ ಸಾತ್ವಿಕ ಮಾರ್ಗದ ಸದುಪದೇಶವನ್ನು ಮಾಡಿತು.

**ಯೋಗಗಳ ಲಕ್ಷಣಗಳು**— ಮೇಲೆ ಹೇಳಿದಂತೆ ಮನುಷ್ಯನ ಐದು ಶಕ್ತಿಗಳಿಗನುಗುಣವಾಗಿ ಹಠ, ಕರ್ಮ, ಭಕ್ತಿ, ರಾಜ ಮತ್ತು ಜ್ಞಾನ ಎಂಬ ಐದು ಯೋಗಮಾರ್ಗಗಳು ನಮ್ಮಲ್ಲಿ ಶುದ್ಧ ಶಾಸ್ತ್ರೀಯ ತಳಹದಿಯ ಮೇಲೆ ರಚಿಸಲ್ಪಟ್ಟಿವೆ. ಅವೆಲ್ಲವುಗಳ ಧ್ಯೇಯವು ಒಂದೇ. ಪರಮ ಆನಂದ ಪದವಿಯನ್ನು, ಬ್ರಹ್ಮಸಾಯುಜ್ಯವನ್ನು ಪಡೆಯುವದೆ ಆ ಧ್ಯೇಯವು. ಪ್ರತಿಯೊಂದು ಯೋಗದಲ್ಲಿ ಸಾಧನ ಆಚಾರಾದಿಗಳು ಬೇರೆ ಬೇರೆ ಕಂಡರೂ ಕೆಲಮಾತುಗಳು ಅವೆಲ್ಲವುಗಳಿಗೂ ಸಾಮಾನ್ಯವಿರುವವು. ಪ್ರತಿ ಯೋಗದಲ್ಲಿ ಆಯಾ ಶಕ್ತಿಯ ಸಂಯಮನ, ಸಂಗ್ರಹ, ನಿಯಮನ, ಏಕಾಗ್ರೀಕರಣ, ಮತ್ತು ಸ್ಥಿರೀಕರಣ ಕೊನೆಗೆ ಸಮರ್ಪಣ ಈ ಪ್ರಕ್ರಿಯೆಯು ಯಾವುದೊಂದು ರೂಪದಲ್ಲಿ ಇದ್ದೇ ಇರುವದು. ಈ ಪ್ರಕ್ರಿಯೆಗೆಲ್ಲ ಕೂಡಿ ಸಾಧನವೆಂಬ ಸಮುಚ್ಚಯಾತ್ಮಕವಾದ ಹೆಸರು ಇರುವದು. ಈ ಎಲ್ಲ ಯೋಗಗಳ ಪ್ರಕ್ರಿಯೆಯನ್ನು ವಿವರವಾಗಿ ಇಲ್ಲಿ ವರ್ಣಿಸುವದು ಸಾಧ್ಯವಿಲ್ಲ. ಆದುದರಿಂದ ಸಂಕ್ಷೇಪವಾಗಿ ಹೇಳಿ ಇಲ್ಲಿ ಸಮಾಧಾನಪಡಬೇಕಾಗಿದೆ.

**ಹಠಯೋಗ**— ಉಸುರಾಡಿಸುವ ಕ್ರಿಯೆಯನ್ನು ಮೊದಲ್ಗೊಂಡು ಹೊಸ ಸೃಷ್ಟಿಯನ್ನು ನಿರ್ಮಾಣಮಾಡುವ ಕರ್ಮದವರೆಗೆ ಆಗುವ ಶರೀರದ ಸಕಲ ಚಲನವಲನಗಳಿಗೂ ಕಾರಣವಾದ ಶಕ್ತಿಯೆ ಪ್ರಾಣಶಕ್ತಿಯು. ಆ ಶಕ್ತಿಯ ಸಂಯಮನ, ಸಂಗ್ರಹ, ನಿಯಮನ, ಏಕಾಗ್ರೀಕರಣ, ಸ್ಥಿರೀಕರಣ ಮತ್ತು ಪರವಸ್ತುವಿನಲ್ಲಿ ಸಮರ್ಪಣಮಾಡಿ ತದ್ವಾರಾ ಪರಮಾತ್ಮನ ಸಾಕ್ಷಾತ್ಕಾರಮಾಡಿಕೊಳ್ಳಲಿಕ್ಕೆ ಯತ್ನಿಸುವ ಮಾರ್ಗಕ್ಕೆಯೆ ಹಠಯೋಗವೆನ್ನುವರು. ಮನುಷ್ಯನ ನಾಭಿಯ ಕೆಳಗೆ ಮೂಲಾಧಾರ ಚಕ್ರದಲ್ಲಿ ಸರ್ಪದಂತೆ ಸುತ್ತಿಕೊಂಡು ಕುಳಿತಿರುವ ಕುಂಡಲಿನಿ ಶಕ್ತಿಯನ್ನು ಆಸನ ಪ್ರಾಣಾಯಾಮಾದಿಗಳಿಂದ ಬಡಿದೆಬ್ಬಿಸಿ ಅದನ್ನು ಷಟ್ಚಕ್ರಗಳೊಳಗಿಂದ ಹಾಯಿಸಿ

ಶಿರಸ್ಸಿನಲ್ಲಿರುವ ಸಹಸ್ರದಲ ಕಮಲಕ್ಕೆ ಅಡರಿಸಿ ಪ್ರಾಣಸಮಾಧಿಯನ್ನು ಸಾಧಿಸಿ ಸಿದ್ಧಿಯನ್ನು ಪಡೆಯಬೇಕೆಂಬುದೇ ಹಠಯೋಗದ ಹಟವು. ಈ ಮಾರ್ಗದಲ್ಲಿ ಪರಮಪದವಿಯೇ ಧ್ಯೇಯವು, ಪ್ರಾಣಶಕ್ತಿಯೇ ಅವಲಂಬನವು, ಆಸನಪ್ರಾಣಾಯಾಮಾದಿಗಳೇ ಆಚಾರಗಳು.

**ಕರ್ಮಯೋಗ—** ಕರ್ಮಶಕ್ತಿ ಅಥವಾ ಕ್ರಿಯಾಶಕ್ತಿಯೆಂದರೆ ಕೇವಲ ಚಲನವಲನಶಕ್ತಿಯೊಂದೇ ಅಲ್ಲದೆ ಸಂಕಲ್ಪಶಕ್ತಿಯೂ ಅದರಲ್ಲಿ ಒಳಗೊಂಡಿರುವದು. ಆದುದರಿಂದಲೆ ಸಂಕಲ್ಪಸನ್ಯಾಸದ ಹೊರ್ತು ಕರ್ಮಯೋಗವು ಸಾಧಿಸದೆಂದು ಶ್ರೀಕೃಷ್ಣನು ಹೇಳಿರುವನು. ಕ್ರಿಯಾಶಕ್ತಿಯ ಸಂಯಮನ ಸಮರ್ಪಣಾದಿಗಳಿಂದ ಪರಾತ್ಪರ ಧ್ಯೇಯವನ್ನು ಸಾಧಿಸುವ ಪ್ರಯತ್ನವೆ ಕರ್ಮಯೋಗವೆನಿಸುವದು. ನಾನು ಕರ್ತನಲ್ಲವೆಂದು ಸಂಪೂರ್ಣ ನಿರಹಂಕಾರಿಯಾಗಿ ನಿಷ್ಕಾಮತೆಯಿಂದ ಪರಮಾತ್ಮಪ್ರೇರಿತ ಕರ್ಮಗಳಲ್ಲಿ ತನ್ನ ಎಲ್ಲ ಕ್ರಿಯಾಶಕ್ತಿಯನ್ನು ಲೀನಪಡಿಸಿ ಬ್ರಹ್ಮಕರ್ಮಸಮಾಧಿಯನ್ನು ಸಾಧಿಸುವದೇ ಕರ್ಮಯೋಗದ ರಹಸ್ಯವು. ಇಲ್ಲಿಯಾದರೂ ಪರಮಪದದ ಪ್ರಾಪ್ತಿಯೆ ಧ್ಯೇಯವು, ಕ್ರಿಯಾಶಕ್ತಿಯು ಅವಲಂಬನವು, ಪರಮಾತ್ಮಾರ್ಪಿತ ನಿಷ್ಕಾಮ ಸ್ವಕರ್ಮವೆ ಆಚಾರವು.

**ಭಕ್ತಿಯೋಗ—** ಯಾವ ಶಕ್ತಿಯ ಮೂಲಕ ನಮ್ಮ ಅಂತಃಕರಣದಲ್ಲಿ ರಾಗದ್ವೇಷಾದಿ ಅನೇಕ ಭಾವನೆಗಳು ಹುಟ್ಟುತ್ತವೋ ಅದೇ ಭಾವನಾ ಶಕ್ತಿಯು. ಅದರ ಸಂಯಮನ ಸಮರ್ಪಣಾದಿಗಳದ್ವಾರಾ ಪರಮಾತ್ಮನನ್ನು ಪಡೆಯುವದೆ ಭಕ್ತಿಯೋಗದ ಧ್ಯೇಯವು. ಪರಾನುರಕ್ತಿಯೆ ಭಕ್ತಿ ಎನಿಸುವದು. ನಾವು ನಮ್ಮ ಎಲ್ಲ ಭಾವನೆಗಳನ್ನು ಕರಗಿಸಿ ಪರಮಾತ್ಮನಲ್ಲಿ ಅತ್ಯಂತ ಪ್ರೇಮವನ್ನಿಟ್ಟು ಭಾವಸಮಾಧಿಯಿಂದ ಸಿದ್ಧಿಯನ್ನು ಪಡೆಯಲಿಚ್ಛಿಸುವದೆ ಭಕ್ತಿಯೋಗವು. ಪರಮ ಪದವೇ ಇಲ್ಲಿಯಾದರೂ ಸಾಧ್ಯವು, ಆದರೆ ಭಕ್ತಿಯು, ಪರಮಾತ್ಮಪ್ರೇಮವು ಅವಲಂಬನವು, ಸತತ ಪ್ರೇಮದಿಂದ, ನಿರಪೇಕ್ಷ ಅನನ್ಯ ಅನುರಾಗದಿಂದ ಸರ್ವಕರ್ಮಗಳನ್ನು ಪ್ರೇಮದಲ್ಲಿ ಪರಿವರ್ತಿಸಿ ಅವುಗಳಿಂದ ಪರಮಾತ್ಮನನ್ನು ಅರ್ಚಿಸುವದೆ ಆಚಾರವು.

**ರಾಜಯೋಗ—** ಯಾವ ಶಕ್ತಿಯ ಮೂಲಕ ಮನಸಿನಲ್ಲಿ ಸಂಕಲ್ಪ ವಿಕಲ್ಪಗಳೆಂಬ ವಿಕಾರಗಳುಂಟಾಗುವವೋ ಅದು ಮನಃಶಕ್ತಿಯೆನಿಸು

ವದು. ಸಂಯುಮನ ಸಮರ್ಪಣಾದಿಗಳದ್ವಾರಾ ಚಿತ್ತವೃತ್ತಿಗಳನ್ನು ನಿರೋಧಿಸಿ ಶುದ್ಧಚಿತ್ತದಲ್ಲಿ ಈಶ್ವರಪ್ರಣಿಧಾನದಿಂದ ಸತ್ಯವಸ್ತುವಿನ ಪ್ರತಿಬಿಂಬವನ್ನು ಕಾಣಲೆತ್ನಿಸುವದೆ ರಾಜಯೋಗವೆನಿಸುವದು. ಚಿತ್ತವೃತ್ತಿನಿರೋಧಪೂರ್ವಕ ಸಮಾವಸ್ಥೆಯನ್ನುಂಟುಮಾಡಿ ಮನಸ್ಸನ್ನು ಧ್ಯಾನಸಮಾಧಿಯಲ್ಲಿ ಸ್ಥಿರೀಕರಿಸಿ ಪರಮಾತ್ಮಚಿಂತನ ಮಾಡುತ್ತಿರುವದೆ ರಾಜಯೋಗದ ತತ್ವವು. ಇದರಲ್ಲಿಯೂ ಪರಮಸ್ಥಾನವನ್ನು ಪಡೆಯುವದೆ ಧ್ಯೇಯವು, ಚಿತ್ತವೆ ಅವಲಂಬನವು, ಯುಕ್ತಾಹಾರವಿಹಾರಗಳೂ ಪ್ರಾಣಾಯಾಮವೂ ಏಕಾಗ್ರಚಿತ್ತ ಮಾಡುವದೂ ಆಚಾರಗಳು.

**ಜ್ಞಾನಯೋಗ**—ಯಥಾರ್ಥ ಸತ್ಯವು ಯಾವ ಶಕ್ತಿಯಿಂದ ತಿಳಿಯುವದೋ ಅದೇ ಜ್ಞಾನಶಕ್ತಿಯು. ಸಂಯುಮನ ಸಮರ್ಪಣಾದಿಗಳಿಂದ ಈ ಜ್ಞಾನಶಕ್ತಿಯನ್ನು ಶುದ್ಧೀಕರಿಸಿ ಅನ್ವಯ ವ್ಯತಿರೇಕ ತರ್ಕ ಅನುಮಾನಗಳಿಗೆ ತಿಳಿಯದ ತತ್ವಜ್ಞಾನವನ್ನು ಸ್ಫೂರ್ತಿಯಿಂದ ತಿಳಿದು ಆ ಜ್ಞಾನದಲ್ಲಿ ಜ್ಞಾನಸಮಾಧಿಯಿಂದ ಸ್ಥಿರವಾಗಲೆತ್ನಿಸುವದೆ ಜ್ಞಾನಯೋಗವೆನಿಸುವದು. ಇಂದ್ರಿಯಜನ್ಯ ಜ್ಞಾನಕ್ಕೆ ಮರುಳಾಗದೆ ಅದರಾಚೆಗಿನ ನಮ್ಮ ಶುದ್ಧಬುದ್ಧಿಯನ್ನು ಜಾಗೃತಮಾಡಿ ಯಥಾರ್ಥವನ್ನು ತಿಳಿದುಕೊಳ್ಳುವದೆ ಜ್ಞಾನಯೋಗಿಯ ಕರ್ತವ್ಯವು. ಪರಮಾತ್ಮಸಾಯುಜ್ಯವೇ ಜ್ಞಾನಯೋಗಿಯ ಧ್ಯೇಯವು. ಬುದ್ಧಿಯೆ ಅವಲಂಬನವು. ಚಿತ್ತಶುದ್ಧಿ, ವಿವೇಕಪೂರ್ಣ ವಿಚಾರ, ಸತತಶ್ರವಣ ಚಿಂತನ ನಿಧಿಧ್ಯಾಸ ಇವೇ ಆಚಾರಗಳು.

ಈ ರೀತಿಯಾಗಿ ಇವು ಐದು ಯೋಗಮಾರ್ಗಗಳಿರುವವು.

**ಯೋಗಗಳ ಪರಸ್ಪರ ಸಂಬಂಧವು**— ಮನುಷ್ಯನಲ್ಲಿರುವ ಪಂಚಶಕ್ತಿಗಳಿಗನುಗುಣವಾಗಿ ಪಂಚಯೋಗಮಾರ್ಗಗಳು ನಮ್ಮಲ್ಲಿ ಪ್ರಚಲಿತವಿರುವವೆಂದು ಹೇಳಿದ್ದಾಯಿತು. ಆದರೆ ಈ ಯೋಗಮಾರ್ಗಗಳು ಪರಸ್ಪರ ಅತ್ಯಂತ ಭಿನ್ನವಿರುವವೆಂದು ಅಥವಾ ಒಂದಕ್ಕೊಂದು ವಿರೋಧಿಯಾಗಿರುವವೆಂದು ಮಾತ್ರ ಯಾರೂ ಕಲ್ಪಿಸಕೂಡದು. ಇದರೊಳಗಿನದು ಯಾವುದೊಂದು ಶ್ರೇಷ್ಠ ಕನಿಷ್ಠವೆಂದೂ ತಿಳಿಯಕೂಡದು. ನಾವು ಮಾನವೀ ಶಕ್ತಿಗಳನ್ನು ಪ್ರಥಃಕರಿಸುವಾಗ ಇವೆಲ್ಲ ಬೇರೆ ಬೇರೆ ಕಂಡರೂ ಅವು ಒಬ್ಬ ಮನುಷ್ಯನಲ್ಲಿಯೆ ಇರುವದರಿಂದ ಮತ್ತು ಆತ್ಮವೆ ಎಲ್ಲವುಗಳಿಗೂ ಅಧಿಷ್ಠಾನ

ವಿರುವದರಿಂದ ಅವು ಪರಸ್ಪರ ವಿರೋಧಿಯಾಗಿರುವದಂತೂ ಅಶಕ್ಯವು. ಅವುಗಳ ಏಕವಾಕ್ಯತೆಯು ಆತ್ಮನಲ್ಲಿ ಆಗಿಯೆ ತೀರುವದು. ಆದುದರಿಂದ ವ್ಯಾಪಕ ಮತ್ತು ಸೂಕ್ಷ್ಮದೃಷ್ಟಿಯಿಂದ ನೋಡುವವನಿಗೆ ಅವು ಒಂದ ಕ್ಕೊಂದು ಪೋಷಕವಿರುವವೆಂದು ಕಂಡುಬರುವವು. ಅತ್ಯಂತ ವಿರುದ್ಧ ಅಥವಾ ಪರಸ್ಪರ ಘಾತಕ ಶಕ್ತಿಗಳು ಒಂದೇ ವ್ಯಕ್ತಿಯಲ್ಲಿ ಇರುವದು ಅಸಂಭವವು. ಹೀಗೆ ಬೇರೆ ಬೇರೆ ಶಕ್ತಿಗಳು ಪ್ರತಿಯೊಬ್ಬನಲ್ಲಿದ್ದರೂ ಅವು ಗಳಲ್ಲಿ ಯಾವುದಾದರೊಂದು ಶಕ್ತಿಯ ಪ್ರಾಬಲ್ಯವು ಹೆಚ್ಚು ಕಂಡುಬರು ವದು. ಸತ್ವ ರಜ ತಮಗಳು ಎಲ್ಲರಲ್ಲಿಯೂ ಇದ್ದರೂ ಅವುಗಳ ಪ್ರಮಾ ಣವು ಹೆಚು ಕಡಿಮೆಯಿರುವಂತೆ ಈ ಶಕ್ತಿಗಳಾದರೂ ಹೆಚ್ಚುಕಡಿಮೆ ಪ್ರಮಾಣದಲ್ಲಿರುವವು. ಯಾವ ಶಕ್ತಿಯ ಪ್ರಾಬಲ್ಯವು ಯಾವನಲ್ಲಿ ಹೆಚ್ಚೋ ತದನುರೋಧದಿಂದ ತನ್ನ ಸ್ವಭಾವ, ತನ್ನ ಬಲವು, ಶಕ್ಯತೆ ಇವುಗಳನ್ನು ನೋಡಿ ಆಯಾ ಶಕ್ತಿಯದ್ವಾರಾ ಸಾಧಕರು ಯೋಗವನ್ನು ಆರಂಭಿಸುವ ದುಂಟು. ಹಾಗೆ ಮಾಡಿದಾಕ್ಷಣಕ್ಕೆ ಎರಡನೆಯ ಶಕ್ತಿಗಳು ಲುಪ್ತವಾದಂತೆ ಕಂಡರೂ ನಷ್ಟವಾಗುವದಿಲ್ಲ. ಈ ದೃಷ್ಟಿಯಿಂದ ನೋಡಿದರೆ ಹಠಯೋ ಗಿಯು ಕೇವಲ ಹಠಯೋಗಿಯು ಇರಲಾರನು; ಅವನು ತನ್ನ ಸಂಕಲ್ಪ, ಬುದ್ಧಿ ಮುಂತಾದವುಗಳನ್ನು ತಕ್ಕಮಟ್ಟಿಗೆ ಹಠಯೋಗದ ಸಿದ್ಧ್ಯರ್ಥವಾಗಿ ಉಪಯೋಗಿಸುವನು. ಭಕ್ತಿಯೋಗಿಯು ತನ್ನ ಪ್ರಾಣ ಬುದ್ಧಿ ಮನಸು ಗಳನ್ನು ಭಕ್ತಿಯೋಗದ ಪೂರ್ತಿಗಾಗಿ ಉಪಯೋಗಿಸಿಯೆ ತೀರುವನು. ಹೀಗೆ ಮೇಲೆ ವರ್ಣಿಸಿದ ಯೋಗಗಳು, ಆಯಾ ಶಕ್ತಿಗಳ ಸಂಯಮನಾದಿ ಗಳು ಪ್ರಧಾನವಿದ್ದ ಮಾರ್ಗಗಳೇ ಹೊರ್ತು ಕೇವಲ ಆ ಶಕ್ತಿಗಳಿಂದ ಸಿದ್ಧವಾಗುವ ಮಾರ್ಗಗಳಲ್ಲ. ಇನ್ನೊಂದು ರೀತಿಯಿಂದ ಹೇಳುವದಾದರೆ ಹಠಯೋಗವು ಪ್ರಾಣಶಕ್ತಿಸಂಯಮನಪ್ರಧಾನ ಯೋಗವು, ಕರ್ಮಯೋ ಗವು ಕರ್ಮಶಕ್ತಿಅರ್ಪಣಪ್ರಧಾನ ಯೋಗವು, ಹೀಗೆ ಅನುಕ್ರಮವಾಗಿ ಎಲ್ಲ ಯೋಗಗಳನ್ನು ವರ್ಣಿಸಬಹುದು. ವಸ್ತುಸ್ಥಿತಿಯು ಹೀಗಿರುವದರಿಂದ ಈ ಯೋಗಮಾರ್ಗಗಳಲ್ಲಿ ಯಾವುದೊಂದು ಹೆಚ್ಚಿನದು ಅಥವಾ ಕಡಿಮೆ ಯದು ಅನ್ನುವದು ಯೋಗ್ಯವಲ್ಲ. ಯಾಕಂದರೆ ಆಯಾ ದೇಶಕಾಲ ಮತ್ತು ಸಾಧಕನ ಸ್ವಧರ್ಮದಂತೆ ಬೇರೆ ಬೇರೆಯವರಿಗೆ ಬೇರೆ ಬೇರೆ

ಮಾರ್ಗಗಳು ಯೋಗ್ಯವಾದವುಗಳು. ಎಲ್ಲರೂ ಒಂದೇ ಯೋಗವನ್ನು ಮಾಡಬೇಕೆಂದು ಹಟಹಿಡಿಯುವದು ಅಥವಾ ಒಂದೇ ಯೋಗವು ಎಲ್ಲ ಕಾಲದಲ್ಲಿಯೂ ಶ್ರೇಷ್ಠವೆಂದು ಹೇಳುವದು ಉಚಿತವಲ್ಲ. ಯಾಕಂದರೆ ಇವು ಮಾರ್ಗಗಳು. ಇವೆಲ್ಲವೂ ಒಂದೇ ಧ್ಯೇಯದ ಕಡೆಗೆ ಒಯ್ಯುವವು. ಇವುಗಳಲ್ಲಿ ಶ್ರೇಷ್ಠಕನಿಷ್ಠವೆಂದು ಬಡಿದಾಡುವದು ವ್ಯರ್ಥ. ಇನ್ನು ವಿಶಿಷ್ಟ ಪರಿಸ್ಥಿತಿಯಲ್ಲಿ ವಿಶಿಷ್ಟ ಕಾಲದಲ್ಲಿ ವಿಶಿಷ್ಟ ಜನರಿಗೆ ಇಂತಹದೆ ಶ್ರೆಷ್ಠವೆಂದು ಹೇಳಬಹುದೇ ಹೊರತು ಇದಕ್ಕೂ ಹೆಚ್ಚು ಹೇಳಲಿಕ್ಕಾಗದು. 'ಎಲ್ಲ ಮಾರ್ಗದವರೂ ನನಗೆಯೆ ಬಂದು ಮುಟ್ಟುವರು' ಎಂದು ಶ್ರೀಕೃಷ್ಣನ ವಚನವಿರುವದು.

**ಯೋಗಮಾರ್ಗಗಳೂ ಮಿಕ್ಕ ಧರ್ಮಗಳೂ**— ಈ ಎಲ್ಲ ಮಾರ್ಗಗಳು ಇಷ್ಟು ಸ್ಪಷ್ಟತೆಯಿಂದಲೂ ಶಾಸ್ತ್ರೀಯರೀತಿಯಿಂದಲೂ ಮಿಕ್ಕ ಯಾವ ಧರ್ಮದಲ್ಲಿಯೂ ಹೇಳಲ್ಪಟ್ಟಿಲ್ಲ. ಕ್ರಿಶ್ಚಿನ್, ಇಸ್ಲಾಮೀ, ಬುದ್ಧ, ಜೈನ ಮುಂತಾದ ಧರ್ಮಗಳೆಲ್ಲ ಯಾವುದೊಂದು ಯೋಗವನ್ನು ಮುಖ್ಯವಾಗಿ ಟ್ಟುಕೊಂಡು ನಡೆಯುವವು. ಅವರಲ್ಲಿ ಆಯಾ ಮಾರ್ಗಗಳ ವಿಕಾಸವೂ ಅಷ್ಟೊಂದು ಉತ್ತಮ ರೀತಿಯಿಂದ ಇನ್ನೂ ಆಗಿಲ್ಲ. ಆರ್ಯಧರ್ಮದಲ್ಲಿಯ ವಿಶೇಷತಃ ಗೀತೆಯಲ್ಲಿಯ ಇನ್ನೊಂದು ವಿಶೇಷವೇನಂದರೆ, ಈ ಎಲ್ಲ ಯೋಗಗಳಿಗೂ ತಕ್ಕ ಸ್ಥಾನವನ್ನು ಕೊಡುವಂತೆ ಕೊಟ್ಟು ಅದು ಅವುಗಳ ಸಮನ್ವಯವನ್ನು ಮಾಡಿ ತೋರಿಸಿರುವದು. ಇವೆಲ್ಲ ಮಾರ್ಗಗಳಿಗೆ ಸಾಮಾನ್ಯವಿದ್ದ ಸೂತ್ರವನ್ನು ಕಂಡು ಹಿಡಿದು ಗೀತೆಯು ಸಮನ್ವಯವನ್ನು ಮಾಡಿ ಬಿಟ್ಟಿರುವದು. ಈ ತರದ ಸುಂದರ ಸಮನ್ವಯವು ಇನ್ನೆಲ್ಲಿಯೂ ಕಂಡು ಬರುವದಿಲ್ಲ. ಎಲ್ಲ ಯೋಗಗಳನ್ನು ಸೂಡುಕಟ್ಟಿದಂತೆ ಕಟ್ಟಿ ಆತ್ಮಾರ್ಪಣದಲ್ಲಿ ಅವುಗಳನ್ನು ಸಮನ್ವಯಿಸಿ ಪರಮಾತ್ಮಯೋಗವನ್ನು ಸಾಧಿಸುವ ಶ್ರೇಯಸ್ಸು ಗೀತೆಗೆಯೆ ಇರುವದೆಂದು ಒಳ್ಳೆ ಅಭಿಮಾನದಿಂದ ಹೇಳಬಹುದು.

---

# ೮. ಯೋಗಸಮನ್ವಯವು.

**ಸೂಚನೆ—** ಹೋದ ಪ್ರಕರಣದಲ್ಲಿ ಯೋಗಪಂಚಕವನ್ನೂ ಯೋಗಗಳ ಲಕ್ಷಣಗಳನ್ನೂ ಅವುಗಳ ಪರಸ್ಪರ ಸಂಬಂಧವನ್ನೂ ಹೇಳಿದೆ. ಇನ್ನು ಗೀತೆಯು ಎಲ್ಲ ಆಧ್ಯಾತ್ಮಿಕ ಮಾರ್ಗಗಳ ಸಮನ್ವಯವನ್ನು ಮಾಡುವ ಗ್ರಂಥವೆಂಬುದನ್ನು ಹೇಳಬೇಕಾಗಿದೆ. ಮೊದಲು ಆಧ್ಯಾತ್ಮಿಕ ಮಾರ್ಗದ ಸ್ವಲ್ಪ ದಿಗ್ದರ್ಶನ ಮಾಡಿ ಆಮೇಲೆ ಮುಖ್ಯ ವಿಷಯದ ಕಡೆಗೆ ಹೊರಳುವ.

**ಇವೆಲ್ಲ ಆಧ್ಯಾತ್ಮಿಕ ಮಾರ್ಗಗಳು—** ಯಾವದೇ ಪದಾರ್ಥದ ಮೂಲ ಸ್ವಭಾವವು ಆಧ್ಯಾತ್ಮವೆನಿಸುವದೆಂದು ಗೀತೆಯ (೮, ೧) ವ್ಯಾಖ್ಯೆ ಇರುವದು. ನಮ್ಮಲ್ಲಿ 'ನಾನು' ನಾನೆಂದು ಹೇಳಿಕೊಳ್ಳುವ ವಸ್ತುವಿನ ಮೂಲಸ್ವಭಾವವನ್ನರಿತುಕೊಂಡು ಆ ಮೂಲಸ್ವಭಾವದಲ್ಲಿ ಅದನ್ನು ಸ್ಥಿರೀಕರಿಸಿ ಆ ಜ್ಞಾನದಿಂದೊಡಗೂಡಿ ಜೀವನವನ್ನು ನಡೆಸುವದು ಇದೇ ಆಧ್ಯಾತ್ಮಮಾರ್ಗವು. ಸಾಮಾನ್ಯವಾಗಿ ಹಸಿವೆಯಾದಕೂಡಲೆ ಊಟ ಮಾಡುವದು, ನೋಡಬೇಕೆನಿಸಿದಕೂಡಲೆ ನೋಡುವದು, ಹೀಗೆ ನಾವು ಇಂದ್ರಿಯ ಪ್ರವೃತ್ತಿಗಳ ಬೆನ್ನುಹತ್ತಿರುತ್ತೇವೆ. ಆದುದರಿಂದ ನಾವು ಸುಖದುಃಖಗಳಿಗೆ ಒಳಗಾಗಿರುತ್ತೇವೆ. ಈ ಕಾಮನೆಗಳು ಯಾಕೆ ಉದ್ಭವಿಸುವವು, ನಾವು ಯಾರು, ನಿಜವಾದ ಸ್ವತಂತ್ರ ಸುಖವು ಹೇಗೆ ದೊರೆಯುವದು, ಈ ಅಸ್ಥಿರ ವಸ್ತುಗಳಲ್ಲಿ ಸ್ಥಿರವಾವುದು, ಮುಂತಾದ ವಿಷಯಗಳನ್ನು ವಿಚಾರಿಸಿ ನಿಜವನ್ನು ತಿಳಿದು ಆ ಅರಿವಿಗನುಗುಣವಾಗಿ ವರ್ತಿಸುವದೇ ನಿಜವಾದ ಅಧ್ಯಾತ್ಮಮಾರ್ಗವು. ಆತ್ಮಕ್ಕೆ, ಮೂಲವಸ್ತುವಿಗೆ ಸಂಬಂಧಿಸಿದ್ದು ಆಧ್ಯಾತ್ಮವು. ವಿನಾಶಿಗಳಲ್ಲಿ ಅವಿನಾಶಿಯಾದದ್ದು, ಅನೇಕಗಳಲ್ಲಿ ಏಕವಾಗಿದ್ದುದು, ಸ್ವಯಂಭುವು, ಸ್ವತಂತ್ರವು, ಸಚ್ಚಿದಾನಂದಸ್ವರೂಪವು ಇದ್ದುದು ಆತ್ಮವು. ಆ ಆತ್ಮವನ್ನು ಗುರುತಿಸಿ ಅದರ ಪ್ರಕಾಶದಲ್ಲಿ ಆಚರಿಸುವದೇ ಅಧ್ಯಾತ್ಮ ಮಾರ್ಗವು. ಆತ್ಮನ ಜ್ಞಾನ ಮತ್ತು ತದನುರೋಧದಿಂದ ಮಾಡಿದ ಕ್ರಿಯೆ ಇವೆರಡೂ ಕೂಡಿ ಅಧ್ಯಾತ್ಮಮಾರ್ಗ ಅಥವಾ ಅಧ್ಯಾತ್ಮಶಾಸ್ತ್ರವೆನಿಸುವದು. ಯೋಗಪಂಚಕಗಳೆಂದು ಹೇಳಿದ ಐದೂ ಮಾರ್ಗಗಳು ಅಧ್ಯಾತ್ಮ

ಮಾರ್ಗಗಳು. ಯಾಕಂದರೆ ಆತ್ಮನನ್ನರಿತು ಪರಮಾನಂದವನ್ನು ಹೊಂದು ವದೆ ಅವುಗಳ ಧ್ಯೇಯವಿದ್ದು ಆ ಜ್ಞಾನಜ್ಯೋತಿಯ ಬೆಳಕಿನಿಂದ ಯಾವ ಜ್ಜೀವ ನಡೆಯುವದೆ ಎಲ್ಲ ಯೋಗಿಗಳ ಕ್ರಮವಿರುವದು.

**ನೀತಿ ಅನೀತಿ, ಪಾಪಪುಣ್ಯ**— ಆತ್ಮಜ್ಞಾನದ ಬೆಳಕಿನಿಂದ ನಡೆಯ ಬೇಕೆಂದು ಮೇಲೆ ಹೇಳಿದ್ದರೂ ಆತ್ಮಜ್ಞಾನದ ಒರೆಗಲ್ಲು ಇಲ್ಲದ ಹೊರ್ತು ಒಬ್ಬ ಮನುಷ್ಯನು ಆತ್ಮಜ್ಞಾನಪೂರ್ವಕವಾಗಿ ನಡೆಯುತ್ತಿರುವನೊ ಇಲ್ಲವೊ ಎಂಬುದನ್ನು ಅರಿತುಕೊಳ್ಳಲಿಕ್ಕೆ ಮಾರ್ಗವಿಲ್ಲ. ಆತ್ಮಜ್ಞಾನಿಯು ಯಾವನು ಈ ಬಗ್ಗೆ ಗೀತೆಯು ಕೆಲವು ಉತ್ತಮವಾದ ಸಿದ್ಧಾಂತಗಳನ್ನು ಮಾಡಿ ಬಿಟ್ಟಿದೆ. ಅವುಗಳನ್ನು ಮುಂದಿನ ಪ್ರಕರಣದಲ್ಲಿ ಹೇಳುವೆವು. ಆದರೆ ಇಲ್ಲಿ ನೀತಿ ಅನೀತಿ, ಪಾಪ ಪುಣ್ಯ, ಇವುಗಳ ವಿಚಾರವನ್ನು ಸ್ವಲ್ಪ ಮಾಡು ವದು ಅವಶ್ಯವು. ನೀತಿ ಅನೀತಿ, ಪಾಪ ಪುಣ್ಯ, ಇವು ಶಬ್ದಗಳ ಎರಡು ಜೋಡಿಗಳು ಕಂಡರೂ ಅವು ತತ್ವತಃ ಒಂದೇ ಇರುವವು. ಬೇರೆ ಬೇರೆ ದೃಷ್ಟಿಯಿಂದ ನೋಡುವಾಗ ಅವುಗಳಿಗೆ ಈ ಭಿನ್ನ ಹೆಸರುಗಳು ಬಂದಿರು ವವು. ಈ ಶಬ್ದಗಳು ವಿಶೇಷವಾಗಿ ಆಚರಣೆಯ ಸಂಬಂಧದಿಂದಲೆ ಉಪ ಯೋಗಿಸಲ್ಪಡುತ್ತಿವೆ. ಸಾಮಾಜಿಕದೃಷ್ಟಿಯಿಂದ ನಾವು ಕೆಲವು ಕರ್ಮ ಗಳಿಗೆ ನೀತಿ ಅನೀತಿ ಎಂದು ಹೆಸರಿಡುತ್ತೇವೆ; ಅವುಗಳಿಗೆಯೆ ವ್ಯಕ್ತಿಯ ದೃಷ್ಟಿಯಿಂದ ಪಾಪಪುಣ್ಯಗಳೆನ್ನುತ್ತೇವೆ. ಯಾವ ಕರ್ಮವು, ಯಾವ ಆಚಾ ರವು, ಯಾವ ಭಾವನೆಯು, ಯಾವ ಸಂಕಲ್ಪವು, ವ್ಯಕ್ತಿಯ ಮತ್ತು ಸಮಾ ಜದ ಆತ್ಮವಿಕಾಸಕ್ಕೆ ಅಡ್ಡ ಬರುವದೊ ಅದು ವ್ಯಕ್ತಿಯದೃಷ್ಟಿಯಿಂದ ಪಾಪವು, ಸಮಾಜದೃಷ್ಟಿಯಿಂದ ಅನೀತಿಯು. ಯಾವುದು ವ್ಯಕ್ತಿಯ ಮತ್ತು ಸಮಾಜದ ಆತ್ಮವಿಕಾಸಕ್ಕೆ ಸಹಾಯಕವೊ ಅದು ವ್ಯಕ್ತಿಯದೃಷ್ಟಿ ಯಿಂದ ಪುಣ್ಯವು ಮತ್ತು ಸಮಾಜದೃಷ್ಟಿಯಿಂದ ನೀತಿಯು. ಇನ್ನು ಇಲ್ಲಿ ಆತ್ಮವಿಕಾಸವೆಂದರೇನು? ವ್ಯಕ್ತಿಯಲ್ಲಿ ಮತ್ತು ಸಮಾಜದಲ್ಲಿ ಶಾಂತಿ ಪುಷ್ಟಿ ತುಷ್ಟಿಗಳು, ಅಭ್ಯುದಯ ನಿಶ್ರೇಯಸಗಳು ಹೆಚ್ಚೆಚ್ಚು ನೆಲೆಗೊಳ್ಳು ವದೆ ಅವುಗಳ ಆತ್ಮವಿಕಾಸವೆನಿಸುವದು. ಒಂದು ಉದಾಹರಣೆ ಕೊಟ್ಟರೆ ಈ ವಿಷಯವು ಸ್ಪಷ್ಟವಾಗುವದು. ಅರ್ಜುನನಿಗೆ ಎದುರಾದ ಪ್ರಶ್ನೆಯನ್ನೇ ತೆಗೆದುಕೊಳ್ಳುವ. ಯುದ್ಧದಲ್ಲಿ ಗುರುಹಿರಿಯರನ್ನು ಕೊಲ್ಲಬೇಕೋ

ಕೊಲ್ಲಬಾರದೋ ಇದು ಪ್ರಶ್ನೆಯು. ಸಾಮಾಜಿಕದೃಷ್ಟಿಯಿಂದ ಕ್ಷಾತ್ರ ಧರ್ಮದಂತೆ ಇದು ಅನೀತಿಯಲ್ಲ. ಆದರೆ ಅರ್ಜುನನಿಗೆ ವ್ಯಕ್ತಿಶಃ ಅದು ಪಾಪವೆಂದೆನಿಸಿತು. ಈ ಸಂಶಯವನ್ನು ಅಪಹರಿಸುವದಕ್ಕಾಗಿಯೆ ಗೀತೆಯ ಉಪದೇಶವಾಯಿತು. ಇದು ಪಾಪವಲ್ಲ, ಯಾಕಂದರೆ ಇದು ವ್ಯಕ್ತಿಶಃ ಪಾಪವೆಂದೆನಿಸಿದರೂ ಈ ಕರ್ಮದಿಂದ ದುಷ್ಟರ ನಾಶವಾಗಿ ಸಮಾಜದ ಹಿತವಾಗುತ್ತಿರುವದರಿಂದ ಇದು ಪುಣ್ಯವೆ ಹೊರ್ತು ಪಾಪವಲ್ಲ, ಆದರೆ ನೀನು ಆ ಕರ್ಮವನ್ನು ಸ್ವಾರ್ಥದೃಷ್ಟಿಯಿಂದ ಮಾಡಕೂಡದು, ಎಂದು ಶ್ರೀಕೃಷ್ಣನು ಹೇಳಿದನು. ಒಂದು ನೀತಿಯ ಕರ್ಮವು ಸಹ ಸ್ವಾರ್ಥದೃಷ್ಟಿಯಿಂದ ಮಾಡಲ್ಪಟ್ಟರೆ ಅದು ಪಾಪವೆನಿಸುವದು. ಒಂದು ಅನೀತಿಯ ಕರ್ಮವು ಸಹ ಲೋಕಸಂಗ್ರಹಕ್ಕಾಗಿ, ಸಮಾಜ ಹಿತಕ್ಕಾಗಿ ಮಾಡಲ್ಪಟ್ಟರೆ ಅದು ಪುಣ್ಯವೆನಿಸುವದು. ಈ ಮಾತುಗಳನ್ನು ನಿಶ್ಚಯಿಸುವದರಲ್ಲಿ ಯಾವಾಗಲೂ ವ್ಯಕ್ತಿಹಿತಕ್ಕಿಂತ ಸಮಾಜಹಿತವೇ ಹೆಚ್ಚೆಂದು ತಿಳಿದು ನಡೆದರೆ ಸಹಸಾ ತಪ್ಪಾಗಲಿಕ್ಕಿಲ್ಲ. ಈ ರೀತಿಯಿಂದ ಆತ್ಮವನ್ನರಿತವರು ಯಾವಾಗಲೂ ಪುಣ್ಯಮಯವಾದ ನೀತಿಕರ್ಮಗಳನ್ನು ಮಾಡುತ್ತ ಯೋಗಮಾರ್ಗಗಳನ್ನು ಹಿಂಬಾಲಿಸಿ ತಾವು ಶ್ರೇಷ್ಠರಾಗಿ ತಮ್ಮ ಸಮಾಜವನ್ನೂ, ಮಾನವೀವಂಶವನ್ನೂ ಉಚ್ಚಪದವಿಗೆ ಒಯ್ಯುವರು.

**ಯೋಗಸಮನ್ವಯವೆಂದರೇನು**— ಸಮನ್ವಯವೆಂದರೆ ಬರಿಯ ಸಮುಚ್ಚಯವಲ್ಲ. ನಾಲ್ಕು ಬೇರೆ ಬೇರೆ ಹಣ್ಣುಗಳನ್ನು ಒಂದೇ ಬುಟ್ಟಿಯಲ್ಲಿಡುವಂತೆ ಯೋಗಮಾರ್ಗಗಳನ್ನೆಲ್ಲ ಒತ್ತಟ್ಟಿಗೆ ತರುವದು ಯೋಗ ಸಮನ್ವಯವಾಗದು. ಗಾಯನಕಲೆಯಲ್ಲಿ ಯಾವುದಕ್ಕೆ ವಿವಿಧ ಸ್ವರಗಳ ಏಕತಾನತೆಯೆನ್ನುವರೋ ಏಕರಸತೆಯೆನ್ನುವರೋ ಅಥವಾ ಕಾವ್ಯದಲ್ಲಿ ವಿವಿಧ ರಸಗಳ ಪರಿಪಾಕವೆನ್ನುವರೋ ಯೋಗಗಳ ಸಂಬಂಧವಾಗಿ ಗೀತೆಯು ಮಾಡಿದ ಅದೇ ತರದ ಕ್ರಿಯೆಗೆ ಸಮನ್ವಯವೆನ್ನುವರು. ಬೇರೆ ಬೇರೆ ಸ್ವರಗಳು ಪ್ರತ್ಯೇಕವಾಗಿ ಸವಿ ಇರುವವು, ಸುಂದರವಿರುವವು; ಆದರೆ ಯಾವದೊಂದು ರಾಗದಲ್ಲಿ ಅವುಗಳನ್ನು ಸಪ್ರಮಾಣವಾಗಿ ಕಲೆಸಿ ಅವುಗಳಲ್ಲಿ ಏಕಜೀವವನ್ನುಂಟು ಮಾಡಿದರೆ ಅವು ವಿಶೇಷ ಆನಂದವನ್ನುಂಟುಮಾಡುವವು. ನವರಸಗಳಾದರೂ ಉತ್ತಮ ಕವಿಯ ಕೃತಿಯಲ್ಲಿ ಒಂದ

ರೆಲ್ಲೊಂದು ಬೆರೆತು ಅನುಪಮಾನಂದವನ್ನೀಯುವವು. ಹಾಗೆ ಯೋಗ ಮಾರ್ಗಗಳು ಪ್ರತ್ಯೇಕವಾಗಿ ಸಾಧಕರಿಗೆ ಮೋಕ್ಷವನ್ನು ಕೊಡಲು ಸಮರ್ಥವಿದ್ದರೂ ಗೀತೆಯು ಮಾಡಿದ ಅವುಗಳ ಸಮನ್ವಯವು ಬಹಳೇ ಮನೋಹರವೂ ರಮಣೀಯವೂ ಇರುವದು. ಮನುಷ್ಯನ ಪಂಚಶಕ್ತಿಗಳ ಆದಿಯಾದ ಆತ್ಮಭೂಮಿಕೆಯಲ್ಲಿ ನಿಂತು, ಪಂಚಯೋಗಗಳಲ್ಲಿಯ ಮೂಲ ಸೂತ್ರವನ್ನು ಹಿಡಿದು ಆ ಪಂಚಶಕ್ತಿಗಳ ಸರ್ವಸ್ವವನ್ನೆಲ್ಲ ಪರಮಾತ್ಮಸಮರ್ಪಣ ಮಾಡಿ ಪರಮಾತ್ಮಯೋಗವನ್ನು ಸಾಧಿಸುವದೆ ಯೋಗಸಮನ್ವಯವೆನಿಸುವದು. ಈ ಐದು ಯೋಗಗಳೆಂಬ ಎಳೆಗಳನ್ನು ಆತ್ಮಾರ್ಪಣವೆಂಬ ಒಂದೇ ಹುರಿಯಲ್ಲಿ ಹೊಸೆದು ಪರಮಾತ್ಮನ ಪಾದಕ್ಕೇರಿ ಹೋಗುವದೆ ಯೋಗಸಮನ್ವಯವೆಂದು ಕರೆಯಲ್ಪಡುವದು.

**ಧ್ಯೇಯ ಮತ್ತು ಭಿನ್ನಮಾರ್ಗಗಳ ಪ್ರಚಾರವು**— ಗೀತೆಯು ಮಾಡಿದ ಸಮನ್ವಯದ ರೀತಿಯನ್ನು ನೋಡುವದಕ್ಕೂ ಪೂರ್ವದಲ್ಲಿ ಭಿನ್ನ ಮಾರ್ಗಗಳ ಪ್ರಚಾರದ ಬಗ್ಗೆ ನಾಲ್ಕು ಮಾತುಗಳನ್ನು ಹೇಳಬೇಕಾಗಿದೆ. ನಮ್ಮ ರಾಷ್ಟ್ರಕ್ಕೆ ಅತ್ಯಂತ ಪ್ರಾಚೀನಕಾಲದಿಂದ ಅಧ್ಯಾತ್ಮದ ರುಚಿಯು ಹೆಚ್ಚು; ಯಾವದೊಂದು ವಿಷಯವನ್ನು ಕೊನೆಮುಟ್ಟಿಸಿ ಬಿಡುವ ಬಲವು ಬಹು ಬಲವುಳ್ಳದ್ದು. ವಿಶೇಷತಃ ಅಧ್ಯಾತ್ಮಮಾರ್ಗದಲ್ಲಿ ಮಾಡಿದಷ್ಟು ಪರಿಶ್ರಮವನ್ನು ನಮ್ಮ ಪೂರ್ವಜರು ಇನ್ನಾವ ಮಾರ್ಗದಲ್ಲಿಯೂ ಮಾಡಿಲ್ಲ. ಅಧ್ಯಾತ್ಮಸಾಮ್ರಾಜ್ಯದಲ್ಲಿ ಗೊತ್ತುಹಿಡಿದಷ್ಟು ನವತತ್ವಗಳನ್ನು ಮತ್ತಾವ ವಿಷಯದಲ್ಲಿಯೂ ಕಂಡುಹಿಡಿದಿಲ್ಲ. ಆತ್ಮಾನುಭವಕ್ಕನುಸರಿಸಿ ತಮ್ಮ ಜೀವನವನ್ನು ನಡೆಸಲಿಕ್ಕೆ ಯತ್ನಿಸಿದಷ್ಟು ಅವರು ಇನ್ನಾವ ಯತ್ನವನ್ನೂ ಮಾಡಿಲ್ಲ. ಅತ್ಯಂತ ಉತ್ಸಾಹಿಗಳೂ, ತೇಜಸ್ವಿಗಳೂ, ಬುದ್ಧಿಮಾನರೂ ಆದ ನಮ್ಮ ಪ್ರಾಚೀನ ಆರ್ಯರು ತತ್ವಜ್ಞಾನದ ಎಲ್ಲ ಸಂದಿಗೊಂದಿಗಳನ್ನು ಸಹ ಹುಡುಕಿ ಪೂರ್ಣ ಆತ್ಮಜ್ಞಾನದ ಮೆಟ್ಟನ್ನು ಮುಟ್ಟಿಬಿಟ್ಟರು. ಆ ಆತ್ಮಸಾಕ್ಷಾತ್ಕಾರದ ಜ್ಞಾನಸೂರ್ಯನ ಬೆಳಕಿನಿಂದಲೆ ಮುಂದಿನ ಮಾರ್ಗವನ್ನು ಆಕ್ರಮಿಸಲಾರಂಭಿಸಿದರು. ಆದುದರಿಂದ ಈಗ್ಯೂ ನಮ್ಮಲ್ಲಿ ಮೋಕ್ಷವೆ ಪರಮಸಾಧ್ಯವೆಂದೂ ಆತ್ಮಾನುಭೂತಿಯೆ ಎಲ್ಲಕ್ಕೂ ಶ್ರೇಷ್ಠಜ್ಞಾನವೆಂದೂ ಆತ್ಮೌಪಮ್ಯಬುದ್ಧಿಯೆ ಸಕಲ ನೀತಿಯ ಅಡಿಗಲ್ಲೆಂದೂ ಮನ್ನಿಸಲ್ಪಡು

ತ್ತಲಿವೆ. ಈ ಸಾಧ್ಯವನ್ನು ಸಾಧಿಸಲಿಕ್ಕೆ ನಮ್ಮ ಅಜ್ಜ ಆರ್ಯರು ಆಧ್ಯಾತ್ಮಿಕಸಾಧನೆಯ ಅನೇಕ ಮಾರ್ಗಗಳನ್ನು ಪ್ರಚುರಗೊಳಿಸಿದರು. ಅವೆಲ್ಲ ಇಲ್ಲಿ ಅವಿರೋಧದಿಂದ ಪ್ರಚಲಿತವಾದವು. ಸಾಧಕರ ತಾರತಮ್ಯ ಮತ್ತು ಅಧಿಕಾರಭಿನ್ನತೆಯ ತತ್ವ ಇವು ಈ ದೇಶದಲ್ಲಿ ಮೊದಲಿನಿಂದ ಎಲ್ಲರಿಗೂ ಸಮ್ಮತವಿರುವದರಿಂದ ಧಾರ್ಮಿಕ ವೈಮನಸ್ಯ, ದ್ವೇಷ, ಒತ್ತಾಯ, ಧಾರ್ಮಿಕ ಕ್ರೂರತೆ ಮುಂತಾದವುಗಳು ಇಲ್ಲಿ ಎಂದಿಗೂ ಬೇರೂರಿಲ್ಲ. ತಮ್ಮ ಪ್ರಕೃತಿಗನುಗುಣವಾಗಿ ಬೇರೆ ಬೇರೆ ಸಾಧಕರು ಪರಮಾತ್ಮಸಾಧನದ ಬೇರೆ ಬೇರೆ ಮಾರ್ಗಗಳನ್ನವಲಂಬಿಸಿದರು. ಆ ಮಾರ್ಗಗಳೇ ಯೋಗಗಳೆಂದು ಪ್ರಸಿದ್ಧವಾದವು. ಹೋದ ಪ್ರಕರಣದಲ್ಲಿ ವಿವೇಚಿಸಿದ ಐದು ಯೋಗಗಳೇ ಆ ಮಾರ್ಗಗಳು.

**ಗೀತೆಯಲ್ಲಿಯ ಯೋಗಸಮನ್ವಯವು—** ಈ ಐದು ಯೋಗಗಳ ಬಗ್ಗೆ ಅನೇಕ ಗ್ರಂಥಗಳಿರುವವು. ಅವು ಆಯಾ ಯೋಗಗಳನ್ನು ಅತ್ಯುತ್ಕೃಷ್ಟ ರೀತಿಯಿಂದ ಪ್ರತಿಪಾದಿಸುವವು. ಆದರೆ ಗೀತೆಯು ಇವುಗಳಲ್ಲಿ ಯಾವದೊಂದೇ ಯೋಗವನ್ನು ಹೇಳುವ ಗ್ರಂಥವಲ್ಲ. ಯೋಗಗಳ ಸಮನ್ವಯಕ್ಕಾಗಿ ಗೀತೆಯ ಅವತಾರವಿರುವದು. ಗೀತೆಯಲ್ಲಿ ಕರ್ಮಯೋಗವೆ ಹೇಳಲ್ಪಟ್ಟಿರುವದು, ಗೀತೆಯು ಭಕ್ತಿಮಾರ್ಗದ ಶ್ರೇಷ್ಠತಮ ಗ್ರಂಥವು, ಗೀತೆಯು ಜ್ಞಾನಯೋಗದ ಪರಮಾವಧಿಯು, ಗೀತೆಯು ರಾಜಯೋಗದ ಸಾರಸರ್ವಸ್ವವು, ಗೀತೆಯಲ್ಲಿ ಎಲ್ಲ ಯೋಗಗಳು ಕ್ರಮವಾಗಿ ಹೇಳಲ್ಪಟ್ಟಿರುವವು, ಎಂದು ಬೇರೆ ಬೇರೆಯವರು ವಾದಿಸುವರು. ಗೀತೆಯಲ್ಲಿ ಎಲ್ಲ ಯೋಗಗಳ ಸಮನ್ವಯವಿರುವದರಿಂದಲೆ ಹೀಗೆ ವಾದ ಮಾಡಲಿಕ್ಕೆ ಅನುಕೂಲವಾಗಿದೆ! ಜೇನ್ನೊಣಗಳು ನಾನಾಪುಷ್ಪಗಳಿಂದ ಕೂಡಿಸಿದ ತುಪ್ಪದಲ್ಲಿ ಇಂತಹ ಹೂವಿನ ರಸವೇ ಇದು ಇರುವದು ಎಂದು ಹೇಳುವದು ಹೇಗೆ ಅಯಥಾರ್ಥವೋ ಇಂಪಾದ ಗಾಯನದಲ್ಲಿ ಯಾವದೊಂದೇ ಸ್ವರವಿದೆ ಎಂದು ಅನ್ನುವದು ಹೇಗೆ ಅನುಚಿತವೋ ಹಾಗೆಯೆ ಗೀತೆಯಲ್ಲಿ ಒಂದೇ ಒಂದು ಯೋಗವು ಪ್ರತಿಪಾದಿಸಲ್ಪಟ್ಟಿದೆ ಎಂದು ಅನ್ನುವದು ಅಯೋಗ್ಯವು. ಏಕದೇಶೀಯ ವಿಚಾರ ಮಾಡುವ ಚಟವಿದ್ದ ಅಥವಾ ದುರಾಗ್ರಹಗ್ರಸ್ತವಾದ ನಮ್ಮ ಬುದ್ಧಿಯನ್ನು ಬದಿಗಿರಿಸಿ ನಿಜ

ತತ್ವವು ಬುದ್ಧಿಯಾಚೆಗಿರುವದೆಂಬದನ್ನರಿತು ನಮ್ಮ ಆತ್ಮಸರ್ವಸ್ವದಿಂದ ತತ್ವವನ್ನು ಸಾಕ್ಷಾತ್ಕರಿಸಲಿಕ್ಕೆ ಸಿದ್ಧರಾದರೆ ಅತ್ಯಂತ ಧ್ಯಾನಸ್ಥಿತಿಯಲ್ಲಿ ನಮ್ಮ ವ್ಯಾಪಕ ದೃಷ್ಟಿಯು ವಿಕಾಸವಾಗಿ ನಿಜತತ್ವದ ಬೋಧವಾಗುವದು. ಇಂಥ ಸ್ಥಿತಿಯಲ್ಲಿ ಗೀತೆಯು ಯಾವದೊಂದೇ ಯೋಗವನ್ನು ಹೇಳುವ ಗ್ರಂಥವಲ್ಲ, ಅಥವಾ ಎಲ್ಲ ಯೋಗಗಳನ್ನು ಕ್ರಮವಾಗಿ ಹೇಳುವ ಗ್ರಂಥವೂ ಅಲ್ಲ; ಆದರೆ ಅದು ಯೋಗಗಳ ಸಮನ್ವಯವನ್ನು ಪ್ರತಿಪಾದಿಸುವ ಸಂಪೂರ್ಣಯೋಗಗ್ರಂಥವೆಂದು ಪ್ರತೀತಿಯಾಗುವದು. ಕರ್ಮ, ಜ್ಞಾನ, ಭಕ್ತಿ, ರಾಜಯೋಗ ಮುಂತಾದವುಗಳು ಪರಸ್ಪರ ಭಿನ್ನಮಾರ್ಗಗಳು, ಏಕಕಾಲಕ್ಕೆ ಇವುಗಳನ್ನಾಚರಿಸುವದು ಅಶಕ್ಯ ಅಥವಾ ಇವು ಕ್ರಮವಾಗಿಯೇ ಸಾಧಿಸತಕ್ಕವುಗಳು ಎಂಬ ತಪ್ಪು ವಿಚಾರಗಳ ಮೂಲಕವೆ ಗೀತೆಯ ವಿಷಯಕ್ಕೆ ಮೇಲ್ಕಾಣಿಸಿದ ಏಕಪಕ್ಷೀಯ ಮತಗಳು ಪ್ರಚಲಿತವಾಗಿರುವವು. ಆದರೆ ಗೀತೆಯನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸುತ್ತ ಹೋದಂತೆ ಅದರಲ್ಲಿಯ ಏಕವಾಕ್ಯತೆಯೂ ಏಕತಾನತೆಯೂ ಹೆಚ್ಚೆಚ್ಚು ಪ್ರಕಟವಾಗುತ್ತ ಹೋಗಿ ಅದರ ಸಮನ್ವಯಶೈಲಿಯ ಬಗ್ಗೆ ಹೆಚ್ಚೆಚ್ಚು ಆಶ್ಚರ್ಯವುಂಟಾಗುತ್ತಿದೆ. ಒಂದೊಂದೇ ಶಕ್ತಿಯ ಸಂಯಮನ ಸಮರ್ಪಣಾದಿ ಸಾಧನದಿಂದ ಸಾಗುವದಕ್ಕಿಂತ ನಮ್ಮ ಸಕಲಶಕ್ತಿಗಳನ್ನು, ನಮ್ಮ ಇಡೀ ಜೀವನವನ್ನು, ಜಗದುತ್ಪತ್ತಿಸ್ಥಿತಿಲಯಕ್ಕೆ ಕಾರಣನಾದ ಪರಮಾತ್ಮನಿಗೆ ಸಮರ್ಪಿಸಿ ಪರಮಾತ್ಮಯೋಗವನ್ನು ಸಾಧಿಸಬೇಕೆಂಬುದೆ ಗೀತೆಯ ಉಪದೇಶದ ಮೂಲವೆಂದು ಸಾರಿ ಹೇಳಬಹುದು.

**ಪರಮಾತ್ಮಯೋಗವು**— ನಿಜವಾಗಿ ನೋಡಿದರೆ ಜಗತ್ತಿನಲ್ಲಿ ಒಂದೇ ಒಂದು ಯೋಗಮಾರ್ಗವು. ಬುದ್ಧಿಯಿಂದ ಪ್ರಥಃಕರಿಸಿ ನಾವು ನಮ್ಮ ಶಕ್ತಿಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಡುವೆವು. ಆದರೆ ಅವೆಲ್ಲವುಗಳಿಗೆ ಆತ್ಮನೇ ಉಗಮಸ್ಥಾನವು, ಆತ್ಮನೇ ಅಧಿಷ್ಠಾನವು. ಆತ್ಮನಲ್ಲಿಯೆ ಅವೆಲ್ಲ ಲೀನವಾಗುವವು. ಜೀವಾತ್ಮನು ಪರಮಾತ್ಮನನ್ನು ಪಡೆಯುವದೇ ಮುಕ್ತಿಯು, ಮೋಕ್ಷ, ಪರಮ ಪದವು, ಪರಂಧಾಮವು, ಸಿದ್ಧಿಯು. ಹಾಗೆ ಪಡೆಯುವ ಮಾರ್ಗವೆ ಯೋಗವು, ಸಾಧನವು. ಅದುದರಿಂದ ಅದು ಪರಮಾತ್ಮಯೋಗವು. ಅಪೂರ್ಣತೆ, ಅಜ್ಞಾನ, ದುಃಖ,

ಇವುಗಳ ಅನುಭವವಳಿದು ಪರಮಾತ್ಮನ ಹಾಗೂ ತನ್ನ ನಿಜಸಂಬಂಧವು ಜೀವನಿಗೆ ತಿಳಿದು ಆ ಅರಿವಿನ ನಿತ್ಯಸಾಕ್ಷಾತ್ಕಾರವಾಯಿತೆಂದರೆ ಅವನಿಗೆ ಶಾಂತಿಯು ದೊರೆತು ಅವನು ನಿತ್ಯಾನಂದದಲ್ಲಿ ಲೋಲಾಡುವನು. ಇದೇ ಪರಮಾತ್ಮಯೋಗವು. ನಮ್ಮಲ್ಲಿ ಅಂತರ್ಯಾಮಿಯಾಗಿರುವ, ನಿತ್ಯಸತ್ಯ ಸಾಕ್ಷಿಯಾಗಿರುವ ಸರ್ವವ್ಯಾಪಿ ಪರಮಾತ್ಮನ ಅಚ್ಚಳಿಯದಿರುವ ನಿತ್ಯ ನಿರಂತರ ಅರಿವೇ ಪರಮಾತ್ಮಯೋಗವು. ಆ ಸ್ಥಿತಿಯನ್ನು ಪ್ರಾಪ್ತಮಾಡಿ ಕೊಳ್ಳುವ ಮಾರ್ಗವಾದರೂ ಯೋಗವೇ ಎನಿಸುವದು. ನಿರಹಂಕಾರ ಬುದ್ಧಿಯಿಂದ ನಮ್ಮ ಸರ್ವಶಕ್ತಿಗಳನ್ನು, ನಮ್ಮ ಸರ್ವಕರ್ಮಗಳನ್ನು ಆ ಪರಮಾತ್ಮನಿಗೆ ಅರ್ಪಣಮಾಡುತ್ತಿರುವದೆ ಪರಮಾತ್ಮಯೋಗದ ರಾಜ ಮಾರ್ಗವು. ಈ ಪರಮಾತ್ಮಯೋಗವನ್ನು ಸಾಧಿಸುವದೆ ಸಕಲ ಭೂತ ಗಳ ಧ್ಯೇಯವು, ಅವುಗಳ ಸಕಲ ಸಾಧನಗಳೂ ಈ ಯೋಗದಲ್ಲಿ ಅಂತ ರ್ಭೂತವಾಗಿರುವವು. ಹೀಗೆ ಎಲ್ಲ ಧ್ಯೇಯಗಳ ಮತ್ತು ಧ್ಯೇಯಸಾಧನ ಗಳ ಎಲ್ಲ ಮಾರ್ಗಗಳನ್ನು ತನ್ನಲ್ಲಿ ಏಕರಸಮಾಡುವಂಥ ಪರಮಾತ್ಮಯೋ ಗವೆ ಗೀತೆಯಲ್ಲಿ ಹೇಳಲ್ಪಟ್ಟ ಯೋಗವು. ಇದಕ್ಕೆ ಪೂರ್ಣಯೋಗ, ಅತಿಯೋಗ, ಆತ್ಮಸಮರ್ಪಣಯೋಗ, ಯೋಗಸಮನ್ವಯ, ಪರಮಾತ್ಮ ಯೋಗ ಎಂಬ ಯಾವ ಹೆಸರನ್ನಿಟ್ಟರೂ ಅದು ಶೋಭಿಸುವದು.

**ಗೀತೆಯ ರೀತಿ ಅಥವಾ ಸಮನ್ವಯಶೈಲಿ—** ಗೀತೆಯು ಯೋಗಸಮನ್ವಯವನ್ನು ಹೇಳುವದು, ಇದರ ಅರ್ಥವೇನು? ಕರ್ಮ ಜ್ಞಾನಾದಿ ಯೋಗಗಳಿಗೆ ಸ್ವತಂತ್ರ ಅಸ್ತಿತ್ವವೆ ಇಲ್ಲವೆಂದು ಇದರ ಅರ್ಥವೊ? ಇಲ್ಲ. ಹಾಗೆ ಸರ್ವಥಾ ಇಲ್ಲ. ಇವುಗಳಿಗೆ ಸ್ವತಂತ್ರ ಅಸ್ತಿ ತ್ವವಿದೆ ಆದರೆ ಇವು ಏಕಾಂಗೀನವಾದವುಗಳು, ಮನುಷ್ಯನ ಒಂದೊಂದೇ ಶಕ್ತಿಯನ್ನವಲಂಬಿಸಿ ಮುಂದೆ ಸಾಗತಕ್ಕವುಗಳು; ಗೀತೆಯು ಇವುಗಳ ಸಮನ್ವಯವನ್ನು ಬಹಳೇ ಶಾಸ್ತ್ರೋಕ್ತವಾಗಿಯೂ ಸುಂದರವಾಗಿಯೂ ಮಾಡಿರುವದು ಎಂಬುದೇ ಇದರ ಅರ್ಥವು. ಗೀತೆಯು ಯೋಗಗಳ ಏಕ ವಾಕ್ಯತೆಯನ್ನು ಹಠಾತ್ತಾಗಿ ಅಥವಾ ಅವ್ಯವಸ್ಥಿತರೀತಿಯಿಂದ ಪ್ರಮಾಣ ಗಳಿಲ್ಲದೆ ಮಾಡಿಲ್ಲ. ಗೀತೆಯ ಯೋಗಸಮನ್ವಯವು ಶಾಸ್ತ್ರಶುದ್ಧವು, ನಿಯಮಬದ್ಧವು, ಅನುಭವಸಿದ್ಧವು. ಅದು ಹೇಗೆಂದರೆ ಮನುಷ್ಯನಲ್ಲಿರುವ

ಪ್ರಾಣಾದಿ ಪಂಚಶಕ್ತಿಗಳು ಬಾಹ್ಯದಲ್ಲಿ ಐದು ತೋರಿದರೂ ಅವು ಆತ್ಮ ನಿಂದಲೆ ಉತ್ಪನ್ನವಾಗಿ ಹೊರಗೆ ತೋರುತ್ತಿರುವದರಿಂದ ಶುದ್ಧಾತ್ಮದಲ್ಲಿ ಅವು ಒಂದಾಗಿರುವವು. 'ಏಕೋಽಹಂ ಬಹುಸ್ಯಾಮ' ಎಂದು ಆದಿ ಆತ್ಮನು ಸುರಿದ ಕೂಡಲೆ ವಿವಿಧಸೃಷ್ಟಿಯಾಯಿತೆಂದು ಶ್ರುತಿಯು ಇರುವದು. ಅದೇ ಪ್ರಕಾರವಾಗಿ ಆದಿಶಕ್ತಿಯು ಒಂದೇ ಒಂದು. ಅದೇ ಆತ್ಮ ಶಕ್ತಿಯು. ಅದೇ ವ್ಯಕ್ತಸೃಷ್ಟಿಯಲ್ಲಿ ವಿವಿಧ ಭೂಮಿಕೆಗಳಲ್ಲಿ ನಾನಾ ಕರ್ಮಗಳನ್ನು ಕೈಗೂಡಿಸುವ ಲೀಲಾವಿಹಾರಕ್ಕಾಗಿ ಭಿನ್ನಭಿನ್ನ ಶಕ್ತಿಯಾಗಿ ಪರಿಣಮಿಸುತ್ತಿದೆ. ಈ ಮೂಲ ತತ್ವದ ಆದಾರದಿಂದಲೆ ಗೀತೆಯು ಯೋಗ ಗಳ ಸಮನ್ವಯವನ್ನು ಸಾಧಿಸಿರುವದು. ತನ್ನಲ್ಲಿ ವಿಕಾಸಹೊಂದಿದ ಯಾವದೆ ಒಂದು ಶಕ್ತಿಯ ಅವಲಂಬನದಿಂದ ಪರಮಾತ್ಮವನ್ನು ಸಾಧಿಸು ವದೆ ಯೋಗಮಾರ್ಗವೆನಿಸುವದು. ಪ್ರಾಣ ಮುಂತಾದ ಪಂಚಶಕ್ತಿಗಳಲ್ಲಿ ಯಾವದಾದರೊಂದನ್ನೆ ಅವಲಂಬಿಸದೆ ಈ ಪಂಚಶಕ್ತಿಗಳು ಯಾವ ಆತ್ಮ ಶಕ್ತಿಯಲ್ಲಿ ಏಕೀಕೃತವಾಗಿರುವವೊ ಆ ಆತ್ಮಶಕ್ತಿಯ ಸಂಕಲ್ಪದಿಂದ ನಿಮ್ಮ ಸರ್ವಶಕ್ತಿಗಳನ್ನೂ ವಿಕಸಿತ ಅವಿಕಸಿತ ಸಾಮರ್ಥ್ಯವನ್ನೂ ಸರ್ವ ಸ್ವವನ್ನೂ ಪರಮಾತ್ಮಚರಣದಲ್ಲಿ ಅರ್ಪಿಸಿ ಸಮಗ್ರಯೋಗವನ್ನು, ಸಂಪೂರ್ಣ ಯೋಗವನ್ನು ಆರಂಭಿಸಿರೆಂಬುದೇ ಗೀತೆಯ ಉಪದೇಶವು. ಆತ್ಮವೆ ಎಲ್ಲ ಶಕ್ತಿಸಾಮರ್ಥ್ಯಗಳ ಮೂಲವೆಂಬ ಶ್ರದ್ಧೆಯಿಂದ ಪ್ರೇರಿತರಾಗಿ ಜಾಗೃತ್ ಸ್ವಪ್ನ ಸುಷುಪ್ತ ಸ್ಥಿತಿಗಳಲ್ಲಿಯೂ ಕೂಡ ಆಗುವ ಎಲ್ಲ ಕರ್ಮಗಳನ್ನು ಬುದ್ಧಿಪೂರ್ವಕವಾಗಿ ಪರಮಾತ್ಮನಿಗೆ ಅರ್ಪಿಸಿ ಪ್ರತಿಕ್ಷಣಕ್ಕೂ ಜೀವನ್ಮುಕ್ತ ರಾಗಲೆತ್ನಿಸಿರಿ ಎಂದು ಗೀತೆಯು ಹೇಳುತ್ತಿರುವದು.

**ಗೀತೆಯು ಸಮನ್ವಯ ಗ್ರಂಥವು**—ಗೀತೆಯಲ್ಲಿ ಬರಿಯ ಯೋಗ ಪಂಚಕದ ಸಮನ್ವಯವಿಲ್ಲ. ಆದರೆ ವೇದಾಂತ ವ್ಯವಹಾರಗಳ ಮತ್ತು ಪ್ರವೃತ್ತಿನಿವೃತ್ತಿಗಳ ಸೋಪಪತ್ತಿಕ ಸಮನ್ವಯವು ಅದರಲ್ಲಿರುವದು. ಇತ್ತಿ ತ್ತಲಾಗಿ ಭರತಖಂಡದಲ್ಲಿ ವೇದಾಂತ ವ್ಯವಹಾರಗಳೆರಡೂ ಪರಸ್ಪರ ವಿರುದ್ಧ ಅಥವಾ ಅಸಂಬದ್ಧ ವಿಷಯಗಳೆಂಬ ಮೂರ್ಖ ತಿಳುವಳಿಕೆಯು ರೂಢವಾಗಿರುವದು. ವೇದಾಂತಿಗಳು ವ್ಯವಹಾರಸ್ಥರನ್ನು ಹೀಯಾಳಿಸು ವದು, ವ್ಯವಹಾರಿಕರು ವೇದಾಂತಿಗಳನ್ನು ಜರಿಯುವದು, ಇದು ಸಾಮಾನ್ಯ

ಸೋಟವಾಗಿದೆ. ವ್ಯವಹಾರದಲ್ಲಿ ವೇದಾಂತದ ಉಪಯೋಗವಿಲ್ಲ ವೇದಾಂತದಲ್ಲಿ ವ್ಯವಹಾರಕ್ಕೆ ಸ್ಥಳವಿಲ್ಲವೆಂದು ಜನರು ತಿಳಿಯುವರು. ಪ್ರವೃತ್ತಿನಿವೃತ್ತಿಮಾರ್ಗಗಳ ಬಗ್ಗೆಯಾದರೂ ಜನರಲ್ಲಿ ಇದೇ ಮಾದರಿಯ ವಿಚಾರಗಳು ಪ್ರಚಲಿತವಾಗಿರುವವು. ಸನಾತನಕಾಲದಿಂದ ಇವೆರಡೂ ಭಿನ್ನ ಭಿನ್ನ ಮಾರ್ಗಗಳೇ ಎಂದು ವಿದ್ವಾಂಸರು ಸಹ ಹೇಳತೊಡಗಿರುವರು. ವೇದಾಂತವ್ಯವಹಾರಗಳ ಅಥವಾ ಪ್ರವೃತ್ತಿನಿವೃತ್ತಿಗಳ ಸಮನ್ವಯವು ಆಗುವದು ಅಶಕ್ಯವೆಂದು ನಮ್ಮ ಪ್ರಥಃಕರಣಪ್ರಧಾನ ತರ್ಕಪ್ರತಿಷ್ಠಿತಬುದ್ಧಿಗೆ ತೋಚುವದು ಸಹಜವು. ಆದರೆ ನಾವು ಈ ಬುದ್ಧಿಯ ಆಚೆಗೆ ಹೋಗಬಹುದು ಎಂದು ಆತ್ಮವು ನಮಗೆ ಕಂಠರವದಿಂದ ಹೇಳುವದು. ಬುದ್ಧಿಮರ್ಯಾದೆಯನ್ನು ದಾಟಿ ಆತ್ಮಭೂಮಿಯನ್ನು ಸೇರಿದೆವೆಂದರೆ ಮನೋಮಯಕೋಶದಲ್ಲಿ ಅಶಕ್ಯಸೆಂದು ಕಾಣುವ ಎಷ್ಟೋ ಸಂಗತಿಗಳು ಶಕ್ಯವಿರುವವೆಂಬ ಅನುಭವವು ಆಗುವದೆಂದು ಹಿರಿಯರು ಹೇಳುವರು. ಮೊದಲ್ನೋಟಕ್ಕೆ ಅಶಕ್ಯವೆಂದು ಕಾಣುವ ಪ್ರವೃತ್ತಿನಿವೃತ್ತಿಗಳ ಮತ್ತು ವೇದಾಂತವ್ಯವಹಾರಗಳ ಸಮನ್ವಯವನ್ನು ಗೀತೆಯು ಆತ್ಮಾನುಭವದ ಆಧಾರದಿಂದ ಲೀಲೆಯಿಂದ ಮಾಡಿಬಿಡುತ್ತಿದೆ. ಈ ಸಮನ್ವಯದ ಮೂಲಕ ಗೀತೆಯಲ್ಲಿ ಯಾವ ಏಕದೇಶೀಯತ್ವವೂ ತೋರದೆ ಅದರ ಸಂದೇಶದಲ್ಲಿ ಸರ್ವಸಂಪೂರ್ಣತೆಯೂ ಸರ್ವಾಂಗೀನತ್ವವೂ ಸರ್ವಸಾಂದರತೆಯೂ ಬಂದಿರುವದು.

**ಗೀತೆಯ ಪ್ರವೃತ್ತಿನಿವೃತ್ತಿಗಳು—** ಗೀತೆಯಲ್ಲಿ ಪ್ರವೃತ್ತಿಯು ಹೇಳಲ್ಪಟ್ಟಿರುವದು. ಆದರೆ ಅದು ಸ್ವಾರ್ಥಮೂಲಕ ಕಾಮನಾಜನ್ಯ ಪ್ರವೃತ್ತಿಯಲ್ಲ. ಪರಮಾತ್ಮಪ್ರೇರಣೆಯಿಂದ ಅವನ ಆಳಾಗಿ ಲೋಕಸಂಗ್ರಹಾರ್ಥ ಈ ವಿಶ್ವದಲ್ಲಿ ನಿಷ್ಕಾಮ ಕರ್ಮಮಾಡುತ್ತಿರುವದೆ ಗೀತೆಯ ಪ್ರವೃತ್ತಿಧರ್ಮವು. ಗೀತೆಯಲ್ಲಿ ನಿವೃತ್ತಿಯು ಉಪದೇಶಿಸಲ್ಪಟ್ಟಿಲ್ಲವೆಂತಲ್ಲ. ಆದರೆ ಕೇವಲ ತನ್ನೊಬ್ಬನ ಮೋಕ್ಷಕ್ಕಾಗಿ ಸಂಸಾರಕರ್ಮಗಳಿಂದ ನಿವೃತ್ತನಾಗುವದು ಗೀತೆಯ ನಿವೃತ್ತಿಧರ್ಮವಲ್ಲ. ಅಹಂಭಾವ ಹಾಗೂ ಕಾಮ ಇವುಗಳನ್ನು ತಗಲಗೊಡದೆ ಆತ್ಮನನ್ನು ನಿರ್ಲಿಪ್ತವಿಡುವದೆ ಗೀತೆಯಲ್ಲಿ ಹೇಳಿದ ನಿಜವಾದ ನಿವೃತ್ತಿಯು. ಕರ್ಮವನ್ನು ಬಿಡುವ ಹಟವನ್ನು

ಗೀತೆಯು ನಿವೃತ್ತಿಧರ್ಮವು ಹಿಡಿಯುವದಿಲ್ಲ. ಗೀತೆಯಲ್ಲಿ ವೇದಾಂತ ವಿರುವದು, ಆದರೆ ಅದು ವ್ಯವಹಾರದಿಂದ ಪುಟ್ಟಪೂರಾ ಅಲಿಪ್ತವಾದ ವೇದಾಂತವಿಲ್ಲ. ಗೀತೆಯ ವೇದಾಂತವು ವ್ಯವಹಾರಗಳ ಮೂಲಾಧಾರವು. ಸೃಷ್ಟಿಗೆ ಮಿಥ್ಯೆಯೆನ್ನದೆ ಯಾವ ಬುದ್ಧಿಯಿಂದ ವ್ಯವಹಾರ ಮಾಡಲಾಗಿ ಜೀವನು ಮುಕ್ತನಾಗುವನು ಎಂಬುದನ್ನೆ ಗೀತೆಯ ವೇದಾಂತವು ಹೇಳುವದು. ಕ್ಷರಾಕ್ಷರಗಳೆರಡೂ ಪುರುಷೋತ್ತಮನ ಲೀಲಾರೂಪಗಳೆಂಬುದೆ ಗೀತೆಯ ವೇದಾಂತದ ಆದಿಬೀಜವು. ಗೀತೆಯು ವ್ಯವಹಾರವನ್ನು ಹೇಳುವದು, ಆದರೆ ಸಾಮಾನ್ಯ ಜನರು ಮಾಡುವಂತೆ ವ್ಯವಹಾರ ಮಾಡೆಂದು ಗೀತೆಯು ಎಂದೂ ಹೇಳುವದಿಲ್ಲ. ಎಲ್ಲ ವ್ಯವಹಾರವನ್ನು ತನ್ನ ಸ್ವಧರ್ಮಕ್ಕನುಸರಿಸಿ ಮಾಡಿ ಫಲಾಶೆ ಬಿಟ್ಟು ಅದೆಲ್ಲವನ್ನು ಕೃಷ್ಣಾರ್ಪಣಬುದ್ಧಿಯಿಂದಾಚರಿಸಬೇಕು, ಲೋಕಸಂಗ್ರಹಕ್ಕಾಗಿ ವ್ಯವಹಾರವನ್ನು ಮಾಡಿಯೆ ತೀರಬೇಕೆಂದು ಗೀತೆಯು ಹೇಳುವದು. ಗೀತೆಯು ಕರ್ಮಮಾರ್ಗವನ್ನು ಹೇಳುವದು. ಆದರೆ ಗೀತೆಯಲ್ಲಿ ಹೇಳಿದ ಕರ್ಮವು ನಿಷ್ಕಾಮಕರ್ಮವು, ಅಲಿಪ್ತಕರ್ಮವು. ನೀರಲ್ಲಿ ಹುಟ್ಟಿ ನೀರಲ್ಲಿ ಬೆಳೆದು ನೀರಲ್ಲಿ ತೇಲುತ್ತಿದ್ದರೂ ಅದರಿಂದ ಅಲಿಪ್ತವಿರುವ ಕಮಲದಂತೆ ಮನುಷ್ಯನು ಕರ್ಮದಲ್ಲಿ ನಿತ್ಯ ನಿರಂತರ ನಿರತನಿದ್ದರೂ ಸದೈವಮುಕ್ತನಿರಬೇಕು, ಕರ್ತನಿದ್ದು ಅಕರ್ತನಿರಬೇಕು, ಎಂದು ಗೀತೆಯು ಉಪದೇಶಿಸುವದು. ಗೀತೆಯಲ್ಲಿ ಸನ್ಯಾಸವೂ ಉಕ್ತವಾಗಿರುವದು. ಆದರೆ ಗೀತೆಯ ಸನ್ಯಾಸವು ಶಾಟಿಯಸನ್ಯಾಸವಲ್ಲ, ತ್ರಿದಂಡೀಸನ್ಯಾಸವಲ್ಲ, ಕರ್ಮಸನ್ಯಾಸವಲ್ಲ. ಕರ್ಮದ ಫಲಕಾಮನೆ ಬಿಡುವದೆ, ಕಾಮ್ಯಕರ್ಮವನ್ನು ಬಿಡಾಟುವದೆ ಗೀತೆಯಲ್ಲಿ ಹೇಳಿದ ಸನ್ಯಾಸಧರ್ಮವು. ಕರ್ಮಫಲಾಶೆಯನ್ನು ತೊರೆಯುವದೆ ನಿಜವಾದ ಸನ್ಯಾಸವು ಎಂದು ಗೀತೆಯ ಅಭಿಪ್ರಾಯವು. ಈ ಪ್ರಕಾರವಾಗಿ ಗೀತೆಯು ಪ್ರವೃತ್ತಿನಿವೃತ್ತಿಗಳ ಮೇಳವು, ವೇದಾಂತ ವ್ಯವಹಾರಗಳ ಸಮನ್ವಯವು, ಕರ್ಮಸನ್ಯಾಸಗಳ ಏಕವಾಕ್ಯತೆಯು.



## ೯. ಗೀತೆಯ ಗುಟ್ಟುಗುರಿಗಳು.

**ಸೂಚನೆ—** ಗೀತೆಯಲ್ಲಿ ಸಂಕಲಿತವಾದ ವಿಷಯಗಳು ಅತ್ಯಂತ ವ್ಯಾಪಕ, ವಿಶಾಲ ಮತ್ತು ಗೂಢವಾದವುಗಳಿರುವದರಿಂದ ಅವುಗಳನ್ನು ಕುರಿತು ಮನಸಿನಲ್ಲಿ ಬರುವ ಎಲ್ಲ ವಿಚಾರಗಳನ್ನು ಬರೆಯುವದು ಅಶಕ್ಯವು. ಅವು ಅನಂತವಿರುವವು. ಇದುವರೆಗೆ ಕೆಲವು ಮಹತ್ವದ ವಿಚಾರಗಳನ್ನು ಸಂಕ್ಷೇಪದಿಂದ ವಿವೇಚಿಸಿದ್ದಾಯಿತು. ಇನ್ನು ಗೀತೆಯ ಗುಟ್ಟುಗುರಿಗಳನ್ನು, ಗೀತಾಮಾತೆಯ ಉಪದೇಶವನ್ನು, ಶ್ರೀಕೃಷ್ಣನ ಸಂದೇಶವನ್ನು ಉಪಸಂಹಾರಾತ್ಮಕವಾಗಿ ಕೊಟ್ಟು ಬೆಳೆದ ಗ್ರಂಥವನ್ನು ಶ್ರೀಕೃಷ್ಣಾರ್ಪಣವೆಂದು ಮುಗಿಸುವ.

**ಸಿದ್ಧಪುರುಷನ ಲಕ್ಷಣಗಳು—** ಗೀತೆಯಲ್ಲಿ ಹೇಳಿದ ಪ್ರಕಾರ ಸಿದ್ಧಪುರುಷನ ಲಕ್ಷಣಗಳೇನು, ಗೀತೆಯು ಎಂಥ ಪುರುಷನನ್ನು ಸಿದ್ಧಮಾಡಬೇಕೆನ್ನುವದು, ಇದನ್ನು ನೋಡಿ ಆಮೇಲೆ ಗೀತೋಪದೇಶದ ಸಾರವನ್ನು ಲಕ್ಷಿಸುವ. ಗೀತೆಯಲ್ಲಿ ಅಲ್ಲಲ್ಲಿ ಸಿದ್ಧಪುರುಷನ ಲಕ್ಷಣಗಳು ಕೊಡಲ್ಪಟ್ಟಿವೆ. ವಿಶೇಷವಾಗಿ ೨, ೩, ೫, ೬, ೧೨, ೧೩, ೧೬ ಮತ್ತು ೧೮ ಈ ಅಧ್ಯಾಯಗಳಲ್ಲಿ ಈ ಬಗೆಯ ವರ್ಣನೆಗಳಿರುವವು. ಇನ್ನು ಸಿದ್ಧಪುರುಷನಲ್ಲಿ ಆಂತರಿಕ ಮತ್ತು ಬಾಹ್ಯ ಎಂಬ ಎರಡು ಬಗೆಯ ಲಕ್ಷಣಗಳು ಇರುವವು. ಆಂತರಿಕ ಲಕ್ಷಣಗಳು ಅವನ ಚಿತ್ಸ್ಥಿತಿಯನ್ನು, ಅವನು ಆತ್ಮಭೂಮಿಕೆಯ ಯಾವ ಮೆಟ್ಟನ್ನು ಮುಟ್ಟಿರುವನು ಎಂಬುದನ್ನು ತೋರಿಸುವವು. ಬಾಹ್ಯಲಕ್ಷಣಗಳು, ಅವನ ವ್ಯವಹಾರವೂ, ಆಚರಣೆಯೂ ಯಾವ ಬಗೆಯದ್ದಿರುವದೆಂಬದನ್ನು ಕಾಣಿಸುವವು. ಗೀತೆಯು ಅಧ್ಯಾತ್ಮಶಾಸ್ತ್ರದ ಗ್ರಂಥವಿದ್ದು ನಾವು ಯಾವ ಬುದ್ಧಿಯಿಂದ ವ್ಯವಹಾರ ಮಾಡಬೇಕೆಂಬುದನ್ನು ಪ್ರತಿಪಾದಿಸುತ್ತಿರುವದರಿಂದ ಆಂತರಿಕ ಲಕ್ಷಣಗಳನ್ನೆ ಹೆಚ್ಚಾಗಿ ವರ್ಣಿಸಿರುವದು. ಆಂತರಿಕ ಲಕ್ಷಣಗಳು ಎರಡನೆಯವರಿಗೆ ಸಾಕಷ್ಟು ಸ್ಫುಟವಾಗಿ ತೋರವು. ಆದರೂ ಬಾಹ್ಯ ಆಚರಣೆಯೆ ಅವುಗಳ ವಿಕಾಸದ ಒರೆಗಲ್ಲು. ಬಾಹ್ಯಾಚಾರವು ತಿಳಿಯಾಗಿಯೂ ಶುದ್ಧವಾಗಿಯೂ ಇಲ್ಲದಿರುವವನು ತನ್ನ ಆಂತ

ರಿಕ ಆತ್ಮವಿಕಾಸವು ಬಹಳವಾಗಿದೆ ಎಂದು ಹೇಳಿದರೆ ಅದು ಶುದ್ಧ ಡಾಂಭಿಕತನವು. ಒಳಗೆ ಬೆಳಗುವ ಬೆಳಕು ಆಚರಣದಲ್ಲಿ ಆಳವಟ್ಟು ಕಾಣದೆ ಇರದು. ಸಿದ್ಧನು ಸಂಯಮಿಯು, ಜಿತೇಂದ್ರಿಯನು, ವಿಷಯಾತೀತನು, ಅವನು ಕಾಮನೆಗಳನ್ನು ಬಿಟ್ಟವನು, ಆದುದರಿಂದ ಕಾಮಸಂಕಲ್ಪವರ್ಜಿತನು, ನಿಸ್ಪೃಹನು. ಮಮತ್ವರಹಿತನಾದುದರಿಂದ ಅವನು ನಿರ್ಮಮನು, ಅನಹಂಕಾರಿಯು, ನಿರಹಂಕಾರಿಯು. ಕರ್ಮಫಲಾಶೆಯನ್ನು ತೊರೆದವನವನು. ಆದುದರಿಂದ ಅನಾಸಕ್ತನು, ಸಂಗವರ್ಜಿತನು, ಮುಕ್ತಸಂಗನು, ಸಂಪೂರ್ಣ ನಿಷ್ಕಾಮಿಯು. ಸುಖದುಃಖ, ನಿಂದಾಸ್ತುತಿ, ಶುಭಾಶುಭ, ಮಾನಾಪಮಾನ ಮುಂತಾದ ದ್ವಂದ್ವಗಳನ್ನು ಗೆದ್ದವನಾದುದರಿಂದ ಅವನು ದ್ವಂದ್ವಾತೀತನು. ದ್ವಂದ್ವಗಳನ್ನು ದಾಟಿದವನಾದುದರಿಂದ ಅವನು ಸ್ಥಿರಮತಿಯು, ಸಮಚಿತ್ತವುಳ್ಳವನು, ಮನಸಿನ ಸಾಮ್ಯಸ್ಥಿತಿಯನ್ನು ಪಡೆದವನು. ಅಧ್ಯಾತ್ಮಜ್ಞಾನವೆ ನಿತ್ಯವೆಂದು ಅವನ ದೃಢವಾದ ನಂಬಿಗೆಯು. ಆದುದರಿಂದ, ಅನಂತಶಕ್ತಿ ಪರಮಾತ್ಮನೆ ಸೃಷ್ಟಿಯ ಅಧ್ಯಕ್ಷನು, ಅವನು ತನ್ನ ಯೋಗಸಾಮರ್ಥ್ಯದಿಂದ ಪ್ರಕೃತಿಯದ್ವಾರಾ ಈ ಸೃಷ್ಟಿಲೀಲೆಯನ್ನು ನಡೆಸಿರುವನು, ಪ್ರಕೃತಿಗುಣಗಳು ತಮ್ಮ ಕಾರ್ಯಗಳನ್ನು ಮಾಡುತ್ತಿರುವದರಿಂದ ಅವುಗಳಲ್ಲಿ ಆಸಕ್ತನಾಗಕೂಡದು, ಸ್ವಧರ್ಮಕ್ಕನುಸರಿಸಿ ಸಕಲ ಕರ್ಮಗಳನ್ನು ಬ್ರಹ್ಮಯಜ್ಞವೆಂದು ತಿಳಿದು ಬ್ರಹ್ಮಾರ್ಪಣಬುದ್ಧಿಯಿಂದ ಮಾಡುತ್ತಿರಬೇಕು, ಎಂಬ ಜ್ಞಾನದ ಸಾಕ್ಷಾತ್ಕಾರಿಯವನು. ಯಾವ ಪರವಸ್ತುವು ಜನರಿಗೆ ದೂರವೊ ಅದು ಅವನಿಗೆ ಸಮೀಪವು, ಯಾವ ವಿಷಯಗಳು ಜನರಿಗೆ ಸಮೀಪವೊ ಅವು ಅವನಿಗೆ ದೂರವು. ಈ ಪ್ರಕಾರದ ಜ್ಞಾನದಿಂದ ತನ್ನ ಕರ್ಮಬೀಜವನ್ನು ಅವನು ಸುಟ್ಟುಬಿಟ್ಟವನು. ತನ್ನ ಆತ್ಮನ ಸಂಪೂರ್ಣ ಜ್ಞಾನವು ಅವನಿಗೆ ಇರುವದರಿಂದ ಅವನು ಅಧ್ಯಾತ್ಮಯೋಗಿಯು, ಆತ್ಮವಂತನು, ಸರ್ವಭೂತಾತ್ಮಭೂತಾತ್ಮನು. ಈ ಜ್ಞಾನದ ಮೂಲಕವೆ ಪರಮಾತ್ಮನ ಅನನ್ಯಭಕ್ತಿಯು, ಅವ್ಯಭಿಚಾರಿಪ್ರೇಮವು, ಅವನಲ್ಲಿ ನೆಲೆಗೊಂಡಿರುವದು. ಹೀಗಿರುವದರಿಂದ ಅವನು ಬ್ರಹ್ಮಯೋಗಿಯು, ನಿತ್ಯಯುಕ್ತನು ಅರ್ಥಾತ್ ನಿತ್ಯಮುಕ್ತನು. ಆದುದರಿಂದಲೆ 'ಜ್ಞಾನಿಯು ನನ್ನ ಆತ್ಮನೆ' ಇರುವನೆಂದು ಭಗವಂತನು ಹೇಳಿರುವನು.

ಈ ಸ್ಥಿತಿಯಲ್ಲಿ ಆತ್ಮಸುಖವು, ಆತ್ಮತುಷ್ಟಿಯು, ಅಂತಃಸುಖವು, ಅಂತರಾರಾಮವು, ಬ್ರಹ್ಮಸಂಸ್ಪರ್ಶದ ನಿಜಾನಂದವು ಅಳವಡುವದು. ಸಿದ್ಧಪುರುಷನಲ್ಲಿ ಶುಚಿತ್ವ, ಸತ್ಯ, ಅಮಾನಿತ್ವ, ಅದಂಭಿತ್ವ, ಕ್ಷಮೆ, ತೇಜ, ಧೈರ್ಯ, ಅಭಯ, ದಕ್ಷತೆ, ಅಹಿಂಸೆ, ತ್ಯಾಗ ಮುಂತಾದ ಗುಣಗಳು ತುಂಬಿ ಸೂಸುವವು. ಆತ್ಮಜ್ಞಾನಿಯಾದ ಸಿದ್ಧಪುರುಷನು ಈ ಬಗೆಯ ಲಕ್ಷಣಗಳಿಂದ ಲಕ್ಷಿತನು.

**ಶ್ರೀಕೃಷ್ಣನು ಸಿದ್ಧನು—** ಶ್ರೀಕೃಷ್ಣನು ಸ್ವತಃ ತಾನು ವರ್ಣಿಸಿದ ಆದರ್ಶಪುರುಷನೆ ಇರುವನು. ಅವನು ಸಿದ್ಧರ ಸಿದ್ಧನು. ಬುದ್ಧರ ಬುದ್ಧನು. ವ್ಯಕ್ತಿಶಃ ತನಗೆ ಕರ್ತವ್ಯವೆಂಬುದು ಯಾವುದೂ ಉಳಿಯದಿದ್ದರೂ ಕೇವಲ ಲೋಕಸಂಗ್ರಹಕ್ಕಾಗಿ 'ಯಸ್ಯನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ। ಹತ್ವಾಪಿ ಸ ಇಮಾನ್' ಲೋಕಾನ್ನಹಂತಿ ನ ನಿಬಧ್ಯತೇ॥ ಎಂಬ ನ್ಯಾಯದಿಂದ ಘೋರವಾದ ಕೊಲೆಗೆಲಸವನ್ನು ನಡೆಸಿದನು. ಅಹಿಂಸೆಯನ್ನು ಉಪದೇಶಿಸಿ ಹಿಂಸೆಯನ್ನು ನಾಗಿಸಿದನು. ಸತ್ಯವೆಂದು ಸಾರಿ ಅಸತ್ಯವನ್ನು ನುಡಿಸಿದನು. ಇದರ ತಿರುಳನ್ನು ತಿಳಿಯದಿದ್ದರೆ ಸಿದ್ಧನ ಆಚರಣೆಯ ಮರ್ಮವು ಹೊಳೆಯದು. ಅಹಿಂಸೆ, ಸತ್ಯ ಇವೇ ನಿಜವಾದ ಲಕ್ಷಣಗಳು, ಸದ್ಗುಣಗಳು. ಆದರೆ ಅಪವಾದಾತ್ಮಕವಾಗಿ ಲೋಕಸಂಗ್ರಹ ಕಾರ್ಯದಲ್ಲಿ ಹಿಂಸೆಯು ಆವಶ್ಯವಾದರೆ ಅಸತ್ಯವು ಅಗತ್ಯವಾದರೆ ಅವುಗಳನ್ನು ಸಹ ಕೇವಲ ನಿಷ್ಕಾಮಬುದ್ಧಿಯಿಂದ ಮಾಡಿದರೆ ಅವು ಅಹಿಂಸೆ ಮತ್ತು ಸತ್ಯವೆಂದೇ ಎಣಿಸಲ್ಪಡಬೇಕೆಂಬುದು ಇದರಲ್ಲಿಯ ರಹಸ್ಯವು. ಶ್ರೀಕೃಷ್ಣನು ಕೇವಲ ಅವತಾರಿಯೆಂದು ಅವನ ಚರಿತ್ರದ ಕಡೆಗೆ ನೋಡದೆ ಅವನೊರ್ವ ಸಿದ್ಧನೆಂಬದೃಷ್ಟಿಯಿಂದಲೂ ನಾವು ನೋಡುವದು ಅವಶ್ಯವಿದೆ. ಯಾಕಂದರೆ ಪರಮಾತ್ಮನು ಸರ್ವಶಕ್ತನಿರುವದರಿಂದ ತನ್ನ ಸಂಕಲ್ಪವನ್ನು ಇನ್ನಾವ ಬಗೆಯಿಂದಾದರೂ ಪೂರೈಸಬಹುದಾಗಿತ್ತು. ಆದರೆ ಹಾಗೆ ಮಾಡದೆ ಅವನು ಮನುಷ್ಯದೇಹಧಾರಿಯಾಗಿ ಮಾನವರಂತಿದ್ದು ಮಾನವರಂತೆ ಆಚರಿಸಿ ಅಂತರ್ಧಾನಹೊಂದಿದನು. ಇದರ ಅರ್ಥವೇನೆಂದರೆ, ಮಾನವಭೂಮಿಕೆಯಲ್ಲಿ, ಮಾನವೀ ದೇಹದಲ್ಲಿ ಆತ್ಮವಿಕಾಸವು ಎಷ್ಟು ಆಗಬಲ್ಲದು ಇದರ ಮೇರೆಯನ್ನು ತೋರಿಸುವದಕ್ಕಾಗಿಯೆ ಶ್ರೀಕೃ

ಷ್ಣನು ಮಾನವಜನ್ಮವನ್ನು ತಾಳಿದನು. ಆದುದರಿಂದ ಅತಿಯೋಗಿಯೂ ಸಿದ್ಧನೂ ಅತಿಪುರುಷನೂ ಆದ ಶ್ರೀಕೃಷ್ಣನ ಜೀವನಚರಿತವನ್ನು ನಾವು ಆ ರೀತಿಯಿಂದ ಅಭ್ಯಸಿಸಲಿಕ್ಕೆಬೇಕು. ಅಂದರೆ ಅವನ ಚರಿತ್ರದಿಂದಲೂ ಅವನ ಉಪದೇಶದಿಂದಲೂ ನಮಗೆ ಹೆಚ್ಚಿನ ಸ್ಫೂರ್ತಿಯೂ ಹೆಚ್ಚಿನ ಉತ್ತೇಜನವೂ ದೊರೆಯುವದು. ಅವನು ದೇವರು, ಅವತಾರನು ಎಂದ ಕೂಡಲೆ ಅವನನ್ನು ನಾವು ದೇವ್ಹಾರದಲ್ಲಿಟ್ಟು ಪೂಜಿಸತೊಡಗುತ್ತೇವೆ; ಆದರೆ ಅವನು ಸಿದ್ಧನೆಂದ ಕೂಡಲೆ ಅವನನ್ನು ಆದರ್ಶವೆಂದಿಟ್ಟುಕೊಂಡು ಅವನ ಸಿದ್ಧವಾದ ಚಿತ್‌ಸ್ಥಿತಿಯನ್ನು ಪಡೆಯಲಿಕ್ಕೆ, ಅವನ ತೇಜಸ್ವಿಯಾದ ಆಚರಣೆಯನ್ನು ಅನುಕರಿಸಲಿಕ್ಕೆ ಆರಂಭಿಸುತ್ತೇವೆ.

**ಗೀತೆಯ ಗುಟ್ಟು**— ಇನ್ನು ಗೀತೆಯ ಸಾರಸರ್ವಸ್ವವನ್ನು ಆದಷ್ಟು ಮಟ್ಟಿಗೆ ಶ್ರೀಕೃಷ್ಣನ ದಿವ್ಯವಚನಗಳಿಂದಲೆ ಸ್ವಲ್ಪದರಲ್ಲಿ ಹೇಳಿ ಮೇರೆ ತಪ್ಪಿದ ಈ ವಿವೇಚನವನ್ನು ಮುಗಿಸಬೇಕಾಗಿದೆ. ಅಣ್ಣತಮ್ಮಂದಿರಾದ ಕೌರವಪಾಂಡವರದೊಂದು ಸಣ್ಣ ಜಗಳವು, ಬೆಳೆಬೆಳೆದು ಭಾರತೀಯ ಯುದ್ಧದಂತಹ ದಾರುಣ ರಣಸಂಗ್ರಾಮದಲ್ಲಿ ಪರಿಣಮಿಸಿತು. ವಿದುರನೀತಿಯಾಯಿತು; ಕೃಷ್ಣಸಂಧಾನವಾಯಿತು; ಒಳ್ಳೆಮಾತಿನಿಂದ ಹೇಳುವದು ಕೇಳುವದಾಯಿತು; ಸಾಮದಾನಾದಿ ಅಹಿಂಸೆಯ ಮಾರ್ಗಗಳಾದವು. ಯಾತಕ್ಕೂ ಹಣಿಯದ ದುರ್ಯೋಧನನು ದೃಢವಾಗಿ ತನ್ನ ಹಟವನ್ನು ಹಿಡಿದನು. ಯಾವುದಾದರೊಂದು ಪಕ್ಷವು ನಿರ್ನಾಮವಾಗುವವರೆಗೆ ನಿರ್ಣಯವಾಗುವದಿಲ್ಲವೆಂಬುದು ಸಿದ್ಧವಾದುದರಿಂದ ಎರಡೂ ಬಣಗಳು ರಣದ ಕಣಕ್ಕೆ ಇಳಿಯಲು ಸನ್ನದ್ಧವಾದವು. ಭಾರತೀಯ ವೀರರೆಲ್ಲರೂ ಒಂದಿಲ್ಲೊಂದು ಪಕ್ಷವನ್ನು ಕಟ್ಟಿದರು. ಕುರುಕ್ಷೇತ್ರದಲ್ಲಿ ಸೇನಾಸಾಗರವು ಮೋಹರಿಸಿ ನೆರೆಯಿತು. ಕಾಲಾಳು ಬಿಲ್ಲಾಳುಗಳು, ರಥಿಕರು ರಾವುತರು ಆಯುಧಗಳನ್ನೆಲ್ಲ ಸಜ್ಜುಮಾಡಿ ನಿಂತರು. ಕತ್ತಿಯನ್ನು ಹಿರಿದು ಗದೆಯನ್ನೆತ್ತಿ ಹೆದೆಯನ್ನೇರಿಸಿ ಎದೆಯುಬ್ಬಿಸಿದ ವೀರರು ಎದುರಾದವರ ಕೊಲೆಗೆ ಸಾಗಲು ಸಿದ್ಧರಾದರು. ಹೇಡಿಗಳ ಎದೆಯೊಡೆದು ನೀರಾಗುವಂತೆ ಕಲಿಗಳ ಬಾಹುಗಳು ಸ್ಫುರಿಸುವಂತೆ ರಣಭೇರಿ ಶಂಖ ಮುಂತಾದವುಗಳ ನಾದವು ಆಕಾಶದಲ್ಲಿ ಇಡಿಗಿತು. ಇದೆಲ್ಲ ನಾಟಕವು ಅರ್ಜುನನೆದುರ್ರಿ

ಗೆಯೆ ನಡೆದಿತ್ತು. ಅವನು ವೀರರಲ್ಲಿ ಅಗ್ರಗಣ್ಯನು. ವೀರಮಾತೆ ಕುಂತಿಗೆ ಅವನಲ್ಲಿ ವಿಶ್ವಾಸವು. ಸೂತ್ರಧಾರನಾದ ಶ್ರೀಕೃಷ್ಣನೂ ಅವನಲ್ಲಿಯೆ ನಂಬಿಗೆಯನ್ನಿಟ್ಟು ಅವನ ಸಾರಥಿಯಾಗಿದ್ದನು. ಪಾಂಡವಸೈನ್ಯದ ಕಣ್ಣೆಲ್ಲ ಅವನ ಕಡೆಗೆ. ಕೌರವರಿಗಾದರೂ ಅವನ ಭಯವೆ ಹೆಚ್ಚು. ಹೀಗಿರುವಾಗ ಎರಡೂ ಸೈನ್ಯಗಳನ್ನು ನಿರೀಕ್ಷಿಸಬೇಕು, ವಿಶೇಷತಃ ತನಗೆ ಎದುರಾದ ಶತ್ರುಗಳನ್ನು ನೋಡಬೇಕೆಂದು ಪಾರ್ಥನು ತನ್ನ ರಥವನ್ನು ರಣಮಧ್ಯಕ್ಕೆ ಸಾಗಿಸೆಂದು ಸಾರಥಿಗೆ ಅಪ್ಪಣೆ ಕೊಟ್ಟನು. ಹಾಗೆ ಮಾಡುವದೊಂದೇ ತಡವು. ಉತ್ತರಕುಮಾರನಂತೆ ಅವನ ಸ್ಥಿತಿಯಾಯಿತು. ಹಾಗೆ ಆದುದು ಭಯದಿಂದಲ್ಲ, ಆದರೆ ನಿರಾಧಾರ ಪಾಪಬುದ್ಧಿಯಿಂದ. ಪರಿಸ್ಥಿತಿಯು ಅರ್ಜುನನಿಗೆ ಅಪರಿಚಿತವಿದ್ದಿಲ್ಲ. ಎಲ್ಲವೂ ಅವನೆದುರಿಗೆ, ಅವನ ಸಮ್ಮತಿಯಿಂದಲೆ ಆಗುತ್ತಬಂದಿತ್ತು. ಗುರು ದ್ರೋಣಾಚಾರ್ಯರೂ ಭೀಷ್ಮಪಿತಾಮಹರೂ ಕೌರವರ ಪಕ್ಷದಿಂದ ಹೋರಾಡುವರೆಂಬದು ಮೊದಲೆ ಗೊತ್ತಿತ್ತು. ಕೌರವರು ತನ್ನ ಸಹೋದರರು, ಬಂಧುಗಳು ಎಂಬುದು ಅರ್ಜುನನಿಗೆ ಹೊಸದಾಗಿ ತಿಳಿಯಬೇಕಾದ ಮಾತಾಗಿರಲಿಲ್ಲ. ಆದರೆ ಇದುವರೆಗೆ ಈ ವಿಷಯಕ್ಕೆ ಅವನಿಗೆ ಯಾವ ವಿಶೇಷ ಭಾವನೆಗಳೂ ಬಂದಿರಲಿಲ್ಲ. ತಾನು ಕ್ಷತ್ರಿಯನು, ತನ್ನ ಪಕ್ಷವು ನ್ಯಾಯದ್ದು, ಧರ್ಮಯುದ್ಧ ಮಾಡಿ ತನ್ನ ಪಕ್ಷಕ್ಕೆ ಜಯವನ್ನು ದೊರಕಿಸುವದೆ ತನ್ನ ಕರ್ತವ್ಯವೆಂದು ಅವನ ಭಾವನೆಯಿತ್ತು. ಇದರಿಂದಲೆ ತನ್ನ ಕಲ್ಯಾಣವೆಂದು ಅವನ ತಿಳುವಳಿಕೆಯಿತ್ತು.

ಆದರೆ ಮಡಿಚಿಟ್ಟ ಮಡಿಕೆಯು ಒಮ್ಮೆಲೆ ವಿಸ್ಖಳಿತವಾಯಿತು. ಬಂಧುಗಳ ತಲೆಯನ್ನು ತಾನೇ ಒಡೆಯಬೇಕಾಗುವದು, ಗುರುಹಿರಿಯರ ಎದೆಯನ್ನು ತಾನೇ ಸೀಳಬೇಕಾಗುವದು, ಹಿರಿಯರ ಜೀವದ ಗಂಟನ್ನು ತಾನೇ ಒಡೆಯಬೇಕಾಗುವದು ಎಂಬ ವಿಚಾರವು ಅವನ ಮುಂದೆ ನಿಂತಕೂಡಲೆ, ಜೀವದಿಂದಿರುವ ತನ್ನ ಆಪ್ತೇಷ್ಟರೆಲ್ಲ ಕ್ಷಿಪ್ರವಾಗಿ ರಕ್ತಮಾಂಸಗಳ ಕೆಸರಾಗಿ ಕಾಕಗಳಿಗೆ ಭಕ್ಷ್ಯವಾಗುವರೆಂಬ ಕಲ್ಪನೆಯು ಕಣ್ಣೆದುರಿಗೆ ಕಟ್ಟಿದಕೂಡಲೆ, ಅವನ ದಯಾಪರವಾದ ಅಂತಃಕರಣವು ಕಳವಳಗೊಂಡಿತು. ಕೆಟ್ಟ ಕೊಲೆಯನ್ನೂ ನೆರೆನೆರೆ ಹರಿಯುವ ನೆತ್ತರವನ್ನೂ ನೋಡದ

ಇರುವ ನರನು ಭಯಾವಹವಾದ ರಕ್ತಪಾತವನ್ನು ನೋಡಿ ಕಣ್ಣುತಿರುಗಿ ಚಲ್ಲುವವನಂತೆ ಅವನು ಹತವೀರ್ಯನಾಗಿ ಹಣ್ಣಾಗಿ ನೆಲಹಿಡಿದನು. ಇಷ್ಟಕ್ಕೆ ಅವನ ಭವಣೆಯು ಮುಗಿಯಲಿಲ್ಲ. ಶಾರೀರಿಕ ದೌರ್ಬಲ್ಯವೂ ಮಾನಸಿಕ ದೌರ್ಬಲ್ಯವೂ ಕೂಡಿ ಅವನ ಮನದಲ್ಲಿ ಅನೇಕ ಸಂಶಯಗಳುಂಟಾದವು. ತಾನು ಅದೆಲ್ಲ ಮಾಡುವದು ಯಾತಕ್ಕೋಸುಗ? ರಾಜ್ಯದ ಸಲುವಾಗಿಯಲ್ಲವೆ? ಆ ರಾಜ್ಯದಿಂದ ತನಗೇನು ಪ್ರಯೋಜನ? ಬಂಧುಬಳಗದವರಿಲ್ಲದ ಬಾಳು ಭೋಗಗಳಿಂದ ಭಾಗ್ಯವುಳ್ಳದ್ದಾಗಬಲ್ಲದೆ? ಅರ್ಜುನನ ಮನಸಿನಲ್ಲಿಯು ಕಲ್ಲೋಲವು ಇಲ್ಲಿಗೆ ತಡೆಯಲಿಲ್ಲ. ತಾನು ಮಾಡುತ್ತಿದ್ದುದು ಪಾಪವು, ಅಧರ್ಮವು, ಅದನ್ನೆಲ್ಲ ಬಿಟ್ಟು ಭಿಕ್ಷೆಬೇಡುತ್ತ ಹೋಗುದದು ಕಲ್ಯಾಣಕರವು, ಶ್ರೇಯಸ್ಕರವು ಎಂದು ಅವನ ಬಗೆಯಾಯಿತು. ಅವನ ಶಾರೀರಿಕ ಬಲವು, ಮಾನಸಿಕ ಧೈರ್ಯವು, ನೀತಿಯ ವಿಚಾರವು, ಆತ್ಮಿಕ ತೇಜವು ಇವೆಲ್ಲ ಮಂಜಿನ ಮೋಡಗಳಂತೆ ಮಾಯವಾಗಿ ಅವನು ವಿಷಣ್ಣನಾಗಿ, ಏನು ಮಾಡಬೇಕೆಂಬುದು ತಿಳಿಯದೆ ದಿಗ್ಭ್ರಾಂತನಾಗಿ ಕುಳಿತನು. ಈ ಆಟವನ್ನೆಲ್ಲ ಶ್ರೀಕೃಷ್ಣನು ನಗೆಮೋರೆಯಿಂದ ನೋಡುತ್ತಲಿದ್ದನು. ಇದುವರೆಗೆ ಪರೋಪರಿಯ ಪ್ರಯತ್ನದಿಂದ ಮಾಡಿದ ಹಂಚಿಕೆಯೆ ಹದಗೆಟ್ಟುಹೋಗುವ ಹೊತ್ತು ಬಂದಿತು. ಆದರೆ ಇಂಥ ಪ್ರಸಂಗವನ್ನು ಸಹ ಶ್ರೀಕೃಷ್ಣನು ತನ್ನ ಅವತಾರೋದ್ದೇಶಗಳನ್ನು ಸಾಧಿಸಿಕೊಳ್ಳಲಿಕ್ಕೆ ಉಪಯೋಗಿಸಿದನು. ಬಾಡಿ ಬತ್ತಿ ಮನಸೋತು ಮೈಚಲ್ಲಿದ ಅರ್ಜುನನ ಕಡೆಯಿಂದಲೆ ಅಧರ್ಮಿಗಳಾದ ಕೌರವರನ್ನು ಕೊಲ್ಲಿಸಬೇಕೆಂದು ಶ್ರೀಕೃಷ್ಣನ ಕೃತಸಂಕಲ್ಪವು. ತನ್ನ ಪ್ರಾಣವು ಸಹ ತನಗೆ ಬೇಡಾಗುವಷ್ಟು ನಿರುತ್ಸಾಹಿಯಾದ, ನಿರಾಶನಾದ, ನಿಕೃಷ್ಟಸ್ಥಿತಿಯಲ್ಲಿದ್ದ ನರನನ್ನು ಮೇಲಕ್ಕೆತ್ತಿ ಉದ್ಧಾರಮಾಡಿ ಅವನ ಕೈಯಿಂದ ದಿವ್ಯಕರ್ಮಗಳನ್ನು ಮಾಡಿಸುವ ಸ್ಫುರಣಶಕ್ತಿಯು ಆರ್ಯರ ಅಧ್ಯಾತ್ಮಜ್ಞಾನದಲ್ಲಿರುವದೆಂಬುದನ್ನು ಸಿದ್ಧಮಾಡುವ ಸುಸಮಯವು ಇದೇ ಎಂದು ಶ್ರೀಕೃಷ್ಣನು ಇದೇ ಕಾಲಕ್ಕೆ ಗೀತೆಯ ಉಪದೇಶವನ್ನು ಮಾಡಲಿಕ್ಕೆ ಮುಂದಾದನು.

ಶ್ರೀಕೃಷ್ಣನು ಅರ್ಜುನನಿಗೆ ಅಂದದ್ದು—"ಛೀ, ಮೂಢಾ! ಹೆಂಭೇಡಿಯಂತೆ ಹಿಂಜರಿಯುವ ಸಮಯವು ಇದಲ್ಲ. ಇದು ನಿನಗುಚಿತವಲ್ಲ.

ನೀನು ಆರ್ಯಕುಲದವನು. ಕ್ಷತ್ರಿಯ ವೀರನು. ಯುದ್ಧ ಮಾಡುವದು ನಿನ್ನ ಧರ್ಮವು. ಸತ್ತರೆ ವೀರಸ್ವರ್ಗವು ಬದುಕಿದರೆ ಭೂಮಿಯ ಒಡೆತನವು ನಿನಗೆ. ಹೀಗಿರಲು ನೀನು ಈಗ ಕಾಳಗ ಬಿಟ್ಟು ಹೋಗುವ ಬಗೆ ಹೇಗೆ? ಹೀಗೆ ಮಾಡಿದರೆ ನಿನ್ನನ್ನು ಜನರು ಜರೆಯುವರು. ಏಳು, ಈ ದುಷ್ಟರನ್ನು ಸವರು. ಜಯಾಪಜಯಗಳೆರಡೂ ಅಷ್ಟೇ ಎಂದು ತಿಳಿದು ನಿನ್ನ ಕ್ಷಾತ್ರಧರ್ಮವನ್ನು ಪಾಲಿಸು. (ಇದನ್ನು ಕೇಳಿ ಅರ್ಜುನನು ಚೇತರಿಸಿ ಏಳದಿದ್ದುದನ್ನು ನೋಡಿ ಶ್ರೀಕೃಷ್ಣನು ಮತ್ತೆ ಅಂದದ್ದು—) ಇದಲ್ಲದೆ ನೀನು ವ್ಯರ್ಥ ಶೋಕಮಾಡುವಿ. ಈ ಆತ್ಮವು ಅವಿನಾಶಿಯು. ಇದು ಬೆಂಕಿಯಿಂದ ಸುಡದು, ನೀರಿನಿಂದ ತೊಯ್ಯದು, ಖಡ್ಗದಿಂದ ತುಂಡಾಗದು. ಅಂದಮೇಲೆ ದುಃಖವೇಕೆ? ಏಳು, ಫಲಾಶೆಯಿಲ್ಲದೆ ನಿನ್ನ ಕರ್ತವ್ಯವನ್ನು ಮಾಡು. ಅಂದರೆ ನಿನಗೆ ಯಾವ ದಃಖವೂ ತಗಲದು. ಚಿತ್ತವನ್ನು ಸಮಸ್ಥಿತಿಯಲ್ಲಿಟ್ಟು ಯೋಗಸ್ಥನಾಗಿ ಕರ್ಮಮಾಡು. ಇಂದ್ರಿಯಗಳನ್ನು ನಿಗ್ರಹಿಸಿ ಕಾಮನೆಗಳನ್ನು ತ್ಯಜಿಸು. ಆತ್ಮರತನಾಗಿ ಆತ್ಮಾನಂದವನ್ನು ಪಡೆ. ಅಂದರೆ ಯಾವ ಸುಖದುಃಖಗಳೂ ದ್ವಂದ್ವಗಳೂ ನಿನಗೆ ಮುಟ್ಟವು. ನಿನ್ನ ಮನಸು ಪ್ರಸನ್ನವಾಗಿ ಸ್ಥಿರವಾಗಿ ಸಮವಾಗಿ ಶಾಂತವಾಗಿ ನೀನು ಬ್ರಹ್ಮನಿರ್ವಾಣವನ್ನು ಪಡೆಯುವಿ. (ಬ್ರಹ್ಮನಿರ್ವಾಣವನ್ನು ಪಡೆಯುವವಾದರೆ ಈ ಘೋರ ಕರ್ಮವೇಕೆ ಎಂದು ಅರ್ಜುನನು ಕೇಳಲು ಶ್ರೀಕೃಷ್ಣನು ಅಂದದ್ದು—) ಕರ್ಮವು ಯಾವನಿಗೂ ಬಿಟ್ಟದ್ದಲ್ಲ. ಕರ್ಮಫಲಾಶೆಯನ್ನು ಬಿಡುವದೆ ನಿಜವಾದ ನಿಷ್ಕಾಮತೆಯೆನಿಸುವದು. ಈ ಸೃಷ್ಟಿವ್ಯಾಪಾರವೆಲ್ಲ ಒಂದು ದೊಡ್ಡ ಯಜ್ಞವು. ಎಲ್ಲ ಕರ್ಮವನ್ನು ನಿಷ್ಕಾಮನಾಗಿ ಯಜ್ಞವೆಂದು ಮಾಡಿ ಬ್ರಹ್ಮನಿಗೆ ಅರ್ಪಿಸಿದರೆ ಅದು ಕರ್ಮಿಯನ್ನು ಬಂಧಿಸದು. ಈಗ ಜಗತ್ತಿನಲ್ಲಿ ನಾನು ಮಾಡತಕ್ಕ ಕರ್ತವ್ಯವೇನೂ ಇಲ್ಲ. ಆದರೆ ಲೋಕಸಂಗ್ರಹಾರ್ಥವಾಗಿ ನಾನು ಕರ್ಮವನ್ನು ಮಾಡಿ ಮೇಲುಪಂಕ್ತಿಯನ್ನು ಹಾಕಿಕೊಡುತ್ತಿರುವೆನು. ನೀನಾದರೂ ಮುಕ್ತಸಂಗನಾಗಿ ಜನಕಾದಿಗಳಂತೆ ಕರ್ಮಮಾಡು. ಜ್ಞಾನಯೋಗವು ಬೇರೆ ಕರ್ಮಯೋಗವು ಬೇರೆ ಅವುಗಳಲ್ಲಿ ವಿರೋಧವಿರುವದೆಂದು ಕೆಲವರು ಅನ್ನುವದು ಪೂರಾ ತಪ್ಪು. ಅವೆರಡೂ ಒಂದೇ, ಅವು ಪರಸ್ಪರ ಪೋಷಕವಾಗಿರುವವು. ಸಂಕಲ್ಪಸನ್ಯಾ

ಸದ ಹೊರ್ತು ಕರ್ಮಯೋಗವು ಸಾಧಿಸದು. ಕರ್ಮಯೋಗದ ಹೊರ್ತು ಸನ್ಯಾಸವು ಸಿದ್ಧವಾಗದು. ಸಮಚಿತ್ತನಾಗಿ ಸಂಗವಿಲ್ಲದೆ ಕೃಷ್ಣಾರ್ಪಣ ಬುದ್ಧಿಯಿಂದ ಲೋಕಸಂಗ್ರಹಾರ್ಥವಾಗಿ ಕರ್ಮ ಮಾಡುತ್ತ ನಡೆ. ಇನ್ನು ಸಮಬುದ್ಧಿಯನ್ನು ಸಾಧಿಸುವ ಬಗೆ ಹೇಗೆ ಎಂದು ನೀನು ಕೇಳಬಹುದು. ಇಲ್ಲಿ ರಾಜಯೋಗದ ಸಹಾಯವನ್ನು ಪಡೆದು ನೀನು ಮುಂದೆ ಸಾಗಬೇಕು. ಈ ವಿಷಯದ ಜೊತೆಗೆಯೆ ನಾನು ನಿನಗೆ ಪರಮಾತ್ಮನ ಜ್ಞಾನವನ್ನು ಮತ್ತು ಪರಮಾತ್ಮನಿಗೂ ಈ ಸೃಷ್ಟಿಗೂ ಇದ್ದ ಸಂಬಂಧವನ್ನು ಹೇಳುವೆನು ಕೇಳು. ನಾನೇ ಪರಮಾತ್ಮನು, ನನ್ನ ಯೋಗಶಕ್ತಿಯಿಂದ ಈ ಪ್ರಕೃತಿ ಮತ್ತು ಗುಣಗಳ ಮುಖಾಂತರ ಈ ಸೃಷ್ಟಿಯನ್ನು ನಾನೇ ಸೃಜಿಸುವೆನು. ಮೋಹದಿಂದ ಆವೃತರಾದುದರಿಂದ ಜನರು ಇದನ್ನು ತಿಳಿದುಕೊಳ್ಳುವದಿಲ್ಲ. ಆದರೆ ನೀನು ನನ್ನ ಮಹಿಮೆಯನ್ನು ತಿಳಿದು ನನ್ನನ್ನು ಭಜಿಸು. ನಾನು ಈ ವಿಶ್ವವನ್ನೆಲ್ಲ ವ್ಯಾಪಿಸಿ ಮತ್ತೆ ಮೇಲೆ ಉಳಿದಿರುವೆನು. ನಾನು ಅನಂತನು. ಇಕೋ ಈ ನನ್ನ ವಿಶ್ವರೂಪವನ್ನು ನೋಡು. ನನ್ನ ಅನಂತತ್ವವೂ ಅನಂತ ಶಕ್ತಿಮತ್ವವೂ ಇದರಿಂದ ನಿನಗೆ ತಿಳಿದು ಬರುವವು. ಈ ರೂಪವನ್ನು ಭಕ್ತರಿಗೆ ಮಾತ್ರ ತೋರಿಸುವೆನು. ಎಲ್ಲ ಶರೀರಗಳಲ್ಲಿ ನಾನು ಆತ್ಮನಾಗಿ ಅಂಶರೂಪದಿಂದ ವಾಸಿಸುವೆನು. ಈ ಕ್ಷರ ಅಕ್ಷರಗಳಾಚೆಗೆ ನಾನು ಪುರುಷೋತ್ತಮನೆಂದೆನಿಸಿಕೊಂಡು ಎಲ್ಲವುಗಳಿಗೆ ಅಧ್ಯಕ್ಷನಾಗಿರುವೆನು. ಆದುದರಿಂದ ನೀನು ನನ್ನನ್ನು ಸಮಗ್ರವಾಗಿ ಭಜಿಸು. ನನ್ನ ಸಂಪೂರ್ಣಜ್ಞಾನವಾಗದೆ ನೀನು ಮುಕ್ತನಾಗಲಾರಿ. ಈ ಗುಣಗಳ ತೊಡಕಿನಲ್ಲಿ ನೀನು ಸಿಗಬೇಡ. ಅಹಂಕಾರವನ್ನಳಿದು ನನ್ನ ಕೈಯಲ್ಲಿ ನಿಮಿತ್ತಮಾತ್ರನಾಗಿ ನಡೆ, ಅಂದರೆ ನಿನಗೆ ಯಾವ ತೊಂದರೆಯೂ ಆಗದು. ಗುಣಗಳು ತಮ್ಮಷ್ಟಕ್ಕೆ ತಾವೇ ಪ್ರವರ್ತಿಸುವವೆಂದು ತಿಳಿದು ಅವುಗಳಲ್ಲಿ ಆಸಕ್ತನಾಗಬೇಡ. ಯಜ್ಞ ದಾನ ತಪವೆಂಬ ಮೂರು ಕರ್ಮಗಳನ್ನು ಯಾವಾಗಲೂ ಮಾಡುತ್ತಿರು. 'ನಾನು' ಎಂಬ ಅಹಮಹಮಿಕೆಯನ್ನು ಮಾತ್ರ ಬಿಟ್ಟುಬಿಡು. ಹೀಗೆ ನಿರ್ಮಮನಾಗಿ ನಿನ್ನ ಧರ್ಮದಂತೆ ನಿನ್ನ ಜಾತಿಗುಣಕರ್ಮಗಳಿಗನುಗುಣವಾದ ಕರ್ಮವನ್ನು ಭಗವದರ್ಪಣ ಮಾಡುತ ಹೋದರೆ ನೀನು ನಿತ್ಯಮುಕ್ತನೆನಿಸುವಿ. ಅನೇಕರು ಅನೇಕ ಮಾರ್ಗಗ

ಳನ್ನು ನಿನಗೆ ಹೇಳಬಹುದು. ಆದರೆ ಅವೆಲ್ಲವುಗಳನ್ನು ಮೀರಿದ ಧರ್ಮ ವೊಂದನ್ನು, ಯೋಗಗಳಲ್ಲಿ ಅತಿಯೋಗವಾದುದನ್ನು ನಾನು ನಿನಗೆ ಹೇಳು ವೆನು ಕೇಳು. ಸರ್ವ ಧರ್ಮಗಳನ್ನು ಬಿಟ್ಟು, ಅವುಗಳನ್ನು ದಾಟಿ, ನನ್ನೊ ಬ್ಬನಿಗೆ ನೀನು ಅನನ್ಯ ಶರಣಾಗತನಾಗು. ಅಂದರೆ ಆತ್ಮಾರ್ಪಣ ಮಾಡಿದ ನಿನ್ನನ್ನು ಸರ್ವ ಪಾಪಗಳಿಂದ ಮುಕ್ತಮಾಡಿ ನಾನು ಮೋಕ್ಷಕ್ಕೆ ಒಯ್ಯು ವೆನು. ನಾನು ಹೇಳತಕ್ಕುದನ್ನು ಹೇಳಿರುವೆನು. ಇದೇ ನನ್ನ ಗುಟ್ಟು, ಇನ್ನು ನಿನ್ನ ಮನಸಿಗೆ ತೋಚಿದಂತೆ ಮಾಡು."

ಹೀಗೆ ಉಪದೇಶವಾದ ಮೇಲೆ ಅರ್ಜುನನು ತನ್ನ ಮೋಹವು ನಷ್ಟ ವಾಯಿತೆಂದು ಹೇಳಿ ಯುದ್ಧ ಮಾಡಿ ಪರಮಾತ್ಮನ ದುಷ್ಟಸಂಹಾರ ಶಿಷ್ಟ ಪರಿಪಾಲನಕಾರ್ಯದಲ್ಲಿ ಸಹಾಯಭೂತನಾದನು. ಇದೇ ಗೀತೆಯ ಸಂದೇಶವಿರುವದು. 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ'·ಸಂಪೂರ್ಣ ಆತ್ಮಸಮರ್ಪಣೆ ಮಾಡಿ ಪರಮಾತ್ಮಪ್ರೇರಣೆಯಿಂದ ನಿಷ್ಕಾಮನಾಗಿ ಸ್ವಕರ್ಮದಲ್ಲಿ ಪ್ರವರ್ತಿಸಿ 'ಮುಕ್ತಕರ್ಮ'ವನ್ನು ಲೋಕ ಸಂಗ್ರಹವೆಂಬ ಆತ್ಮಲೀಲಾರ್ಥವಾಗಿ ಮಾಡುತ್ತಿರುವದೆ ಈ ಮಾನವೀ ಸೃಷ್ಟಿಯಲ್ಲಿ ಅತ್ಯಂತ ಶ್ರೇಷ್ಠವಾದ ಚಿತ್‌ಸ್ಥಿತಿಯೆಂದು ನಾವು ಹೇಳುವೆವು. ಮೇಲಿನ ವಾಕ್ಯವೆ ಗೀತೆಯ ಗುಟ್ಟು, ಅದೇ ಗೀತೆಯ ಗೂಢವು, ಅದೇ ಗೀತಾಸಾರವು, ಗೀತೆಯ ರಹಸ್ಯವು, ಗೀತೆಯ ಮಹಾಮಂತ್ರವು, ಗೀತೆಯ ಮಹಾವಾಕ್ಯವು, ಗೀತೆಯ ದಿವ್ಯವಾಣಿಯು. ಅದನ್ನನುಸರಿಸಿ ಶ್ರದ್ಧಾಪೂರ್ವಕವಾಗಿ ನಡೆಯುವವನಲ್ಲಿ ಶ್ರೀ, ವಿಜಯ, ಅಭ್ಯುದಯ, ದೃಢ ವಾದ ನೀತಿ ಇವು ನೆಲೆಗೊಳ್ಳುವವು ಮತ್ತು ಅವನು ಮುಕ್ತಿಪದದ ಸ್ವಾಮಿ ಯಾಗುವನು. ಓಂ ಶಾಂತಿ.

ಶ್ರೀಕೃಷ್ಣಾರ್ಪಣಮಸ್ತು.

ಅಷ್ಟ
ಅವೇ

# ಶ್ರೀಮದ್ಭಗವದ್ಗೀತೆ.

## ಮೊದಲನೆಯ ಅಧ್ಯಾಯವು.

ಧೃತರಾಷ್ಟ್ರ ಉವಾಚ—
ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ |
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥

ಸಂಜಯ ಉವಾಚ—
ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ |
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥
ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಂ |
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥
ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ |
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥

ಧೃತರಾಷ್ಟ್ರನು ಅಂದದ್ದು— ಸಂಜಯನೇ, ಧರ್ಮಸಾಧನಕ್ಕೆ ಯೋಗ್ಯವಾದ ಕುರುಕ್ಷೇತ್ರದಲ್ಲಿ ಹೋರಾಡಲಿಚ್ಛಿಸುವ ನನ್ನ ಮಕ್ಕಳೂ ಪಾಂಡವರೂ ಕೂಡಿ ಏನು ಮಾಡಿದರು? ೧

**ಸಂಜಯನು ಅಂದದ್ದು**— ವ್ಯೂಹ ರಚಿಸಿ ನಿಂತ ಪಾಂಡವರ ಸೈನ್ಯವನ್ನು ನೋಡಿ ರಾಜನಾದ ದುರ್ಯೋಧನನು ದ್ರೋಣಾಚಾರ್ಯರ ಬಳಿಗೆ ಹೋಗಿ ಅವರಿಗೆ ಅಂದದ್ದು, ೨

"ಆಚಾರ್ಯರೇ, ನಿಮ್ಮ ಬುದ್ಧಿವಂತ ಶಿಷ್ಯನಾದ ದ್ರುಪದಪುತ್ರನು ವ್ಯೂಹವನ್ನು ರಚಿಸಿರುವ ಪಾಂಡವರ ಈ ಮಹಾ ಸೈನ್ಯವನ್ನು ನೋಡಿರಿ. ೩

ಇದರಲ್ಲಿ ಶೂರ ಧನುರ್ಧಾರಿಗಳಾದ, ಯುದ್ಧದಲ್ಲಿ ಭೀಮಾರ್ಜುನರಂತಿರುವ, ಯುಯುಧಾನ, ವಿರಾಟ, ಮಹಾರಥಿ ದ್ರುಪದ, ೪

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**
**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**
**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥**
**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**
**ಅನ್ಯೇಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**
**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

ಧೃಷ್ಟಕೇತು, ಚೇಕಿತಾನ, ವೀರ್ಯವಂತನಾದ ಕಾಶಿರಾಜ, ಪುರುಜಿತ್, ಕುಂತಿಭೋಜ, ನರಶ್ರೇಷ್ಠ ಶೈಬ್ಯ, ೫

ವೀರ ಯುಧಾಮನ್ಯು, ವೀರ್ಯವಂತ ಉತ್ತಮೌಜಾ, ಸುಭದ್ರೆಯ ಮಗ ಅಭಿಮನ್ಯು ಹಾಗೂ ದ್ರೌಪದಿಯ ಮಕ್ಕಳು ಇವರೆಲ್ಲರೂ ಮಹಾರಥಿಗಳೇ ಇರುವರು. ೬

ಹೇ ಬ್ರಾಹ್ಮಣಶ್ರೇಷ್ಠರೇ, ಇನ್ನು ನಮ್ಮೊಳಗೆ ವಿಶೇಷ ಮಹತ್ವದ ಸೇನಾನಾಯಕರ ಹೆಸರುಗಳನ್ನು ನಿದರ್ಶನಾರ್ಥವಾಗಿ ಹೇಳುವೆನು ಕೇಳಿರಿ. ೭

ತಾವು, ಭೀಷ್ಮ, ಕರ್ಣ, ಕೃಪ, ಸಮಿತಿಂಜಯ, ಅಶ್ವತ್ಥಾಮಾ, ವಿಕರ್ಣ, ಹಾಗೂ ಸೌಮದತ್ತಿ, ೮

ಇದಲ್ಲದೆ ನಾನಾ ಶಸ್ತ್ರವಿದ್ಯೆಗಳಲ್ಲಿ ಪ್ರವೀಣರೂ ರಣವಿದ್ಯೆಯಲ್ಲಿ ನಿಪುಣರೂ ಆದ ಅನೇಕ ಅನ್ಯ ವೀರರು ನನ್ನ ಸಲುವಾಗಿ ಜೀವದ ಹಂಗು ದೊರೆದಿರುವರು. ೯

ಭೀಷ್ಮನಿಂದ ರಕ್ಷಿಸಲ್ಪಟ್ಟ ನಮ್ಮ ಸೈನ್ಯವು ಅಪರಿಮಿತವು, ಆದರೆ ಭೀಮನಿಂದ ರಕ್ಷಿಸಲ್ಪಟ್ಟ ಪಾಂಡವ ಸೇನೆಯು ಪರಿಮಿತವಿರುವದು. ೧೦

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ |**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥**
**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ |**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥**
**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಭವತ್ ॥ ೧೩ ॥**
**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ |**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**
**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ |**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ॥೧೫॥**
**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥**

ಇನ್ನು ನೇಮಿಸಿಕೊಟ್ಟಂತೆ ಆಯಕಟ್ಟಿನ ಸ್ಥಳಗಳಲ್ಲಿ ನಿಂತು ತಾವೆಲ್ಲರೂ ಭೀಷ್ಮನನ್ನೇ ರಕ್ಷಿಸಬೇಕು." ೧೧

ಆಮೇಲೆ ಪ್ರತಾಪಶಾಲಿಯಾದ ಕುರುಶ್ರೇಷ್ಠ ಪಿತಾಮಹ ಭೀಷ್ಮನು, ದುರ್ಯೋಧನನಿಗೆ ಹರ್ಷವನ್ನುಂಟು ಮಾಡುವಂತೆ ಸಿಂಹಗರ್ಜನೆಮಾಡಿ ಶಂಖವನ್ನೂದಿದನು. ೧೨

ಕೂಡಲೇ ಶಂಖ, ಭೇರಿ, ಢೋಲು, ನಗಾರಿ, ಗೋಮುಖಾದಿ ರಣವಾದ್ಯಗಳು ಒಮ್ಮೆಲೆ ಬಾರಿಸಲಾರಂಭಿಸಿ ಅವುಗಳ ಧ್ವನಿಯು ದಶದಿಕ್ಕುಗಳಲ್ಲಿ ದುಮುದುಮಿಸಿತು. ೧೩

ಆಮೇಲೆ ಬಿಳಿಯ ಕುದುರೆಗಳು ಹೂಡಲ್ಪಟ್ಟ ಮಹಾ ರಥದಲ್ಲಿ ಕುಳಿತ ಕೃಷ್ಣಾರ್ಜುನರು ದಿವ್ಯ ಶಂಖಗಳನ್ನೂದಿದರು. ೧೪

ಕೃಷ್ಣನು ಪಾಂಚಜನ್ಯವನ್ನು, ಅರ್ಜುನನು ದೇವದತ್ತವನ್ನು, ಪ್ರಚಂಡ ಕರ್ಮಗಳನ್ನು ಮಾಡುವ ಭೀಮನು ಪೌಂಡ್ರವೆಂಬ ಮಹಾ ಶಂಖವನ್ನು, ೧೫

ಕುಂತೀಪುತ್ರನಾದ ಯುಧಿಷ್ಠಿರರಾಜನು ಅನಂತ ವಿಜಯವನ್ನು, ನಕುಲಸಹದೇವರು ಸುಘೋಷಮಣಿಪುಷ್ಪಕಗಳನ್ನು ೧೬

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ |
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ |
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್॥೧೮॥
ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ |
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥
ಅಥವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ |
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ |

ಅರ್ಜುನ ಉವಾಚ—

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯಮೇಽಚ್ಯುತ॥ ೨೧ ॥
ಯಾವದೇತಾನ್ನಿರೀಕ್ಷ್ಯೇಹಂ ಯೋದ್ಧುಕಾಮಾನವಸ್ಥಿತಾನ್ |
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ರಣಸಮುದ್ಯಮೇ ॥ ೨೨ ॥

ಮಹಾ ಧನುರ್ಧರ ಕಾಶಿರಾಜನು, ಮಹಾರಥಿ ಶಿಖಂಡಿಯು, ಧೃಷ್ಟ ದ್ಯುಮ್ನನು, ವಿರಾಟನು, ಅಪರಾಜಿತನಾದ ಸಾತ್ಯಕಿಯು, ೧೭

ದ್ರುಪದನು, ದ್ರೌಪದಿಯ ಮಕ್ಕಳು, ಮಹಾ ಬಾಹುಗಳುಳ್ಳ ಅಭಿಮನ್ಯುವು ಹೀಗೆ ಎಲ್ಲರೂ ಬೇರೆ ಬೇರೆ ಶಂಖಗಳನ್ನೂದಿದರು. ೧೮

ಆಕಾಶಪ್ರಥಿವಿಗಳನ್ನು ನಡುಗಿಸಿಬಿಡುವ ಆ ಶಂಖನಾದದಿಂದ ಕೌರವರ ಎದೆಯೊಡೆದು ನೀರಾಯಿತು. ೧೯

ರಾಜನೇ, ಆ ಮೇಲೆ ವ್ಯವಸ್ಥಿತರಾಗಿ ನಿಂತಿರುವ ಕೌರವರನ್ನು ನೋಡಿ ಕಪಿಧ್ವಜನಾದ ಅರ್ಜುನನು ಶಸ್ತ್ರಪ್ರಯೋಗವನ್ನು ಮಾಡುವ ಸಂಧಿಗೆ ಧನುಸ್ಸ್ಯವನ್ನೆತ್ತಿ, ೨೦

ಕೃಷ್ಣನಿಗೆ ಈ ವಾಕ್ಯವನ್ನು ನುಡಿದನು. **ಅರ್ಜುನನು ಅಂದದ್ದು—**
'ಕೃಷ್ಣನೇ, ನನ್ನ ರಥವನ್ನು ಎರಡೂ ಸೈನ್ಯಗಳ ನಡುವೆ ನಿಲ್ಲಿಸು, ೨೧

ಅಂದರೆ ಹೋರಾಟದ ಇಚ್ಛೆಯಿಂದ ನಿಂತಿರುವ ಈ ಜನರನ್ನು ಹಾಗೂ ಈ ಪ್ರಸ್ತುತ ರಣದಲ್ಲಿ ಯಾರ ಕೂಡ ಹೋರಾಡಬೇಕಾಗಿರುವದೆಂಬದನ್ನು ನಾನು ನಿರೀಕ್ಷಿಸುವೆನು, ೨೨

**ಯೋತ್ಸ್ಯಮಾನಾನವೇಕ್ಷೇಹಂ ಯ ಏತೇತ್ರ ಸಮಾಗತಾಃ |**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥**

**ಸಂಜಯ ಉವಾಚ—**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ |**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ॥೨೪॥**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ |**
**ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ ಕುರೂನಿತಿ ॥ ೨೫ ॥**
**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ |**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ ೨೬ ॥**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ |**
**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥ ೨೭ ॥**

ಮತ್ತು ದುಷ್ಟಬುದ್ಧಿಯಾದ ದುರ್ಯೋಧನನ ಹಿತವನ್ನು ಮಾಡಲಿಚ್ಛಿಸಿ ಇಲ್ಲಿ ಯುದ್ಧಾರ್ಥವಾಗಿ ಬಂದು ನಿಂತವರನ್ನು ನಾನು ನೋಡುವೆನು." **೨೩**

**ಸಂಜಯನು ಅಂದದ್ದು—** ಹೇ ಧೃತರಾಷ್ಟ್ರನೇ, ಅರ್ಜುನನು ಕೃಷ್ಣನಿಗೆ ಹೀಗೆ ಹೇಳಿದ ಬಳಿಕ, ರಥವನ್ನು ಎರಡೂ ಸೇನೆಗಳ ನಡುವೆ **೨೪**

ಭೀಷ್ಮದ್ರೋಣ ಮತ್ತು ಎಲ್ಲ ಅರಸರ ಎದುರಿಗೆ ನಿಲ್ಲಿಸಿ **ಕೃಷ್ಣನು ಅಂದದ್ದು—** "ಅರ್ಜುನಾ, ಬಂದೇ ಕಡೆಗೆ ಒಟ್ಟುಗೂಡಿದ ಈ **ಕೌರವರನ್ನು ನೋಡು."** **೨೫**

ಆಗ ಪಾರ್ಥನು ಅಲ್ಲಿರುವ ಹಿರಿಯರನ್ನು, ಅಜ್ಜಂದಿರನ್ನು, ಆಚಾರ್ಯರನ್ನು, ಅಣ್ಣತಮ್ಮಂದಿರನ್ನು, ಸೋದರಮಾವ, ಮಕ್ಕಳು, ಮೊಮ್ಮಕ್ಕಳನ್ನು ಹಾಗೂ ಸ್ನೇಹಿತರನ್ನು, **೨೬**

ಮಾವ ಮಿತ್ರ ಮುಂತಾದವರನ್ನು ಎರಡೂ ಸೈನ್ಯಗಳಲ್ಲಿ ನೋಡಿದನು. ಹೀಗೆ ಯುದ್ಧಕ್ಕೆ ಸಿದ್ಧರಾಗಿ ನಿಂತಿರುವವರೆಲ್ಲರೂ ತನ್ನ ಬಾಂಧವರೇ ಎಂಬುದನ್ನು ನೋಡಿ, **೨೭**

ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ |

ಅರ್ಜುನ ಉವಾಚ—

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ ||೨೮||
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ||೨೯||

ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ |
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ||೩೦||

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ |
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ||೩೧||

ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ |
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ||೩೨||

ಪರಮ ಕರುಣೆಯಿಂದ ತುಂಬಿ ಖಿನ್ನನಾಗಿ ಅರ್ಜುನನು ಅಂದದ್ದು—"ಕೃಷ್ಣಾ, ಯುದ್ಧಕ್ಕಾಗಿ ಬಂದು ನಿಂತ ಈ ನನ್ನ ಬಾಂಧವರನ್ನು ನೋಡಿ, ೨೮

ನನ್ನ ಅವಯವಗಳು ಶಿಥಿಲವಾಗಿ ನನ್ನ ಬಾಯಿಯು ಆರುತ್ತಲಿದೆ, ನನ್ನ ಶರೀರವು ನಡುಗಿ ಮೈಮೇಲೆ ಮುಳ್ಳು ಬರುತ್ತಲಿದೆ, ೨೯

ಗಾಂಡೀವವು ಕೈಯೊಳಗಿಂದ ಕಳಚಿ ಬೀಳುತ್ತಲಿದೆ, ಮೈಗೆ ಬೆಂಕಿ ಬಿದ್ದಿದೆ, ನಾನು ನಿಲ್ಲಲು ಸಹ ಸಮರ್ಥನಿಲ್ಲ. ನನ್ನ ಮನಸು ಭ್ರಮಿಷ್ಟವಾದಂತಾಗಿದೆ. ೩೦

ಕೃಷ್ಣಾ, ಇವೆಲ್ಲೋ ಅಶುಭ ಲಕ್ಷಣಗಳು ತೋರುತ್ತಲಿವೆ. ಸ್ವಜನರನ್ನು ಯುದ್ಧದಲ್ಲಿ ಸಂಹರಿಸುವದರಿಂದ ನಾನು ಯಾವ ಹಿತವನ್ನೂ ಕಾಣೆನು. ೩೧

ಕೃಷ್ಣಾ, ನನಗೆ ಜಯದ ಇಚ್ಛೆ ಇಲ್ಲ, ರಾಜ್ಯವನ್ನೂ ಸುಖವನ್ನೂ ನಾನು ಇಚ್ಛಿಸುವದಿಲ್ಲ, ನಮಗೆ ರಾಜ್ಯದಿಂದಾಗಲಿ ಭೋಗಗಳಿಂದಾಗಲಿ ಅಥವಾ ಜೀವಿತದಿಂದಾಗಲಿ ಏನು ಪ್ರಯೋಜನವು? ೩೨

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ |**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ |**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥ ೩೪ ॥**
**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ |**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ॥ ೩೫ ॥**
**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ |**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**
**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**
**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ |**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮ ॥**

ಯಾರಿಗೋಸ್ಕರ ನಾವು ರಾಜ್ಯಗಳನ್ನೂ ಭೋಗಗಳನ್ನೂ ಸುಖಗಳನ್ನೂ ಇಚ್ಛಿಸಿದೆವೋ ಅವರೇ ಜೀವದ ಹಾಗೂ ಧನದ ಆಶೆ ತೊರೆದು ಯುದ್ಧಕ್ಕೆ ನಿಂತಿರುವರು. ೩೩

ಆಚಾರ್ಯರು, ಹಿರಿಯರು, ಮಕ್ಕಳು ಹಾಗೆಯೇ ಅಜ್ಜಂದಿರು, ಸೋದರಮಾವಂದಿರು, ಮೊಮ್ಮಕ್ಕಳು, ಬೀಗರು ಹಾಗೂ ಅನ್ಯಸಂಬಂಧಿಕರು, ೩೪

ನನ್ನನ್ನು ಕೊಂದರೂ ತ್ರೈಲೋಕ್ಯರಾಜ್ಯದ ಸಲುವಾಗಿ ಸಹ ನಾನು ಅವರನ್ನು ಕೊಲ್ಲಲಿಚ್ಛಿಸುವದಿಲ್ಲ. ಅಂದಮೇಲೆ ಈ ಒಂದು ಲೋಕದ ರಾಜ್ಯದ ಪಾಡೇನು? ೩೫

ಕೃಷ್ಣಾ, ಈ ಕೌರವರನ್ನು ಕೊಂದು ನಮ್ಮ ಯಾವ ಹಿತವಾಗುವದಿದೆ! ಈ ದುಷ್ಟರನ್ನು ಕೊಲ್ಲುವದರಿಂದ ನಮ್ಮ ಪಾಲಿಗೆ ಪಾಪವೇ ಸರಿ. ೩೬

ಆದುದರಿಂದ ನಮ್ಮ ಬಾಂಧವರಾದ ಕೌರವರನ್ನು ನಾವು ಕೊಲ್ಲತಕ್ಕದ್ದಲ್ಲ. ಕೃಷ್ಣಾ, ನಮ್ಮ ಜನರನ್ನೇ ಕೊಂದು ನಾವು ಸುಖಿಯಾಗುವ ಬಗೆ ಹೇಗೆ? ೩೭

ಲೋಭಮೋಹಿತರಾಗಿ ಇವರು ಕುಲಕ್ಷಯದ ದೋಷವನ್ನೂ ಮಿತ್ರದ್ರೋಹದ ಪಾಪವನ್ನೂ ಅರಿಯದವರಾದರೂ ೩೮

ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ |
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ |
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥

ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ |
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ |
ಪತಂತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥

ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ |
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥

ಹೇ ಕೃಷ್ಣಾ, ಈ ಕುಲಕ್ಷಯದ ದೋಷವನ್ನರಿಯುವ ನಮಗೆ ಈ ಪಾಪದಿಂದ ನಿವೃತ್ತರಾಗಬೇಕೆಂಬುದು ತಿಳಿಯದೇ? ೩೯

ಕುಲಕ್ಷಯವಾಯಿತೆಂದರೆ ಸನಾತನವಾದ ಕುಲಧರ್ಮಗಳು ನಷ್ಟವಾಗುತ್ತವೆ. ಧರ್ಮವು ನಷ್ಟವಾಯಿತೆಂದರೆ ಇಡೀ ಕುಲವು ಅಧರ್ಮದಲ್ಲಿ ಮುಳುಗುತ್ತದೆ. ೪೦

ಅಧರ್ಮದ ಪ್ರಾಬಲ್ಯವಾಯಿತೆಂದರೆ ಕುಲಸ್ತ್ರೀಯರು ಕುಲಗೆಡುತ್ತಾರೆ. ಸ್ತ್ರೀಯರು ಕುಲಗೆಟ್ಟರೆಂದರೆ ವರ್ಣಸಂಕರವಾಗುತ್ತದೆ. ೪೧

ಸಂಕರವಾಯಿತೆಂದರೆ ಕುಲವೂ ಕುಲನಾಶಕರೂ ನರಕಕ್ಕೆ ಗುರಿಯಾಗುತ್ತಾರೆ. ಆ ಕುಲದ ಪಿತರರು ಸಹ ಪಿಂಡೋದಕಗಳಿಲ್ಲದೇ (ಶ್ರಾದ್ಧಾದಿ) ಪತನಹೊಂದುತ್ತಾರೆ. ೪೨

ಕುಲನಾಶಕವಾದ ವರ್ಣಸಂಕರ ಮಾಡುವಂಥ ಈ ಪಾಪಗಳಿಂದ ನಾ ಶಾಶ್ವತ ಜಾತಿಧರ್ಮಗಳೂ ಕುಲಧರ್ಮಗಳೂ ಸಂಪೂರ್ಣವಾಗಿ ನಷ್ಟ ಅ ವಾಗುತ್ತವೆ. ೪೩

ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ |
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥
ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ |
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥
ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ |
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥

ಸಂಜಯ ಉವಾಚ—

ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ |
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥

ಇತಿ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇಽರ್ಜುನವಿಷಾದಯೋಗೋ ನಾಮ ಪ್ರಥಮೋಧ್ಯಾಯಃ || ೧ ||

ಹೇ ಕೃಷ್ಣಾ, ಯಾವ ಜನರ ಕುಲಧರ್ಮಗಳು ನಷ್ಟವಾಗುವವೋ ಅವರಿಗೆ ನಿಶ್ಚಿತವಾಗಿ ನರಕ ಪ್ರಾಪ್ತಿಯಾಗುವದೆಂದು ನಾವು ಕೇಳುತ್ತ ಬಂದಿರುವೆವು. ೪೪

ಅಯ್ಯೋ, ನಾವು ರಾಜ್ಯಸುಖಲೋಭದಿಂದ ನಮ್ಮ ಬಾಂಧವರನ್ನು ಕೊಲ್ಲಲಿಕ್ಕೆ ಉದ್ಯುಕ್ತರಾಗಿ ಒಂದು ಭಯಂಕರ ಪಾಪಕರ್ಮವನ್ನೇ ಆರಂಭಿಸಿರುವೆವು. ೪೫

ಇದಕ್ಕಿಂತ, ನಿಃಶಸ್ತ್ರನಾಗಿ ವಿರೋಧಿಸದೇ ನಿಂತ ನನ್ನನ್ನು ಶಸ್ತ್ರಧಾರಿಗಳಾದ ಕೌರವರು ಕೊಂದುಬಿಟ್ಟರೆ ಹೆಚ್ಚು ಒಳಿತಾಗುವದು." ೪೬

**ಸಂಜಯನು ಅಂದದ್ದು**— ಅರ್ಜುನನು ರಣದಲ್ಲಿ ಹೀಗೆ ಅಂದು ಶೋಕದಿಂದ ವ್ಯಾಕುಲನಾಗಿ ಧನುಷ್ಯಬಾಣಗಳನ್ನೊಗೆದು ರಥದಲ್ಲಿ ಕೆಳಗೆ ಕುಳಿತುಬಿಟ್ಟನು. ೪೭

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧ ನೆಯ ಅಧ್ಯಾಯವು ಸಮಾಪ್ತವು.

# ಎರಡನೆಯ ಅಧ್ಯಾಯವು.

---

**ಸಂಜಯ ಉವಾಚ—**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ |**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

ಶ್ರೀಭಗವಾನುವಾಚ—

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ |
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥

ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ |
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥

**ಅರ್ಜುನ ಉವಾಚ—**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ |**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

**ಸಂಜಯನು ಅಂದದ್ದು**—ಆ ಪ್ರಕಾರ ಅತ್ಯಂತ ಕರುಣೆಯಿಂದ ಹಣ್ಣಾಗಿ ಕಣ್ಣೀರು ತುಂಬಿ ಖೇದಪಡುತ್ತಿರುವ ಅರ್ಜುನನಿಗೆ ಕೃಷ್ಣನು ಹೀಗೆ ಅಂದನು. ೧

**ಕೃಷ್ಣನು ಅಂದದ್ದು**—"ಪಾರ್ಥ, ಶ್ರೇಷ್ಠ ಜನರಿಗೆ ಅನುಚಿತವೂ ನರಕದಾಯಕವೂ ಅಕೀರ್ತಿಕರವೂ ಆದ ಈ ನೀಚಪ್ರವೃತ್ತಿಯು ಈ ಸಂಕಟಸಮಯದಲ್ಲಿ ನಿನಗೆ ಎಲ್ಲಿಂದ ಹುಟ್ಟಿತು? ೨

ಪಾರ್ಥ, ಹೀಗೆ ಹೇಡಿಯಾಗಬೇಡ, ಇದು ನಿನಗೆ ಶೋಭಿಸುವದಿಲ್ಲ. ಈ ಕ್ಷುದ್ರವಾದ ಮನೋದೌರ್ಬಲ್ಯವನ್ನು ಬೀಸಾಟಿ ಯುದ್ಧಕ್ಕೆ ಎದ್ದು ನಿಲ್ಲು." ೩

**ಅರ್ಜುನನು ಅಂದದ್ದು**—"ಕೃಷ್ಣನೇ, ನಾನು ಸಮರದಲ್ಲಿ ಭೀಷ್ಮದ್ರೋಣರಂತಹ ಪೂಜ್ಯರ ಮೇಲೆ ಬಾಣಗಳನ್ನು ಹೇಗೆ ಎಸೆಯಲಿ? ೪

ಗುರೂನಹತ್ವಾ ಹಿ ಮಹಾನುಭಾವಾನ್ |
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ||
ಹತ್ವಾರ್ಥಕಾಮಾಂಸ್ತು ಗುರೂನಿಹೈವ |
ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ || ೫ ||

ನ ಚೈತದ್ವಿದ್ಮಃ ಕತರನ್ನೋ ಗರೀಯೋ |
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ||
ಯಾನೇವ ಹತ್ವಾ ನ ಜಿಜೀವಿಷಾಮ |
ಸ್ತೇವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ || ೬ ||

ಕಾರ್ಪಣ್ಯ ದೋಷೋಪಹತಸ್ವಭಾವಃ |
ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ||
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ |
ಶಿಷ್ಯಸ್ತೇಹಂ ಶಾಧಿ ಮಾಂ ತ್ವಾಂ ಪ್ರಪನ್ನಂ || ೭ ||

ಮಹಾನುಭಾವರಾದ ಗುರುಗಳನ್ನು ಕೊಲ್ಲುವದಕ್ಕಿಂತ ಲೋಕದಲ್ಲಿ ತಿರಿದು ತಿನ್ನುವದು ಹೆಚ್ಚು ಶ್ರೇಯಸ್ಕರವು. ಧನಾಪೇಕ್ಷೆಯುಳ್ಳ ಈ ಗುರುಗಳನ್ನು ಕೊಂದರೆ ಇಲ್ಲಿಯೇ ಅವರ ರಕ್ತದಿಂದೊಡಗೂಡಿದ ಭೋಗಗಳನ್ನು ಭೋಗಿಸಬೇಕಾಗುವದು. ೫

ನಾವು ಗೆಲ್ಲುವದು ಅಥವಾ ಸೋಲುವದು ಇವುಗಳಲ್ಲಿ ಯಾವದು ಹೆಚ್ಚು ಒಳಿತು, ಇದೇ ನಮಗೆ ತಿಳಿಯದು. ಯಾರನ್ನು ಕೊಂದರೆ ನಾವು ಜೀವಿಸಬೇಕೆಂಬ ಇಚ್ಛೆಯೇ ಅಳಿಯುವದೋ ಆ ಕೌರವರೇ ನಮಗೆ ಎದುರಾಗಿ ನಿಂತಿದ್ದಾರೆ. ೬

ಮನೋದೌರ್ಬಲ್ಯದ ಮೂಲಕ ನನ್ನ ಸ್ವಾಭಾವಿಕ ಶಕ್ತಿಯು ನಷ್ಟವಾಗಿ ಕಿಂಕರ್ತವ್ಯಮೂಢನಾಗಿ ನಾನು ನಿನ್ನನ್ನು ಕೇಳುತ್ತಿರುವೆನು. ಕಲ್ಯಾಣಕಾರಕವಾದುದನ್ನು ನನಗೆ ನಿಃಸಂದಿಗ್ಧವಾಗಿ ಹೇಳು. ನಾನು ನಿನ್ನ ಶಿಷ್ಯನು. ನಿನಗೆ ಅನನ್ಯ ಶರಣಾಗತನು. ನಿನ್ನ ಮೊರೆಹೊಕ್ಕ ನನಗೆ ನೀನು ಮಾರ್ಗದರ್ಶಿಯಾಗು. ೭

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್ ।
ಯಚ್ಛೋಕ ಮುಚ್ಛೋಷಣಮಿನ್ದ್ರಿಯಾಣಾಂ ॥
ಅವಾಪ್ಯ ಭೂಮಾವಸಪತ್ನಮೃದ್ಧಂ ।
ರಾಜ್ಯಂ ಸುರಾಣಾಮಪಿಚಾಧಿಪತ್ಯಂ ॥ ೮ ॥

ಸಂಜಯ ಉವಾಚ—

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥

ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥

ಶ್ರೀಭಗವಾನುವಾಚ—

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥

ಈ ಭೂಮಿಯ ಸಮೃದ್ಧವಾದ, ಸ್ಪರ್ಧಾರಹಿತ ರಾಜ್ಯವು ಅಥವಾ ಸ್ವರ್ಗ ಸಾಮ್ರಾಜ್ಯವು ದೊರಕಿದರೂ ಇಂದ್ರಿಯಗಳನ್ನು ಶೋಷಿಸುತ್ತಿರುವ ಈ ಶೋಕವನ್ನು ಕಳೆಯುವ ಉಪಾಯವನ್ನು ನಾನು ಕಾಣೆನು." ೮

ಸಂಜಯನು ಅಂದದ್ದು—ಹೀಗೆ ನುಡಿದು ಪಾರ್ಥನು, ನಾನು ಯುದ್ಧ ಮಾಡುವದಿಲ್ಲವೆಂದು ಕೃಷ್ಣನಿಗೆ ಹೇಳಿ ಸುಮ್ಮನಾದನು. ೯

ಎರಡೂ ಸೈನ್ಯಗಳ ಮಧ್ಯದಲ್ಲಿ ಖಿನ್ನನಾಗಿ ನಿಂತ ಅರ್ಜುನನಿಗೆ ಕೃಷ್ಣನು ನಸುನಗುತ್ತ ಅಂದದ್ದು— ೧೦

" ಯಾರ ಬಗ್ಗೆ ಶೋಕಮಾಡತಕ್ಕದ್ದಲ್ಲವೋ ಅವರ ಬಗ್ಗೆ ನೀನು ಶೋಕಮಾಡುತ್ತಿರುವಿ, ಮತ್ತೆ ಮೇಲೆ ದೊಡ್ಡ ಪಾಂಡಿತ್ಯದ ಮಾತುಗಳನ್ನು ಹೇಳುವಿ. ಸತ್ತವರ ಬಗ್ಗೆಯಾಗಲಿ ಬದುಕಿದವರ ಬಗ್ಗೆಯಾಗಲಿ ಪಂಡಿತರು ಶೋಕಮಾಡುತ್ತಿರುವದಿಲ್ಲ. ೧೧

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ |
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃಪರಂ ॥ ೧೨ ॥

ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ |
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ |
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ |
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ |
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥

ನಾನು, ನೀನು, ಅಥವಾ ಈ ಅರಸರು ಮೊದಲು ಇದ್ದಿಲ್ಲವೆನ್ನಲಿಕ್ಕೂ ಆಗದು, ಇನ್ನು ಮುಂದೆ ನಾವು ಎಲ್ಲರೂ ಇರಲಿಕ್ಕಿಲ್ಲವೆಂದೂ ಹೇಳಲಾಗದು. ೧೨

ದೇಹಧಾರಿ ಆತ್ಮನಿಗೆ ಈ ದೇಹದಲ್ಲಿ ಹೇಗೆ ಕೌಮಾರ್ಯ, ಯೌವನ, ವೃದ್ಧಾಪ್ಯ ಎಂಬ ಅವಸ್ಥೆಗಳೋ ಹಾಗೆಯೇ ಎರಡನೇ ದೇಹದ ಪ್ರಾಪ್ತಿಯು. ಧೀರರು ಈ ವಿಷಯದಲ್ಲಿ ತಪ್ಪು ತಿಳುವಳಿಕೆ ಮಾಡಿಕೊಳ್ಳರು. ೧೩

ಅರ್ಜುನಾ, ಶೀತೋಷ್ಣ ಸುಖದುಃಖಗಳನ್ನುಂಟುಮಾಡುವ ಈ ಬಾಹ್ಯ ಇಂದ್ರಿಯಸ್ಪರ್ಶಗಳು ಉತ್ಪತ್ತಿನಾಶವುಳ್ಳವುಗಳು, ಅನಿತ್ಯವಾದವುಗಳು. ಅವುಗಳನ್ನು ನೀನು ಸಹಿಸು. ೧೪

ಪಾರ್ಥ, ಸುಖದುಃಖಗಳು ಯಾವನಿಗೆ ಸಮಾನವೋ ಆ ಧೀರ ಪುರುಷನನ್ನು ಇವು ವ್ಯಥೆಪಡಿಸಲಾರವು. ಅವನು ಅಮೃತಪದವನ್ನು ಪಡೆಯಲಿಕ್ಕೆ ಸಮರ್ಥನು. ೧೫

ತತ್ವತಃ ಇಲ್ಲದ್ದು ಅಸ್ತಿತ್ವದಲ್ಲಿ ಬರಲಾರದು. ಅಸ್ತಿತ್ವದಲ್ಲಿದ್ದದ್ದು ತತ್ವತಃ ಇಲ್ಲದಂತಾಗಲಾರದು. ತತ್ವಜ್ಞರು ಈ ಭಾವ ಅಭಾವಗಳೆರಡರ ಮೂಲವನ್ನೂ ಕಂಡಿರುವರು. ೧೬

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ |
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥
ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ |
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥
ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ |
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥

ನ ಜಾಯತೇ ಮ್ರಿಯತೇ ವಾ ಕದಾಚಿ |
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ॥
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ |
ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ |
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ ॥ ೨೧ ॥

ಯಾವುದರಿಂದ ಇದೆಲ್ಲವೂ ವಿಸ್ತರಿಸಲ್ಪಟ್ಟಿರುವದೋ ಅದು ಅವಿನಾಶಿಯೆಂದು ತಿಳಿ. ಆ ಅವ್ಯಯದ ನಾಶವನ್ನು ಯಾರೂ ಮಾಡಲಾರರು. ೧೭

ನಿತ್ಯ, ನಾಶರಹಿತ, ಅಚಿಂತ್ಯನಾದ ಶರೀರಿಯ ಈ ಶರೀರಗಳಷ್ಟೇ ನಾಶವುಳ್ಳವುಗಳು. ಆತ್ಮನು ನಾಶರಹಿತನು. ಆದುದರಿಂದ, ಅರ್ಜುನನೇ, ಯುದ್ಧ ಮಾಡು. ೧೮

ಇವನು ಅಂದರೆ ಆತ್ಮನು ಕೊಲ್ಲುವವನು, ಇವನು ಕೊಲ್ಲಲ್ಪಟ್ಟವನು ಎಂದು ತಿಳಿಯುವವರಿಬ್ಬರೂ ಇವನು ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂ ಇಲ್ಲ ಎಂಬದನ್ನು ಅರಿಯರು. ೧೯

ಇವನು ಎಂದು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ. ಒಮ್ಮೆ ದೇಹ ತಾಳಿ ಮತ್ತೆ ಇವನು ದೇಹ ತಾಳುವದಿಲ್ಲವೆಂದೂ ಇಲ್ಲ. ಇವನು ಜನ್ಮರಹಿತನು, ನಿತ್ಯನು, ಶಾಶ್ವತನು, ಸನಾತನನು, ಶರೀರವು ಕೊಲ್ಲಲ್ಪಟ್ಟರೂ ಇವನು ಕೊಲ್ಲಲ್ಪಡುವದಿಲ್ಲ. ೨೦

ಅಜ, ನಿತ್ಯ, ಅವ್ಯಯ, ಅವಿನಾಶಿಯಾದ ಆತ್ಮನನ್ನು ಅರಿತ ಪುರುಷನು, ಹೇ ಪಾರ್ಥ, ಯಾರನ್ನು ಹೇಗೆ ಹೊಡೆಯಬಲ್ಲನು, ಹೇಗೆ ಕೊಲ್ಲಬಲ್ಲನು? ೨೧

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ |
ನವಾನಿ ಗೃಹ್ಣಾತಿ ನರೋಽಪರಾಣಿ ॥
ತಥಾ ಶರೀರಾಣಿ ವಿಹಾಯ ಜೀರ್ಣಾ |
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ |
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥

ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥

ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ |
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ |
ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥

ಯಾವ ಪ್ರಕಾರವಾಗಿ ಮನುಷ್ಯನು ಜೀರ್ಣವಾದ ಉಡಿಗೆಗಳನ್ನು ಬಿಟ್ಟು ಹೊಸ ವಸ್ತ್ರಗಳನ್ನುಡುವನೋ ಹಾಗೆಯೇ ಆತ್ಮನು ಜೀರ್ಣ ಶರೀರಗಳನ್ನು ಬಿಟ್ಟು ಹೊಸದೇಹಗಳನ್ನು ಪ್ರವೇಶಿಸುವನು. ೨೨

ಶಸ್ತ್ರಗಳು ಇವನನ್ನು ಕಡಿಯಲಾರವು, ಬೆಂಕಿಯು ಸುಡಲಾರದು, ನೀರು ತೊಯಿಸಲಾರದು, ಗಾಳಿಯು ಒಣಗಿಸಲಾರದು. ೨೩

ಇವನು ಅಂದರೆ ಆತ್ಮನು ಕಡಿಯಲಿಕ್ಕೆ ಸುಡಲಿಕ್ಕೆ ತೊಯಿಸಲಿಕ್ಕೆ ಒಣಗಿಸಲಿಕ್ಕೆ ಬಾರದವನು. ಇವನು ನಿತ್ಯನು, ಸರ್ವವ್ಯಾಪಕನು, ಸ್ಥಿರನು, ಅಚಲನು, ಸನಾತನನು. ೨೪

ಇವನು ಅವ್ಯಕ್ತನು, ಅಚಿಂತ್ಯನು, ವಿಕಾರರಹಿತನು ಎಂದು ಅನ್ನುವರು. ಆದುದರಿಂದ ಇವನ ಯಥಾರ್ಥ ರೂಪವನ್ನರಿತು ನೀನು ಶೋಕ ಮಾಡತಕ್ಕದ್ದಲ್ಲ. ೨೫

ಇನ್ನು ಇವನು ನಿತ್ಯ ಹುಟ್ಟುವವನು ಹಾಗೂ ನಿತ್ಯ ಸಾಯುವವನೆಂದು ನೀನು ಬಗೆದರೂ ಇವನ ವಿಷಯಕ್ಕೆ ಶೋಕಮಾಡುವದುಚಿತವಲ್ಲ. ೨೬

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ |
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ |
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್ |
ಆಶ್ಚರ್ಯವದ್ವದತಿ ತಥೈವ ಚಾನ್ಯಃ ॥
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ |
ಶ್ರುತ್ವಾಪ್ಯೇನಂ ವೇದ ನ ಚೈವಕಶ್ಚಿತ್ ॥ ೨೯ ॥

ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ |
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥

ಹುಟ್ಟಿದವನಿಗೆ ಸಾವು, ಸತ್ತವನಿಗೆ ಹುಟ್ಟು ಕಟ್ಟಿಟ್ಟಂತೆ, ಹೀಗೆ ಇವೆರಡೂ ತಪ್ಪಿಸಲಿಕ್ಕೆ ಬಾರವಾದ್ದರಿಂದ ನೀನು ಶೋಕಮಾಡುವದು ಯೋಗ್ಯವಲ್ಲ. ೨೭

ಪಾರ್ಥ, ಭೂತಗಳು ಆರಂಭದಲ್ಲಿಯೂ ಅವ್ಯಕ್ತ, ಅಂತ್ಯದಲ್ಲಿಯೂ ಅವ್ಯಕ್ತ, ಮಧ್ಯದಲ್ಲಿ ಮಾತ್ರ ವ್ಯಕ್ತವಾದವುಗಳು. ಆದುದರಿಂದ ಇವುಗಳ ಬಗ್ಗೆ ಶೋಕವೇಕೆ? ೨೮

ಆತ್ಮನನ್ನು ಕೆಲವರು ಆಶ್ಚರ್ಯವೆಂದು ನೋಡುತ್ತಾರೆ, ಅದರಂತೆ ಆಶ್ಚರ್ಯವೆಂದು ಇವನ ಬಗ್ಗೆ ನುಡಿಯುತ್ತಾರೆ, ಅನ್ಯರು ಕೆಲವರು ಆಶ್ಚರ್ಯವೆಂದು ಇವನ ಬಗ್ಗೆ ಹೇಳಿದ್ದನ್ನು ಕೇಳುತ್ತಾರೆ, ಕೇಳಿದರೂ ಇವನು ಯಾರೆಂಬದನ್ನು ಯಾರೂ ಅರಿಯುವದಿಲ್ಲ. ೨೯

ಪಾರ್ಥ, ಎಲ್ಲ ದೇಹಗಳಲ್ಲಿರುವ ಆತ್ಮನು ಯಾವಾಗಲೂ ಸಾವಿಲ್ಲದವನು, ಆದುದರಿಂದ ಎಲ್ಲ ಭೂತಗಳ ಬಗ್ಗೆ ನೀನು ಶೋಕ ಮಾಡತಕ್ಕದ್ದಲ್ಲ. ೩೦

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ |**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ||೩೧||**

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ |**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ || ೩೨ ||**

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ |**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ || ೩೩ ||**

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಂ |**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ || ೩೪ ||**

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ |**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ||೩೫||**

ಸ್ವಧರ್ಮದ ಕಡೆಗಾದರೂ ದೃಷ್ಟಿಯನ್ನಿಟ್ಟು ನೀನು ಹಿಂಜರಿಯಬಾರದು. ಕ್ಷತ್ರಿಯನಿಗೆ ಧರ್ಮಾನುಕೂಲವಾದ ಯುದ್ಧಕ್ಕಿಂತ ಹೆಚ್ಚು ಕಲ್ಯಾಣಕರವಾದದ್ದು ಏನೂ ಇಲ್ಲ. **೩೧**

ಪಾರ್ಥ, ಸುದೈವಿಗಳಾದ ಕ್ಷತ್ರಿಯರಿಗಷ್ಟೇ ಹೀಗೆ ತನ್ನಷ್ಟಕ್ಕೆ ತಾನೇ ತೆರೆದ ಸ್ವರ್ಗದ ಬಾಗಿಲಂತಿರುವ ಈ ತರದ ಯುದ್ಧಪ್ರಸಂಗವು ಪ್ರಾಪ್ತವಾಗುವದು. **೩೨**

ಇನ್ನು ಈ ಧರ್ಮೋಚಿತ ಯುದ್ಧವನ್ನು ನೀನು ಮಾಡದೇ ಹೋದರೆ ಸ್ವಧರ್ಮ ಹಾಗೂ ಕೀರ್ತಿಯನ್ನು ತೊರೆದವನಾಗಿ ಪಾಪಕ್ಕೆ ಗುರಿಯಾಗುವಿ. **೩೩**

ಇದಲ್ಲದೆ ಎಲ್ಲರೂ ನಿನ್ನ ಅಪಕೀರ್ತಿಯನ್ನು ಅಖಂಡವಾಗಿ ನಾರುವರು. ಅಪಕೀರ್ತಿಯು ಸಂಭಾವಿತನಿಗೆ ಸಾವಿಗಿಂತ ಹೆಚ್ಚು. **೩೪**

ರಣದಿಂದ ನೀನು ಅಂಜಿ ಹಿಂತಿರುಗಿದೆಂದು ಮಹಾರಥಿಗಳೆಲ್ಲರೂ ತಿಳಿಯುವರು. ಯಾರಿಂದ ನೀನು ಈಗ ಮಾನ್ಯತೆಯನ್ನು ಪಡೆದಿರುವಿಯೋ ಅವರೇ ನಿನ್ನನ್ನು ಕಡಿಮೆ ಯೋಗ್ಯತೆಯವನೆಂದೆಣಿಸುವರು. **೩೫**

ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ |
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಂ ॥ ೩೬ ॥

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ |
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ |
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥

ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು |
ಬುದ್ಧ್ಯಾಯುಕ್ತೋಯಯಾಪಾರ್ಥಕರ್ಮಬಂಧಂಪ್ರಹಾಸ್ಯಸಿ॥೩೯॥

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ |
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್॥ ೪೦ ॥

ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ಹೀಯಾಳಿಸುತ್ತ ಆಡಬಾರದಂಥ ಅನೇಕ ಮಾತುಗಳನ್ನಾಡುವರು. ಅದಕ್ಕಿಂತ ಹೆಚ್ಚು ದುಃಖದಾಯಕವಾದದ್ದು ಇನ್ನಾವುದು ? ೩೬

ನೀನು ಸತ್ತರೆ ಸ್ವರ್ಗ, ಗೆದ್ದರೆ ಭೂಮಿಯ ಉಪಭೋಗ. ಆದುದರಿಂದ ಹೇ ಅರ್ಜುನಾ, ಹೋರಾಡುವ ನಿಶ್ಚಯಮಾಡಿ ಎದ್ದೇಳು. ೩೭

ಸುಖದುಃಖ, ಲಾಭಹಾನಿ, ಜಯಾಪಜಯ, ಇವುಗಳನ್ನು ಸಮವೆಂದು ಭಾವಿಸಿ ಆಮೇಲೆ ಯುದ್ಧಕ್ಕೆ ಪ್ರವೃತ್ತನಾಗು. ಅಂದರೆ ನಿನಗೆ ಪಾಪವು ತಗಲಲಾರದು. ೩೮

ಹೀಗೆ ಸಾಂಖ್ಯಶಾಸ್ತ್ರಕ್ಕೆ ಅನುಸರಿಸಿ ನಿನಗೆ ಜ್ಞಾನವನ್ನು ಹೇಳಿದೆನು. ಇನ್ನು ಯಾವ ಜ್ಞಾನವನ್ನಾಶ್ರಯಿಸಲಾಗಿ ಕರ್ಮವು ಬಂಧಕವಾಗಲಾರದೋ ಆ ಬುದ್ಧಿಯೋಗವನ್ನು ಹೇಳುವೆನು ಕೇಳು. ೩೯

ಈ ಯೋಗಮಾರ್ಗದಲ್ಲಿ ಒಮ್ಮೆ ಆರಂಭಿಸಿದ ಕ್ರಮವು ನಷ್ಟವಾಗಲಾರದು, ಯಾವ ತೊಡರೂ ಉಂಟಾಗದು. ಈ ಧರ್ಮದ ಅಲ್ಪಾಚರಣೆಯು ಸಹ ಮಹದ್ಭಯದಿಂದ ಮನುಷ್ಯನನ್ನು ರಕ್ಷಿಸುವದು. ೪೦

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।
ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ ॥ ೪೧॥
ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨ ॥
ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥
ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥
ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್॥ ೪೫ ॥

ಪಾರ್ಥಾ, ಈ ಯೋಗದಲ್ಲಿ ನಿಶ್ಚಯಶಕ್ತಿಯುಳ್ಳ ಬುದ್ಧಿಯು ಏಕಾಗ್ರವಿರಬೇಕು. ನಿಶ್ಚಯವಿಲ್ಲದವರ ಬುದ್ಧಿಯು ಬಗೆಬಗೆಯಾಗಿ ಹರಿದಾಡುವದು ಮತ್ತು ಅನಂತ ವಿಚಾರಗಳುಳ್ಳದ್ದಾಗುವದು. ೪೧

ಪಾರ್ಥಾ, ವೇದದ ಕರ್ಮಕಾಂಡದಲ್ಲಿ ಮಗ್ನರಾದ ಹಾಗೂ ಅದಕ್ಕೂ ಹೆಚ್ಚಿನದೇನೂ ಇಲ್ಲವೆಂದು ವಾದಿಸುವ ಮೂರ್ಖರು ಆಡುವ ಬಣ್ಣದ ಭಾಷೆಯೇನಂದರೆ, ೪೨

" ನಾನಾಪ್ರಕಾರದ ಕರ್ಮಗಳಿಂದ ಹೊಸ ಜನ್ಮಗಳೆಂಬ ಫಲವು ದೊರೆತು ಸುಖಭೋಗ ಹಾಗೂ ವೈಭವದಿಂದ ಕೂಡಿದ ಸ್ವರ್ಗಗತಿಯು ದೊರೆಯುವದು " ಹೀಗೆ ಅನ್ನುವವರು ಸ್ವರ್ಗದ ಬೆನ್ನುಹತ್ತಿದ ಕಾಮಪೂರ್ಣ ಜನರು. ೪೩

ಈ ವಿಚಾರಗಳಿಂದ ಅವರ ಮನಸ್ಸು ಅತ್ತಿತ್ತ ಎಳೆಯಲ್ಪಟ್ಟು ಭೋಗೈಶ್ವರ್ಯಗಳಲ್ಲಿ ಆಸಕ್ತವಾಗಿ ಅವರ ನಿಶ್ಚಯಮಾಡಲು ಸಮರ್ಥವಿದ್ದ ಬುದ್ಧಿಶಕ್ತಿಯು ಸಮಾಧಿಯನ್ನು ಪಡೆಯಲಿಕ್ಕೆ ಅಸಮರ್ಥವಾಗುವದು. ೪೪

ವೇದಗಳು ತ್ರಿಗುಣಾತ್ಮಕ ವಿಷಯಗಳಿಂದ ತುಂಬಿರುವವು. ನೀನು ತ್ರಿಗುಣಾತೀತನೂ, ದ್ವಂದ್ವರಹಿತನೂ, ಸತ್ವಗುಣದಲ್ಲಿ ಪ್ರತಿಷ್ಠಿತನೂ, ಯೋಗಕ್ಷೇಮಗಳ ಚಿಂತೆಯನ್ನು ತೊರೆದವನೂ, ಆತ್ಮವಂತನೂ ಆಗು. ೪೫

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ |**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**
**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |**
**ಮಾಕರ್ಮಫಲಹೇತುರ್ಭೂರ್ಮಾತೇಸಂಗೋಽಸ್ತ್ವಕರ್ಮಣಿ ॥೪೭॥**
**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ |**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥**
**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ |**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**
**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ |**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ॥೫೦॥**

ಎಲ್ಲ ಕಡೆಗೂ ನೀರು ತುಂಬಿರುವಾಗ ಬಾವಿಯ ಪ್ರಯೋಜನವು ಎಷ್ಟೋ ಅಷ್ಟೇ ಬ್ರಹ್ಮಜ್ಞಾನಿಯಾದವನಿಗೆ ವೇದಗಳ ಪ್ರಯೋಜನವು. ೪೬

ಕರ್ಮಮಾಡುವ ಪೂರ್ತಿಯೇ ನಿನ್ನ ಅಧಿಕಾರವಿರುವದು. ಫಲಗಳ ಅಧಿಕಾರಿಯು ನೀನೆಂದಿಗೂ ಅಲ್ಲ. ಕರ್ಮಫಲದ ಆಶೆಯುಳ್ಳವನಾಗಬೇಡ. ಕರ್ಮಮಾಡದಿರುವಲ್ಲಿ ಪ್ರೀತಿಯುಳ್ಳವನಾಗಬೇಡ, ಅಂದರೆ ಕರ್ಮತ್ಯಾಗಮಾಡಬೇಡ. ೪೭

ಪಾರ್ಥ, ಆಸಕ್ತಿಯನ್ನು ಬಿಟ್ಟು ಯೋಗಸ್ಥನಾಗಿ ಸಿದ್ಧಿ ಅಸಿದ್ಧಿಗಳನ್ನು ಸಮವೆಂದೆಣಿಸಿ ಕರ್ಮಗಳನ್ನಾಚರಿಸು. ಬುದ್ಧಿಯ ಸಮತ್ವಕ್ಕೆ ಯೋಗವೆನ್ನುವರು. ೪೮

ಬುದ್ಧಿಯ ಸಮತ್ವರೂಪಯೋಗಕ್ಕಿಂತಲೂ ಕೇವಲ ಕರ್ಮವೆಂಬುದು ಹೀನವಾದದ್ದು, ಆದುದರಿಂದ ಸಮಬುದ್ಧಿಗೆ ಶರಣಾಗತನಾಗು (ಸಮಬುದ್ಧಿಯನ್ನು ಪಡೆ). ಫಲಾಶೆಯುಳ್ಳವರು ಹೀನರು. ೪೯

ಸಾಮ್ಯಬುದ್ಧಿಯುಳ್ಳವನು ಈ ಲೋಕದಲ್ಲಿ ಪಾಪಪುಣ್ಯಗಳನ್ನು ದಾಟುತ್ತಾನೆ ಅಂದರೆ ಅತೀತನಾಗುತ್ತಾನೆ. ಆದುದರಿಂದ ಯೋಗವನ್ನವಲಂಬಿಸು. ಕರ್ಮಮಾಡಿ ಅಲಿಪ್ತನಿರುವ ಕೌಶಲ್ಯವೇ ಯೋಗವೆನಿಸುವದು. ೫೦

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ |
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ॥ ೫೧ ॥
ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ |
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥
ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ |
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥

ಅರ್ಜುನ ಉವಾಚ—

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ |
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ॥ ೫೪ ॥

ಶ್ರೀಭಗವಾನುವಾಚ—

ಪ್ರಜಹಾತಿ ಯದಾ ಕಾಮಾನ್ಸರ್ವಾನ್ ಪಾರ್ಥ ಮನೋಗತಾನ್ |
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥

ಜ್ಞಾನಿಗಳಾದ ಸಾಮ್ಯಬುದ್ಧಿಯ ಜನರು ಕರ್ಮಫಲವನ್ನು ತೊರೆದು ಜನ್ಮಬಂಧದಿಂದ ಮುಕ್ತರಾಗಿ ಶೋಕರಹಿತಪದವನ್ನು ಪಡೆಯುತ್ತಾರೆ. ೫೧

ಪಾರ್ಥ, ನಿನ್ನ ಬುದ್ಧಿಯು ಈ ಮೋಹದ ರಾಡಿಯನ್ನು ದಾಟಿತೆಂದರೆ ಕೇಳತಕ್ಕ ಹಾಗೂ ಕೇಳಿದ ಎಲ್ಲ ವಿಷಯಗಳು ನಿನಗೆ ಬೇಸರವನ್ನುಂಟು ಮಾಡುವವು. ೫೨

ವೇದವಚನಗಳಿಂದ ಗಾಬರಿಯಾದ ನಿನ್ನ ಬುದ್ಧಿಯು ನಿಶ್ಚಲವಾಗಿ ಸಮಾಧಿಯಲ್ಲಿ ಸ್ಥಿರವಾಯಿತೆಂದರೆ ನಿನಗೆ ಯೋಗಸ್ಥಿತಿಯು ಪ್ರಾಪ್ತವಾಗುವದು. ೫೩

**ಅರ್ಜುನನು ಅಂದದ್ದು**—ಸ್ಥಿತಪ್ರಜ್ಞನೆಂದೂ ಸಮಾಧಿಸ್ಥನೆಂದೂ ಯಾರಿಗೆ ಅನ್ನಬೇಕು? ಕೃಷ್ಣಾ, ಸ್ಥಿರಬುದ್ಧಿಯುಳ್ಳವನು ಹೇಗೆ ಮಾತಾಡುವನು, ಹೇಗೆ ಇರುವನು, ಹೇಗೆ ವರ್ತಿಸುವನು? ೫೪

**ಶ್ರೀಕೃಷ್ಣನು ಅಂದದ್ದು**—ಪಾರ್ಥ, ಮನುಷ್ಯನು ಮನದಲ್ಲಿ ಮನೆಮಾಡಿದ ಕಾಮನೆಗಳನ್ನು ಬಿಟ್ಟು ಆತ್ಮನಿಂದ ಆತ್ಮನಲ್ಲಿಯೇ ಸಂತುಷ್ಟನಾದನೆಂದರೆ ಅವನು ಸ್ಥಿರಜ್ಞಾನವುಳ್ಳವನೆನಿಸುವನು. ೫೫

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥

ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥

ಯತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥

ದುಃಖದಿಂದ ಖಿನ್ನನಾಗದಿರುವವನು, ಸುಖದಲ್ಲಿ ಆಸಕ್ತಿ ಇಲ್ಲದಿರುವವನು, ಅನುರಾಗ ಭಯ ಕ್ರೋಧಗಳನ್ನು ತೊರೆದವನು, ಸ್ಥಿರಬುದ್ಧಿಯುವನೆಂದೆನಿಸುವನು. ೫೬

ಯಾವನು ಎಲ್ಲವಿಷಯಗಳಲ್ಲಿಯೂ ಅನಾಸಕ್ತನೋ ಯದೃಚ್ಛೆಯಿಂದೊದಗಿದ ಶುಭಾಶುಭಗಳ ವಿಷಯಕ್ಕೆ ಯಾವನು ಆನಂದದ್ವೇಷರಹಿತನೋ ಅವನು ಸ್ಥಿರಬುದ್ಧಿಯುಳ್ಳವನು. ೫೭

ಆಮೆಯು ತನ್ನ ಎಲ್ಲ ಅವಯವಗಳನ್ನು ಒಳಗೆ ಸೇದಿಕೊಳ್ಳುವಂತೆ ಯಾವನು ತನ್ನ ಇಂದ್ರಿಯಗಳನ್ನು ವಿಷಯಗಳೆಡೆಗೆ ಹೋಗದಂತೆ ಬಿಗಿಹಿಡಿಯುವನೋ ಅವನು ಸ್ಥಿರಬುದ್ಧಿಯುಳ್ಳವನು. ೫೮

ನಿರಾಹಾರಿಯು ಭೋಗಶಕ್ತಿವಿಹೀನನಾದುದರಿಂದ ವಿಷಯಗಳು ಅವನಿಂದ ದೂರ ಹೋಗುತ್ತವೆ. ಇಂದ್ರಿಯಾತೀತನಾದ ಪರಮಾತ್ಮನ ದರ್ಶನವಾಯಿತೆಂದರೆ ವಿಷಯಗಳಲ್ಲಿಯ ರುಚಿಯೇ ಮಾಯವಾಗುತ್ತದೆ. ೫೯

ಪಾರ್ಥ, ವಿದ್ವಾಂಸನು ಎಷ್ಟು ಯತ್ನಿಸಿದರೂ ಚಂಚಲ ಇಂದ್ರಿಯಗಳು ಅವನ ಮನಸ್ಸನ್ನು ಬಲಾತ್ಕಾರದಿಂದ ಅಡ್ಡಹಾದಿಗೆ ಒಯ್ಯುತ್ತವೆ. ೬೦

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ |
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೬೧ ||

ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ |
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ || ೬೨ ||

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ |
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ || ೬೩ ||

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ |
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ || ೬೪ ||

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ |
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ || ೬೫ ||

ಅವುಗಳೆಲ್ಲವನ್ನು ಸಂಯಮಿಸಿ ಯಾವನು ನನ್ನಲ್ಲಿ ನಿಷ್ಠೆಯುಳ್ಳವನಾಗುವನೋ ಇಂದ್ರಿಯಗಳು ಯಾವನ ವಶದಲ್ಲಿರುವವೋ ಅವನ ಬುದ್ಧಿಯೇ ಸ್ಥಿರವು. ೬೧

ವಿಷಯಗಳನ್ನು ಧ್ಯಾನಿಸುವವನಿಗೆ ವಿಷಯಾಸಕ್ತಿವುಂಟಾಗುತ್ತದೆ. ಆಸಕ್ತಿಯಿಂದ ಕಾಮವು ಹುಟ್ಟುತ್ತದೆ. ಅದು ತಡೆಯಲ್ಪಟ್ಟರೆ ಕ್ರೋಧವು ಉತ್ಪನ್ನವಾಗುತ್ತದೆ. ೬೨

ಕ್ರೋಧದಿಂದ ಎಚ್ಚರ ತಪ್ಪಿ ಸ್ಮರಣ ಶಕ್ತಿಯು ಹಾರಿಹೋಗುತ್ತದೆ. ಆದರಿಂದ ಬುದ್ಧಿ ನಾಶವಾಗುತ್ತದೆ. ಬುದ್ಧಿ ನಾಶವಾಯಿತೆಂದರೆ ಅವನು ಕೇಡಿಗೀಡಾಗುತ್ತಾನೆ. ೬೩

ತನ್ನ ಅಂತಃಕರಣವು ತನಗೆ ಅಧೀನವಿದ್ದವನು ರಾಗದ್ವೇಷರಹಿತನಾಗಿ ತನ್ನ ವಶದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು ಸೇವಿಸುತ್ತ ಮನಃಪ್ರಸಾದವನ್ನು ಹೊಂದುತ್ತಾನೆ. ೬೪

ಚಿತ್ತವು ಪ್ರಸನ್ನವಾಯಿತೆಂದರೆ ಎಲ್ಲ ದುಃಖಗಳ ನಾಶವಾಗುತ್ತದೆ. ಪ್ರಸನ್ನಚಿತ್ತವಿದ್ದವನ ಬುದ್ಧಿಯು ತೀವ್ರ ಸ್ಥಿರವಾಗುತ್ತದೆ. ೬೫

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ ॥ ೬೬ ॥
ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ |
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥
ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ |
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥
ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥

ಆಪೂರ್ಯಮಾಣಮಚಲಪ್ರತಿಷ್ಠಂ |
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ॥
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ |
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥

ಬುದ್ಧಿಯು ಸ್ಥಿರವಿಲ್ಲದವನಿಗೆ ಜ್ಞಾನವಾಗದು, ಧ್ಯಾನವು ಸಾಧಿಸದು. ಧ್ಯಾನವಿಲ್ಲದವನಿಗೆ ಶಾಂತಿಯು ದೊರಕದು. ಅಶಾಂತನಿಗೆ ಸುಖವೆಲ್ಲಿಯದು? ೬೬

ಮನಸ್ಸು ಚಂಚಲ ಇಂದ್ರಿಯಗಳ ಬೆನ್ನು ಹಿಂದೆ ಹರಿಯುತ್ತಿತೆಂದರೆ ಸಮುದ್ರದಲ್ಲಿ ಬಿರುಗಾಳಿಯು ನಾವನ್ನು ಎಳೆದೊಯ್ಯುವಂತೆ ಆ ಮನಸು ಮನುಷ್ಯನ ಬುದ್ಧಿಯನ್ನು ಎಳೆದೊಯ್ಯುವದು. ೬೭

ಆದುದರಿಂದ ಪಾರ್ಥ, ಯಾವನ ಇಂದ್ರಿಯಗಳು ವಿಷಯಗಳಿಂದ ಸರ್ವಥಾ ನಿಗ್ರಹಿಸಲ್ಪಟ್ಟಿರುವವೋ ಅವನ ಬುದ್ಧಿಯೇ ಸ್ಥಿರವು. ೬೮

ಎಲ್ಲ ಭೂತಮಾತ್ರಗಳ ಇರುಳು ಸಂಯಮಿಗೆ ಹಗಲು ಇದ್ದಂತೆ, ಎಲ್ಲ ಭೂತಮಾತ್ರಗಳು ಎಚ್ಚರಿರುವ ಹಗಲು ಜ್ಞಾನಿಯಾದ ಮುನಿಗೆ ಇರುಳು ಇದ್ದಂತೆ. ೬೯

ಎಲ್ಲ ಕಡೆಯಿಂದ ತುಂಬಲ್ಪಡುತ್ತಿದ್ದರೂ ಅಚಲವೂ ಸ್ಥಿರವೂ ಇರುವ ಸಮುದ್ರವನ್ನು ಎಲ್ಲ ಜಲಪ್ರವಾಹಗಳು ಬಂದು ಸೇರುವಂತೆ ಎಲ್ಲ ಕಾಮನೆಗಳು ಬಂದು ದುಮುಕಿದರೂ ಯಾವನ ಮನವು ಸ್ಥಿರವಿರುವದೋ ಅವನೇ ಶಾಂತಿಯನ್ನು ಪಡೆಯುತ್ತಾನೆ. ಕಾಮನೆಗಳನ್ನು ಕಾಮಿಸುವವನು ಶಾಂತಿಯನ್ನು ಹೊಂದಲಾರನು. ೭೦

ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥
ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಸಾಂಖ್ಯಯೋಗೋ ನಾಮ
ದ್ವಿತೀಯೋಧ್ಯಾಯಃ

ಯಾವನು ಎಲ್ಲ ಕಾಮನೆಗಳನ್ನು ಬಿಟ್ಟು ಸಂಸಾರದಲ್ಲಿ ಸಂಚರಿಸುವನೋ ಯಾವನು ನಿಸ್ಪೃಹನು, ನಿರ್ಮಮನು, ಮತ್ತು ನಿರಹಂಕಾರಿಯೋ ಅವನು ಶಾಂತಿಯನ್ನು ಪಡೆಯುವನು. ೭೧

ಪಾರ್ಥ, ಇದೇ ಬ್ರಾಹ್ಮೀಸ್ಥಿತಿಯು. ಒಮ್ಮೆ ಈ ಸ್ಥಿತಿಯು ಪ್ರಾಪ್ತವಾಯಿತೆಂದರೆ ಮನುಷ್ಯನು ಮೋಹಕ್ಕೆ ಒಳಗಾಗನು. ಅಂತಕಾಲದಲ್ಲಿ ಸಹ ಈ ಸ್ಥಿತಿಯಲ್ಲಿರುವವನು ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ. ೭೨

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೨ ನೆಯ ಅಧ್ಯಾಯವು ಸಮಾಪ್ತವು.

# ಮೂರನೆಯ ಅಧ್ಯಾಯವು.

ಅರ್ಜುನ ಉವಾಚ—

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ |
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ‖ ೧ ‖
ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ |
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ‖ ೨ ‖

ಶ್ರೀಭಗವಾನುವಾಚ—

ಲೋಕೇಽಸ್ಮಿನ್ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ |
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ‖ ೩ ‖
ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ |
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ‖ ೪ ‖

**ಅರ್ಜುನನು ಅಂದದ್ದು—** ಕರ್ಮಕ್ಕಿಂತಲೂ ಸ್ಥಿರಬುದ್ಧಿಯೇ ಶ್ರೇಷ್ಠವಾದದ್ದೆಂದು ನಿನ್ನ ಮತವಿದ್ದರೆ, ಹೇ ಕೃಷ್ಣಾ, ನನ್ನನ್ನು ಈ ಘೋರ ಕರ್ಮದಲ್ಲಿ ಯಾಕೆ ಪ್ರವರ್ತಿಸುವಿ? ೧

ನಿನ್ನ ಸಂದಿಗ್ಧವಚನದಿಂದ ನನ್ನ ಬುದ್ಧಿಯು ಗೊಂದಲದಲ್ಲಿ ಬೀಳುವದು. ಆದುದರಿಂದ ನನಗೆ ಶ್ರೇಯಸ್ಸು ದೊರಕುವಂತೆ ಒಂದೇ ಮಾತನ್ನು ನಿಶ್ಚಯಿಸಿ ಹೇಳು. ೨

**ಕೃಷ್ಣನು ಅಂದದ್ದು—** ಎಲೈ ನಿಷ್ಪಾಪನೇ, ಜ್ಞಾನಯೋಗವೆಂಬ ಸಾಂಖ್ಯರ ಮಾರ್ಗ, ಕರ್ಮಯೋಗವೆಂಬ ಯೋಗಿಗಳ ಮಾರ್ಗ, ಹೀಗೆ ಎರಡು ಬಗೆಯ ಮುಕ್ತಿಮಾರ್ಗಗಳು ಈ ಲೋಕದಲ್ಲಿರುವವೆಂದು ನಾನು ಮೊದಲು ಹೇಳಿರುವೆನು. ೩

ಕರ್ಮಗಳ ಕೇವಲ ಅನಾರಂಭದಿಂದ ನೈಷ್ಕರ್ಮ್ಯ ಸಿದ್ಧಿಯು ದೊರೆಯತಕ್ಕುದಲ್ಲ ಮತ್ತು ಕೇವಲ ಸನ್ಯಾಸದಿಂದಾದರೂ ಸಿದ್ಧಿಯು ಪ್ರಾಪ್ತವಾಗುವದಿಲ್ಲ. ೪

**ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ |**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ |**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ |**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ |**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥**

ಯಾವನೂ ಒಂದು ಕ್ಷಣಹೊತ್ತು ಸಹ ಕರ್ಮರಹಿತನಿರಲಾರನು. ಪ್ರಕೃತಿವಶರಾದ ಎಲ್ಲರಿಂದಲೂ ಪ್ರಕೃತಿಗುಣಗಳು ಕರ್ಮವನ್ನು ಮಾಡಿಸುವವು. ೫

ಕರ್ಮೇಂದ್ರಿಯಗಳನ್ನು ಬಿಗಿ ಹಿಡಿದು ಮನಸ್ಸಿನಲ್ಲಿ ವಿಷಯಗಳನ್ನು ಸ್ಮರಿಸುತ್ತಿರುವ ಮೂಢನು ಮಿಥ್ಯಾಚಾರಿಯೆನಿಸುವನು. ೬

ಆದರೆ ಅರ್ಜುನಾ, ಮನಸ್ಸಿನಿಂದ ಇಂದ್ರಿಯಗಳನ್ನು ನಿಯಮಿಸಿ ಅನಾಸಕ್ತನಾಗಿ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನಾರಂಭಿಸುವವನು ಶ್ರೇಷ್ಠನು. ೭

ಕರ್ತವ್ಯ ಕರ್ಮವನ್ನು ಮಾಡು. ಕರ್ಮವು ಅಕರ್ಮಕ್ಕಿಂತಲೂ ಪ್ರಶಸ್ತವಾದದ್ದು. ಕರ್ಮವನ್ನು ಮಾಡದಿದ್ದರೆ ಶರೀರಪೋಷಣವಾಗುವದು ಸಹ ಅಶಕ್ಯವು. ೮

ಯಜ್ಞಾರ್ಥ ಮಾಡಲ್ಪಡುವ ಕರ್ಮವನ್ನುಳಿದು ಮಿಕ್ಕ ಕರ್ಮವು ಬಂಧಕವು. ಕೌಂತೇಯನೇ, ಅನಾಸಕ್ತನಾಗಿ ಯಜ್ಞಾರ್ಥ ಕರ್ಮವನ್ನಾಚರಿಸು. ೯

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥

ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥

ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ ೧೩॥

ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥

ಯಜ್ಞದೊಡನೆ ಪ್ರಜೆಗಳನ್ನು ಸೃಜಿಸಿ ಪೂರ್ವದಲ್ಲಿ ಪ್ರಜಾಪತಿಯು ಅಂದದ್ದು, "ಇದರಿಂದ ನೀವು ವೃದ್ಧಿಹೊಂದಿರಿ. ಇದು ನಿಮ್ಮ ಕಾಮಧೇನುವು. ೧೦

ಇದರಿಂದ ನೀವು ದೇವತೆಗಳನ್ನಾರಾಧಿಸಿರಿ, ದೇವತೆಗಳು ನಿಮ್ಮನ್ನು ಸಮೃದ್ಧಮಾಡಲಿ. ಹೀಗೆ ಪರಸ್ಪರರನ್ನು ತೃಪ್ತಿಬಡಿಸುತ್ತ ನೀವು ಹೆಚ್ಚಿನ ಶ್ರೇಯಸ್ಸನ್ನು ಪಡೆಯಿರಿ. ೧೧

ಯಜ್ಞ ಮುಖಾಂತರ ಆರಾಧಿಸಲ್ಪಟ್ಟ ದೇವತೆಗಳು ನಿಮಗೆ ಇಷ್ಟಭೋಗಗಳನ್ನು ಕೊಡುವರು. ಅವರು ಕೊಟ್ಟ ಭೋಗವಸ್ತುಗಳನ್ನು ಅವರಿಗೆ ಅರ್ಪಿಸದೇ ಯಾವನು ತಾನೇ ಭೋಗಿಸುವನೋ ಅವನು ಕಳ್ಳನೇ ಸರಿ." ೧೨

ಯಜ್ಞಮಾಡಿ ಹೆಚ್ಚಾಗಿ ಉಳಿದದ್ದನ್ನು ಭೋಗಿಸುವವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ. ಕೇವಲ ಸ್ವಂತದ ಸಲುವಾಗಿ ಅಡಿಗೆ ಮಾಡುವ ಪಾಪಿಗಳು ಪಾಪವನ್ನೇ ಭಕ್ಷಿಸುತ್ತಾರೆ. ೧೩

ಅನ್ನದಿಂದ ಭೂತಗಳು ಹುಟ್ಟುವವು. ಮಳೆಯಿಂದ ಅನ್ನವು ಬೆಳೆಯುವದು. ಯಜ್ಞದಿಂದ ಮಳೆ ಬೀಳುವದು. ಯಜ್ಞವು ಕರ್ಮದಿಂದ ಸಿದ್ಧಿಹೊಂದುವದು. ೧೪

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫ ॥

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬ ॥

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥

ಕರ್ಮವು ಬ್ರಹ್ಮನಿಂದ ಹುಟ್ಟುವದು. ಬ್ರಹ್ಮನು ಅಕ್ಷರದೊಳಗಿಂದ ಉದ್ಭವಿಸುವನು. ಆದುದರಿಂದ ಸರ್ವವ್ಯಾಪಕ ಬ್ರಹ್ಮನು ಯಜ್ಞದಲ್ಲಿ ಸದಾ ಅಧಿಷ್ಠಿತನಿರುವನು. ೧೫

ಈ ಪ್ರಕಾರ ನಡೆಯುತ್ತಿರುವ ಯಜ್ಞಚಕ್ರವನ್ನು ಇಲ್ಲಿ ಮುಂದೆ ಸಾಗಿಸದಿರುವವನ ಜೀವನವು ಪಾಪರೂಪವು. ಪಾರ್ಥಾ, ಕೇವಲ ಇಂದ್ರಿಯ ಸುಖಗಳಲ್ಲಿ ಸಿಲುಕಿಬಿದ್ದು ಅಂಥವನು ವ್ಯರ್ಥ ಜೀವಿಸುವನು. ೧೬

ಆದರೆ ಯಾವನು ಆತ್ಮರತನೋ, ಆತ್ಮತೃಪ್ತನೋ ಆತ್ಮಸಂತುಷ್ಟನೋ ಅವನಿಗೆ ಕರ್ತವ್ಯವೆಂಬುದೇನೂ ಉಳಿಯುವದಿಲ್ಲ. ೧೭

ಕರ್ಮಮಾಡುವದರಿಂದಾಗಲಿ ಮಾಡದಿರುವದರಿಂದಾಗಲಿ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಎಲ್ಲ ಭೂತಗಳ ಮೇಲೆ ಅವನ ಯಾವ ಇಷ್ಟಾರ್ಥವೂ ಅವಲಂಬಿಸಿರುವದಿಲ್ಲ. ೧೮

ಆದುದರಿಂದ (ನಿನ್ನ ಸ್ಥಿತಿಯು ಹಾಗೆ ಇಲ್ಲದ್ದರಿಂದ) ಅನಾಸಕ್ತನಾಗಿ ಯಾವಾಗಲೂ ಕರ್ತವ್ಯವನ್ನು ಮಾಡು. ಅನಾಸಕ್ತನಾಗಿ ಕರ್ಮವನ್ನಾಚರಿಸುವ ಪುರುಷನು ಪರಮಪದವನ್ನು ಪಡೆಯುತ್ತಾನೆ. ೧೯

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ |**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ || ೨೦ ||**
**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ |**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ || ೨೧ ||**

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ |**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ || ೨೨ ||**

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ |**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ೨೩ ||**

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ |**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ || ೨೪ ||**

ಜನಕಾದಿಗಳು ಕರ್ಮದಿಂದಲೇ ಸಿದ್ಧಿಯನ್ನು ಪಡೆದರು. ಲೋಕಸಂಗ್ರಹವನ್ನಾದರೂ ಅನುಲಕ್ಷಿಸಿ ನೀನು ಕರ್ಮಮಾಡುವದು ಯೋಗ್ಯವು. ೨೦

ಶ್ರೇಷ್ಠನು ಆಚರಿಸುವಂತೆಯೇ ಮಿಕ್ಕವರು ಆಚರಿಸುತ್ತಾರೆ. ಅವನು ಪ್ರಮಾಣವೆಂದು ಹಾಕುವ ಮೇಲುಪಂಕ್ತಿಯನ್ನೇ ಅವರಾದರೂ ಅನುಸರಿಸುತ್ತಾರೆ. ೨೧

ಪಾರ್ಥನೇ, ಮೂರು ಲೋಕಗಳಲ್ಲಿಯೂ ನಾನು ಮಾಡತಕ್ಕ ಕರ್ತವ್ಯವೇನೂ ಇಲ್ಲ, ಅಪ್ರಾಪ್ತವನ್ನು ಪ್ರಾಪ್ತಮಾಡಿಕೊಳ್ಳತಕ್ಕದ್ದಿಲ್ಲ. ಆದರೂ ನಾನು ಕರ್ಮವನ್ನಾಚರಿಸುತ್ತಲೇ ಇರುವೆನು. ೨೨

ನಾನು ಆಲಸ್ಯವನ್ನು ಬಿಟ್ಟು ಕರ್ಮವನ್ನಾಚರಿಸದಿದ್ದರೆ, ಪಾರ್ಥ, ಎಲ್ಲರೂ ಸರ್ವಥಾ ನನ್ನನ್ನೇ ಅನುಕರಿಸುವರು. ೨೩

ನಾನು ಕರ್ಮಮಾಡದೇ ಹೋದರೆ ಈ ಲೋಕಗಳು ಹಾಳಾಗುವವು, ನಾನು ಲೋಕಸಂಕರ ಮಾಡುವವನೆಂದೆನಿಸುವೆನು. ನಾನು ಈ ಪ್ರಜೆಗಳ ನಾಶಕ್ಕೆ ಕಾರಣನಾಗುವೆನು. ೨೪

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ |**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ || ೨೫ ||**
**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ |**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ || ೨೬ ||**
**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ || ೨೭ ||**
**ತತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ |**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ || ೨೮ ||**
**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು |**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ || ೨೯ ||**

ಭಾರತಾ, ಅವಿದ್ವಾಂಸರು ಕರ್ಮಾಸಕ್ತರಾಗಿ ಹೇಗೆ ಕರ್ಮಮಾಡುವರೋ ಹಾಗೆ ಲೋಕಸಂಗ್ರಹದ ಇಚ್ಛೆಯಿಂದ ವಿದ್ವಾಂಸರು ಅನಾಸಕ್ತರಾಗಿ ಕರ್ಮ ಮಾಡತಕ್ಕದ್ದು. ೨೫

ಅಜ್ಞರಾದ ಕರ್ಮಾಸಕ್ತ ಜನರ ಮನಸ್ಸಿನಲ್ಲಿ ಕರ್ಮಗಳ ಬಗ್ಗೆ ಜ್ಞಾನಿಗಳು ಅವಿಶ್ವಾಸವನ್ನುಂಟುಮಾಡಬಾರದು. ವಿದ್ವಾಂಸರು ತಾವು ಸ್ವತಃ ಯೋಗಯುಕ್ತರಾಗಿ ವರ್ತಿಸುತ್ತ ಸರ್ವ ಕರ್ಮಗಳನ್ನು ಅಜ್ಞರಿಂದ ಮಾಡಿಸಬೇಕು. ೨೬

ಪ್ರಕೃತಿಯ ಗುಣಗಳಿಂದ ಕರ್ಮಗಳು ಆಗುತ್ತಿರಲು ಅಹಂಬುದ್ಧಿಯಿಂದ ಮೂಢನಾದವನು, ತಾನೇ ಮಾಡುವವನು ಎಂದು ತಿಳಿಯುವನು. ೨೭

ಆದರೆ ಅರ್ಜುನಾ, ಗುಣಕರ್ಮಗಳ ಈ ತಾತ್ವಿಕ ಸಂಬಂಧವನ್ನರಿತವನು ಇದೆಲ್ಲ ಗುಣಗಳ ಆಟವೆಂದು ತಿಳಿದು ಅದರಲ್ಲಿ ಆಸಕ್ತನಾಗುವದಿಲ್ಲ. ೨೮

ಪ್ರಕೃತಿಯ ಗುಣಗಳಿಂದ ಮೋಹಿತರಾದವರು ಗುಣಕರ್ಮಗಳಲ್ಲಿ ಆಸಕ್ತರಾಗುತ್ತಾರೆ. ಪೂರ್ಣಜ್ಞಾನವಿಲ್ಲದ ಆ ಮಂದಬುದ್ಧಿ ಜನರ ಮನಸ್ಸಿನಲ್ಲಿ ಕರ್ಮದ ಬಗ್ಗೆ ಜ್ಞಾನಿಗಳು ( ಕರ್ಮತ್ಯಾಗಮಾಡಿ) ಸಂಶಯವನ್ನುಂಟು ಮಾಡಬಾರದು. ೨೯

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ |
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ |
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥೩೧॥

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ |
ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ ೩೨ ॥

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ |
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥

ಇಂದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ |
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥

ಆತ್ಮನಿಷ್ಠಬುದ್ಧಿಯಿಂದ ಸರ್ವ ಕರ್ಮಗಳನ್ನು ನನಗೆ ಅರ್ಪಿಸಿ ಆಶಾಮಮತ್ವಾದಿಗಳನ್ನು ಬಿಟ್ಟು ದುಃಖರಹಿತನಾಗಿ ಯುದ್ಧಮಾಡು. ೩೦

ಈ ನನ್ನ ಮತದಂತೆ ನಿತ್ಯ ವರ್ತಿಸುವ ದೋಷಬುದ್ಧಿಯಿಲ್ಲದ ಶ್ರದ್ಧಾವಂತರು ಕರ್ಮಬಂಧನದಿಂದ ಸಹ ಮುಕ್ತರಾಗುತ್ತಾರೆ. ೩೧

ಆದರೆ ಈ ನನ್ನ ಮತವನ್ನು ನಿಂದಿಸಿ ಅದರಂತೆ ನಡೆಯದಿರುವವರು ಸರ್ವಜ್ಞಾನಶೂನ್ಯರೂ ನಷ್ಟಬುದ್ಧಿಯವರೂ ಆಗುತ್ತಾರೆ. ೩೨

ಜ್ಞಾನಿಯು ಸಹ ತನ್ನ ಪ್ರಕೃತಿಗನುಗುಣವಾಗಿಯೇ (ಸ್ವಭಾವಕ್ಕನುಗುಣವಾಗಿ) ನಡೆಯುತ್ತಾನೆ. ಎಲ್ಲ ಭೂತಮಾತ್ರರು ತಮ್ಮ ಪ್ರಕೃತಿಯನ್ನನುಸರಿಸುವರು. ಪ್ರಕೃತಿಯ (ಸ್ವಭಾವದ) ವಿರುದ್ಧ ನಿಗ್ರಹದ ಆಟವೇನು ಸಾಗಬೇಕು? ೩೩

ಇಂದ್ರಿಯ ಹಾಗೂ ಇಂದ್ರಿಯವಿಷಯ ಇವುಗಳ ನಡುವಿನ ಪರಸ್ಪರ ರಾಗದ್ವೇಷಗಳು ನಿಸರ್ಗಸಿದ್ಧವಾದವುಗಳು. ಮನುಷ್ಯನು ಅವುಗಳಿಗೆ ವಶನಾಗಕೂಡದು. ಅವು ಅವನ ಶತ್ರುಗಳು. ೩೪

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ |**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

**ಅರ್ಜುನ ಉವಾಚ—**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

**ಶ್ರೀಭಗವಾನುವಾಚ—**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ |**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥ ೩೭ ॥**
**ಧೂಮೇನಾವ್ರಿಯತೇ ವನ್ಹಿರ್ಯಥಾದರ್ಶೋ ಮಲೇನ ಚ |**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ ॥ ೩೮ ॥**
**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ |**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

ಒಳ್ಳೇರೀತಿಯಿಂದ ಆಚರಿಸಿದ ಪರಧರ್ಮಕ್ಕಿಂತಲೂ ಕೆಲವು ಅಂಶಗಳಲ್ಲಿ ಹೀನವಿದ್ದರೂ ಸ್ವಧರ್ಮವು ಹೆಚ್ಚು ಶ್ರೇಯಸ್ಕರವು. ಸ್ವಧರ್ಮಾಚರಣೆಮಾಡುತ್ತಿರಲು ಮರಣ ಬಂದರೂ ಅದು ಶ್ರೇಯಸ್ಕರವು. ಪರಧರ್ಮವು ಭಯಕಾರಕವು. ೩೫

**ಅರ್ಜುನನು ಅಂದದ್ದು**— ಕೃಷ್ಣನೇ, ತನ್ನ ಇಚ್ಛೆ ಇಲ್ಲದಿದ್ದರೂ ಬಲದಿಂದ ಕೈಹಿಡಿದು ಯಾರೋ ಮಾಡಿಸುತ್ತಿರುವಂತೆ ಈ ಪುರುಷನು ಯಾರ ಪ್ರೇರಣೆಯಿಂದ ಪಾಪವನ್ನಾಚರಿಸುವನು? ೩೬

**ಕೃಷ್ಣನು ಅಂದದ್ದು**—ರಜೋಗುಣದಿಂದ ಉತ್ಪನ್ನವಾದ, ಎಂದೂ ತೃಪ್ತವಾಗದ, ಮಹಾ ಪಾಪಿಯಾದ ಈ ಕಾಮವು ಮತ್ತು ಕ್ರೋಧವು ಈ ಲೋಕದಲ್ಲಿ ಶತ್ರುಗಳೆಂದು ತಿಳಿ. ೩೭

ಬೆಂಕಿಯು ಹೊಗೆಯಿಂದ, ಕನ್ನಡಿಯು ಧೂಳಿಯಿಂದ, ಗರ್ಭವು ಚೀಲದಿಂದ ಮುಚ್ಚಲ್ಪಟ್ಟಿರುವಂತೆ ಜೀವಾತ್ಮನು ಆ ಕಾಮದಿಂದ ಆಚ್ಛಾದಿಸಲ್ಪಟ್ಟಿದ್ದಾನೆ. ೩೮

ಅರ್ಜುನಾ, ನಿತ್ಯ ವೈರಿಯಾದ, ತೃಪ್ತಿಯನ್ನರಿಯದ, ಈ ಕಾಮರೂಪ ಅಗ್ನಿಯಿಂದ ಜ್ಞಾನಿಗಳ ಜ್ಞಾನವು ಮುಚ್ಚಲ್ಪಟ್ಟಿದೆ. ೩೯

ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ |
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥
ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ |
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥
ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ |
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥
ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ |
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಕರ್ಮಯೋಗೋ ನಾಮ
ತೃತೀಯೋಧ್ಯಾಯ:

ಇಂದ್ರಿಯಮನಬುದ್ಧಿಗಳೇ ಇದರ ಆಶ್ರಯಸ್ಥಾನಗಳು. ಇವು ಗಳ ಮುಖಾಂತರ ಜ್ಞಾನವನ್ನು ಮುಚ್ಚಿ ಇದು ಜೀವವನ್ನು ಮೋಹಿಸುತ್ತದೆ. ೪೦

ಆದುದರಿಂದ ಭಾರತನೇ, ನೀನು ಇಂದ್ರಿಯಗಳನ್ನು ಸಂಯಮಿಸಿ ಜ್ಞಾನವಿಜ್ಞಾನನಾಶಿಯಾದ ಈ ಪಾಪಿಷ್ಠ ಕಾಮನನ್ನು ಕೊಂದು ಬಿಡು. ೪೧

ಈ ವಿಷಯಗಳಿಗಿಂತ ಇಂದ್ರಿಯಗಳು, ಅವುಗಳಿಗಿಂತ ಮನವು, ಅದಕ್ಕಿಂತ ಬುದ್ಧಿಯು, ಬುದ್ಧಿಗಿಂತ ಆತ್ಮವು, ಹೀಗೆ ಒಂದಕ್ಕೊಂದು ಶ್ರೇಷ್ಠವಾದವುಗಳು. ೪೨

ಹೀಗೆ ಬುದ್ಧಿಗಿಂತ ಶ್ರೇಷ್ಠವಿರುವ ಆತ್ಮನನ್ನರಿತುಕೊಂಡು, ಆತ್ಮನಿಂದ ಅಂದರೆ ಸ್ವಪ್ರಯತ್ನದಿಂದ ಆತ್ಮನನ್ನು ಸ್ಥಿರಮಾಡಿ, ಅರ್ಜುನಾ, ಈ ಅಸಾಧ್ಯವಾದ ಕಾಮರೂಪ ಶತ್ರುವನ್ನು ಮುರಿದು ಬಿಡು. ೪೩

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೩ನೆಯ ಅಧ್ಯಾಯವು ಸಮಾಪ್ತವು.

# ನಾಲ್ಕನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ |
ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥

ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ |
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥

ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ |
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ ॥ ೩ ॥

ಅರ್ಜುನ ಉವಾಚ—

ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ |
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥

ಶ್ರೀಕೃಷ್ಣನು ಅಂದದ್ದು — ಈ ಅವ್ಯಯವಾದ ಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು. ಅವನು ಮನುವಿಗೆ, ಮನುವು ಇಕ್ಷ್ವಾಕುವಿಗೆ ಹೇಳಿದನು. ೧

ಹೀಗೆ ಪರಂಪರೆಯಿಂದ ಪ್ರಾಪ್ತವಾದ ಈ ಯೋಗವನ್ನು ರಾಜರ್ಷಿಗಳು ಅರಿತುಕೊಂಡರು. ಪರಂತಪನೇ, ಈ ಯೋಗವು ಮಹಾನ್ ಕಾಲಗತಿಯಿಂದ ಲುಪ್ತವಾಯಿತು. ೨

ನೀನು ನನ್ನ ಭಕ್ತನೂ ಗೆಳೆಯನೂ ಇರುವದರಿಂದ ಈ ಉತ್ತಮ ರಹಸ್ಯವನ್ನು, ಈ ಪುರಾತನ ಯೋಗವನ್ನು ನಾನು ನಿನಗೆ ಈಗ ಹೇಳಿದೆನು. ೩

**ಅರ್ಜುನನು ಅಂದದ್ದು** — ನಿನ್ನ ಜನ್ಮವು ಈಚೆಗಿನದು. ವಿವಸ್ವಾನನ ಜನ್ಮವು ಅದಕ್ಕೂ ಮೊದಲು ಆದದ್ದು. ನೀನು ಈ ಯೋಗವನ್ನು ಈ ಮೊದಲು ಉಪದೇಶಿಸಿರುವಿಯೆಂದು ತಿಳಿಯುವ ಬಗೆ ಹೇಗೆ? ೪

ಶ್ರೀಭಗವಾನುವಾಚ—

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ |
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ‖ ೫ ‖

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ |
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ‖ ೬ ‖

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ‖ ೭ ‖

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ‖ ೮ ‖

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ |
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ‖ ೯ ‖

ಕೃಷ್ಣನು ಅಂದದ್ದು—ಅರ್ಜುನಾ, ನನಗೆ ಬಹಳ ಜನ್ಮಗಳಾಗಿ ಹೋಗಿರುವವು. ನಿನ್ನವಾದರೂ ಎಷ್ಟೋ ಜನ್ಮಗಳಾಗಿರುವವು. ಅವೆಲ್ಲವುಗಳನ್ನು ನಾನು ಬಲ್ಲೆನು, ನೀನು ಅರಿಯೆ. ೫

ಅವ್ಯಯಾತ್ಮನಾದ ನಾನು ಜನ್ಮರಹಿತನೂ, ಭೂತಗಳ ಸ್ವಾಮಿಯೂ ಇದ್ದರೂ ನನ್ನ ಮಾಯಾಶಕ್ತಿಯಿಂದ ನನ್ನ ಪ್ರಕೃತಿಯನ್ನಾಶ್ರಯಿಸಿ ನಾನು ಜನ್ಮವನ್ನೆತ್ತುವೆನು. ೬

ಭಾರತಾ, ಯಾವ ಯಾವ ಕಾಲಗಳಲ್ಲಿ ಧರ್ಮಗ್ಲಾನಿಯೂ ಅಧರ್ಮೋತ್ಕರ್ಷವೂ ಆಗುವದೋ ಆಯಾ ಕಾಲಗಳಲ್ಲಿ ನಾನು ಜನ್ಮತಾಳುವೆನು. ೭

ಸಾಧುಸಂರಕ್ಷಣಾರ್ಥವಾಗಿಯೂ ದುಷ್ಟಸಂಹಾರಾರ್ಥವಾಗಿಯೂ ಧರ್ಮಸ್ಥಾಪನಾರ್ಥವಾಗಿಯೂ ಯುಗಯುಗದಲ್ಲಿ ನಾನು ಹುಟ್ಟುವೆನು. ೮

ಈ ಪ್ರಕಾರವಾಗಿ ನನ್ನ ದಿವ್ಯ ಜನ್ಮಕರ್ಮಗಳ ತತ್ವವನ್ನು ತಿಳಿದವನು ಈ ದೇಹವನ್ನು ತೊರೆದಮೇಲೆ ಎರಡನೇ ಜನ್ಮವನ್ನು ಹೊಂದದೇ ನನ್ನೆಡೆಗೆ ಬರುವನು. ೯

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥
ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧ ॥
ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥
ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ ॥ ೧೩ ॥
ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥
ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥ ೧೫ ॥

ಆಸಕ್ತಿ, ಭಯ, ಕ್ರೋಧ ರಹಿತರು, ನನ್ನಲ್ಲಿ ತನ್ಮಯರಾದವರು, ನನ್ನ ಆಶ್ರಯಕ್ಕೆ ಬಂದವರು, ಜ್ಞಾನರೂಪ ತಪಸ್ಸಿನಿಂದ ಶುದ್ಧರಾದ ಬಹು ಜನರು, ಸಾಯುಜ್ಯಮುಕ್ತಿಯನ್ನು ಪಡೆದಿರುವರು. ೧೦

ನನ್ನನ್ನು ಯಾರು ಯಾವ ರೀತಿಯಿಂದ ಭಜಿಸುವರೋ ಅವರಿಗೆ ನಾನು ಅದೇ ರೀತಿಯಿಂದ ಫಲಕೊಡುವೆನು. ಪಾರ್ಥ, ಮನುಷ್ಯರು ಎಲ್ಲ ಪ್ರಕಾರವಾಗಿ ನನ್ನ ಮಾರ್ಗವನ್ನೇ ಅನುಸರಿಸುವರು. ೧೧

ಕರ್ಮಫಲದಾಶೆಯಿಂದ ಜನರು ಮಿಕ್ಕ ದೇವತೆಗಳನ್ನು ಪೂಜಿಸುವರು. ಮನುಷ್ಯಲೋಕದಲ್ಲಿ ಕರ್ಮಫಲವು ಶೀಘ್ರವೇ ಪ್ರಾಪ್ತವಾಗುವದು. ೧೨

ಗುಣಕರ್ಮಾನುಸಂಧಾನದಿಂದ ನಾನು ಚಾತುರ್ವರ್ಣ್ಯವನ್ನು ಸೃಜಿಸಿದೆನು. ಅವ್ಯಯ ಅಕರ್ತೃವಾದ ನಾನೇ ಅದರ ಕರ್ತೃವೆಂದು ತಿಳಿ. ೧೩

ನನಗೆ ಕರ್ಮದ ಲೇಪವಾಗದು, ನನಗೆ ಕರ್ಮಫಲದಾಶೆಯಿಲ್ಲ, ಎಂಬದನ್ನು ತಿಳಿಯುವವನು ಕರ್ಮದಿಂದ ಬದ್ಧನಾಗುವದಿಲ್ಲ. ೧೪

ಪೂರ್ವದ ಮುಮುಕ್ಷುಗಳಾದರೂ ಈ ತತ್ವವನ್ನರಿತು ಕರ್ಮ ಮಾಡಿದರು. ಅದುದರಿಂದ ಪ್ರಾಚೀನರು ಮಾಡಿದಂತೆ ಪುರಾತನವಾದ ಕರ್ಮವನ್ನೇ ನೀನಾದರೂ ಮಾಡು. ೧೫

ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ |
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧೬ ॥

ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ |
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ |
ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ ೧೮ ॥

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ |
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯ ॥

ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ |
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥

ಕರ್ಮವಾವುದು, ಅಕರ್ಮವಾವುದು ಎಂಬ ವಿಷಯಕ್ಕೆ ವಿದ್ವಾಂಸರು ಸಹ ಭ್ರಮಬಡುವರು. ಆದುದರಿಂದ ಆ ಕರ್ಮಜ್ಞಾನವನ್ನು ನಿನಗೆ ಹೇಳುವೆನು. ಆ ಜ್ಞಾನವು ನಿನ್ನನ್ನು ಕರ್ಮಬಂಧನದಿಂದ ಮುಕ್ತಮಾಡುವದು. ೧೬

ಕರ್ಮವೆಂದರೇನು, ವಿಕರ್ಮ ( ನಿಷಿದ್ಧ ) ವೆಂದರೇನು ಅಕರ್ಮವೆಂದರೇನು ಇದನ್ನು ತಿಳಿದುಕೊಳ್ಳತಕ್ಕದ್ದು. ಯಾಕೆಂದರೆ ಕರ್ಮದ ತತ್ವವು ತಿಳಿಯಲು ಕಠಿಣವು. ೧೭

ಕರ್ಮದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ನೋಡುವವನು ಮನುಷ್ಯರಲ್ಲಿ ಬುದ್ಧಿವಂತನೆನ್ನಬೇಕು. ಅವನೇ ಯೋಗಯುಕ್ತನು ಮತ್ತು ಸಮಸ್ತ ಕರ್ಮಕಾರಿಯು. ೧೮

ಯಾವನು ಕಾಮಸಂಕಲ್ಪವಿರಹಿತನಾಗಿ ಕರ್ಮಗಳನ್ನಾರಂಭಿಸುವನೋ ಯಾವನ ಕರ್ಮಬಂಧನವು ಜ್ಞಾನದ ಬೆಂಕಿಯಿಂದ ಸುಟ್ಟಿರುವದೋ ಅಂಥವನಿಗೆ ಜ್ಞಾನಿಗಳು ಪಂಡಿತನೆನ್ನುವರು. ೧೯

ಕರ್ಮಫಲದಲ್ಲಿ ಅನಾಸಕ್ತನಾಗಿ ನಿತ್ಯತೃಪ್ತನೂ ನಿರಾವಲಂಬಿಯೂ ಆದವನು ಕರ್ಮದಲ್ಲಿ ಪ್ರವರ್ತಿಸಿದರೂ ನಿಷ್ಕ್ರಿಯನೇ ಸರಿ. ೨೦

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ೨೧॥

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ |
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ |
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ |
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥

ನಿಷ್ಕಾಮನೂ, ಅಂತಃಕರಣವನ್ನು ಸಂಯಮಿಸಿದವನೂ, ಸರ್ವಸಂಗವನ್ನು ತ್ಯಜಿಸಿದವನೂ, ಬರಿಯ ಶಾರೀರಿಕ ಕರ್ಮಗಳನ್ನು ಮಾಡುತ್ತಿದ್ದರೂ ಅವುಗಳಿಂದ ಅವನು ಬದ್ಧನಾಗನು. ೨೧

ಈಶೇಚ್ಛೆಯಿಂದ ಪ್ರಾಪ್ತವಾದ ವಸ್ತುಗಳಿಂದ ತೃಪ್ತನೂ, ದ್ವಂದ್ವಾತೀತನೂ, ಮಾತ್ಸರರಹಿತನೂ, ಸಿದ್ಧಿ ಅಸಿದ್ಧಿಗಳನ್ನು ಸಮವೆಂದು ಲೆಕ್ಕಿಸುವವನೂ ಕರ್ಮಮಾಡಿದರೂ ಬದ್ಧನಾಗಲಾರನು. ೨೨

ಜ್ಞಾನನಿಷ್ಠ ಮನಸುಳ್ಳ ಸಂಗರಹಿತ ಜೀವನ್ಮುಕ್ತನು ಯಜ್ಞಗೋಸುಗ ಮಾಡಿದ ಕರ್ಮವು ಪರಮಾತ್ಮನಲ್ಲಿ ಲಯಹೊಂದುವದು. ಆದುದರಿಂದ ಅವನು ಬದ್ಧನಾಗುವದಿಲ್ಲ. ೨೩

ಅರ್ಪಣವು ಬ್ರಹ್ಮವು, ಹೋಮದ್ರವ್ಯವು ಬ್ರಹ್ಮವು, ಬ್ರಹ್ಮಾಗ್ನಿಯಲ್ಲಿ ಬ್ರಹ್ಮನಿಂದ ಆಹುತಿ ಕೊಡಲ್ಪಡುವದು, ಎಂಬ ಭಾವನೆಯ ಮೂಲಕ, ಬ್ರಹ್ಮಕರ್ಮ ಸಮಾಧಿಯಲ್ಲಿರುವವನು ಬ್ರಹ್ಮನನ್ನೇ ಪಡೆಯುವನು. ೨೪

ಎಷ್ಟೋ ಯೋಗಿಗಳು ದೇವತೆಗಳಿಗಾಗಿ ಯಜ್ಞಮಾಡುವರು. ಕೆಲವರು ಬ್ರಹ್ಮವೆಂಬ ಅಗ್ನಿಯಲ್ಲಿ ಯಜ್ಞಮುಖಾಂತರ ಯಜ್ಞದ ಹೋಮ ಮಾಡುವರು. ೨೫

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ |**
**ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥**

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ |**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ |**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ |**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥**

**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ |**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥೩೦॥**

ಕೆಲವರು ಕಿವಿ ಮುಂತಾದ ಇಂದ್ರಿಯಗಳನ್ನು ಸಂಯಮಾಗ್ನಿಯಲ್ಲಿ ಹೋಮಿಸುತ್ತಾರೆ. ಕೆಲವರು ಶಬ್ದಾದಿವಿಷಯಗಳ ಆಹುತಿಯನ್ನು ಇಂದ್ರಿಯಾಗ್ನಿಯಲ್ಲಿ ಕೊಡುತ್ತಾರೆ. ೨೬

ಹಲವರು ಎಲ್ಲ ಇಂದ್ರಿಯಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಆತ್ಮಸಂಯಮಯೋಗವೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ. ೨೭

ಕಠಿಣ ವ್ರತಗಳನ್ನು ಮಾಡುವ ಯತಿಗಳು ಕೆಲವರು ದ್ರವ್ಯಯಜ್ಞವನ್ನು, ತಪಯಜ್ಞವನ್ನು, ಯೋಗಯಜ್ಞವನ್ನು, ಸ್ವಾಧ್ಯಾಯಯಜ್ಞವನ್ನು, ಜ್ಞಾನಯಜ್ಞವನ್ನು ಹೀಗೆ ವಿವಿಧ ಯಜ್ಞಗಳನ್ನಾಚರಿಸುವರು. ೨೮

ಹಲವರು ಪ್ರಾಣವನ್ನು ಅಪಾನದಲ್ಲಿ, ಅಪಾನವನ್ನು ಪ್ರಾಣದಲ್ಲಿ ಹೋಮಿಸಿ ಪ್ರಾಣಾಪಾನಗತಿಯನ್ನು ನಿರೋಧಿಸಿ ಪ್ರಾಣಾಯಾಮದಲ್ಲಿ ನಿಮಗ್ನರಾಗುವರು. ೨೯

ಮಿಕ್ಕವರು ಕೆಲವರು ಆಹಾರವನ್ನು ನಿಯಮಿಸಿ, ಪ್ರಾಣವನ್ನು ಪ್ರಾಣದಲ್ಲಿಯೇ ಹೋಮಿಸುವರು. ಇವರೆಲ್ಲರೂ ಯಜ್ಞತತ್ವವನ್ನರಿತವರು, ಯಜ್ಞದಿಂದ ಪಾಪವನ್ನು ಕಳೆದವರು. ೩೦

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಂ |**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ||೩೧||**

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ |**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ||೩೨||**

**ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ |**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ||೩೩||**

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ |**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ||೩೪||**

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ |**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ||೩೫||**

ಯಜ್ಞಶೇಷವಾದ ಅಮೃತಾನ್ನವನ್ನು ಸೇವಿಸುವವರು ಶಾಶ್ವತ ಬ್ರಹ್ಮನನ್ನು ಪಡೆಯುವರು. ಅರ್ಜುನನೇ, ಯಜ್ಞಮಾಡದವನಿಗೆ ಈ ಲೋಕವು ಸಹ ದೊರೆಯದು. ಅಂದಮೇಲೆ ಪರಲೋಕವೆಲ್ಲಿಯದು? ೩೧

ಹೀಗೆ ಬಹುವಿಧದ ಯಜ್ಞಗಳು ಬ್ರಹ್ಮಮುಖದಲ್ಲಿ ನಡೆದಿರುವವು. ಅವೆಲ್ಲ ಕರ್ಮದಿಂದ ಉದ್ಭವಿಸಿರುವವು. ಇದನ್ನರಿತು ಮುಕ್ತನಾಗುವಿ. ೩೨

ದ್ರವ್ಯಯಜ್ಞಕ್ಕಿಂತಲೂ ಜಾನಯಜ್ಞವು ಹೆಚ್ಚು ಶ್ರೇಯಸ್ಕರವಾದದ್ದು. ಪಾರ್ಥಾ ಎಲ್ಲ ಕರ್ಮದ ಪರಿಪೂರ್ತಿಯು ಜ್ಞಾನದಲ್ಲಿಯೇ ಆಗುವದು. **೩೩**

ಆ ಜ್ಞಾನವನ್ನು ನೀನು ಅವರಿಗೆ ವಂದಿಸಿ, ಪುನಃಪುನಃ ಪ್ರಶ್ನೆ ಮಾಡಿ, ಅವರ ಸೇವೆ ಮಾಡಿ, ತತ್ವಜ್ಞಾನಿಗಳಾದ ಜ್ಞಾನಿಗಳಿಂದ ಪಡೆದುಕೋ. **೩೪**

ಪಾಂಡವನೇ, ಒಮ್ಮೆ ಆ ಜ್ಞಾನವಾಯಿತೆಂದರೆ ಪುನಃ ನಿನಗೆ ಈ ಮೋಹವಾಗಲಿಕ್ಕಿಲ್ಲ. ಎಲ್ಲ ಭೂತಗಳು ಆತ್ಮನಲ್ಲಿರುವವೆಂದೂ ಆ ಮೇಲೆ ನನ್ನಲ್ಲಿರುವವೆಂದೂ ಆ ಜ್ಞಾನಬಲದಿಂದ ನಿನಗೆ ಪ್ರತೀತವಾಗುವದು. **೩೫**

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ |
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭ ॥

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ |
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥

ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ |
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥

ಎಲ್ಲ ಪಾಪಿಗಳಿಗಿಂತ ನೀನು ಹೆಚ್ಚಿನ ಪಾಪಿಯಾಗಿರಬಹುದಾಗಿದ್ದರೂ ನೀನು ಜ್ಞಾನನೌಕೆಯಿಂದ ಎಲ್ಲ ಪಾಪವನ್ನು ದಾಟುವಿ. ೩೬

ಅರ್ಜುನಾ, ಉರಿಯುವ ಕಿಚ್ಚು ಕಟ್ಟಿಗೆಗಳನ್ನು ಸುಟ್ಟುಬಿಡುವಂತೆ ಜ್ಞಾನದ ಕಿಚ್ಚು ಸರ್ವ ಕರ್ಮಗಳನ್ನು ಸುಟ್ಟು ಬೂದಿಮಾಡುವದು. ೩೭

ಜ್ಞಾನದಷ್ಟು ಪವಿತ್ರವಸ್ತು ಇಲ್ಲಿ ಇನ್ನಾವುದೂ ಇಲ್ಲ. ಯೋಗದಲ್ಲಿ ಸಿದ್ಧಿಯನ್ನು ಹೊಂದಿದವನು ಈ ಜ್ಞಾನವನ್ನು ಕಾಲಾಂತರದಿಂದ ತನ್ನಲ್ಲಿಯೇ ಪಡೆಯುತ್ತಾನೆ. ೩೮

ಶ್ರದ್ಧೆಯುಳ್ಳ, ಜ್ಞಾನನಿಷ್ಠೆಯುಳ್ಳ ಜಿತೇಂದ್ರಿಯನು ಈ ಜ್ಞಾನವನ್ನು ಪಡೆಯುತ್ತಾನೆ. ಜ್ಞಾನವನ್ನು ಪಡೆದ ಮೇಲೆ ತೀವ್ರವೇ ಹೆಚ್ಚಿನ ಶಾಂತಿಯನ್ನು ಹೊಂದುತ್ತಾನೆ. ೩೯

ಆದರೆ ಶ್ರದ್ಧೆಯಿಲ್ಲದ ಅಜ್ಞಾನಿಯು ಸಂಶಯಗ್ರಸ್ತನಾಗಿ ನಾಶ ಹೊಂದುತ್ತಾನೆ. ಸಂಶಯ ಪೀಡಿತನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ. ೪೦

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನ ಸಂಶಯಂ |**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**
**ತಸ್ಮಾದಜ್ಞಾನಸಂಭೂತಂ ಹೃಸ್ಥಂ ಜ್ಞಾನಾಸಿನಾತ್ಮನಃ |**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

ಇತಿ ಶ್ರೀಮದ್ಭಗವದ್ಗೀತಾಯಾಂ ಜ್ಞಾನಯೋಗೋನಾಮ
ಚತುರ್ಥೋಽಧ್ಯಾಯಃ

ಅರ್ಜುನಾ, ಯೋಗದಿಂದ ಕರ್ಮಗಳನ್ನು ಪರಮಾತ್ಮನಲ್ಲಿ ಸಮರ್ಪಿಸಿ ಜ್ಞಾನದಿಂದ ಸಂಶಯಗಳನ್ನು ಹರಿದ ಆತ್ಮವಂತನನ್ನು ಕರ್ಮಗಳು ಬಂಧಿಸುವದಿಲ್ಲ. ೪೧

ಆದುದರಿಂದ ಭಾರತಾ, ಏಳು, ಅಜ್ಞಾನದಲ್ಲಿ ಹುಟ್ಟಿದ ಹಾಗೂ ಹೃದಯದಲ್ಲಿರುವ ಈ ನಿನ್ನ ಸಂಶಯವನ್ನು ಜ್ಞಾನಖಡ್ಗದಿಂದ ತುಂಡರಿಸಿ ಯೋಗವನ್ನಾಚರಿಸು. ೪೨

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೪ ನೆಯ ಅಧ್ಯಾಯವು ಸಮಾಪ್ತವು.

# ಐದನೆಯ ಅಧ್ಯಾಯ.

ಅರ್ಜುನ ಉವಾಚ ।

ಸನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧ ॥

ಶ್ರೀಭಗವಾನುವಾಚ—

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ೨ ॥

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥ ೩ ॥

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪ ॥

**ಅರ್ಜುನನು ಅಂದದ್ದು—** ಕೃಷ್ಣಾ, ಒಮ್ಮೆ ಕರ್ಮಸನ್ಯಾಸವನ್ನು ಇನ್ನೊಮ್ಮೆ ಕರ್ಮಯೋಗವನ್ನು ಹೊಗಳುವಿ. ಇವೆರಡರಲ್ಲಿ ಯಾವದು ಶ್ರೇಯಸ್ಕರವಾದದ್ದೆಂಬದನ್ನು ನನಗೆ ನಿಶ್ಚಯದಿಂದ ಹೇಳು. ೧

**ಶ್ರೀಕೃಷ್ಣನು ಅಂದದ್ದು—** ಸನ್ಯಾಸ ಮತ್ತು ಕರ್ಮಯೋಗವೆಂಬವೆರಡೂ ಮೋಕ್ಷದಾಯಕಗಳು. ಅವುಗಳಲ್ಲಿ ಕರ್ಮಸನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು. ೨

ಯಾವನು ದ್ವೇಷ, ಆಶೆ ರಹಿತನೋ ಅವನು ನಿತ್ಯ ಸನ್ಯಾಸಿಯೆಂದು ತಿಳಿಯಬೇಕು. ಅರ್ಜುನಾ, ಹೀಗೆ ದ್ವಂದ್ವರಹಿತನಿರುವವನು ಅನಾಯಾಸವಾಗಿ ಬಂಧಮುಕ್ತನಾಗುತ್ತಾನೆ. ೩

ಸಾಂಖ್ಯ ಮತ್ತು ಯೋಗಮಾರ್ಗಗಳು ಭಿನ್ನವಾದವುಗಳೆಂದು ಮೂರ್ಖರನ್ನುವರು. ಪಂಡಿತರು ಹಾಗೆ ಹೇಳರು. ಇವುಗಳಲ್ಲಿ ಒಂದನ್ನಾದರೂ ಚನ್ನಾಗಿ ಆಚರಿಸಿದರೆ ಎರಡರ ಫಲವೂ ದೊರೆಯುವದು. ೪

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ |
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ |
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥ ೬ ॥

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ |
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ |
ಪಶ್ಯನ್‌ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್ ಶ್ವಸನ್॥ ೮ ॥
ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ |
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ ೯ ॥

ಸಾಂಖ್ಯರಿಂದ ದೊರಕಿಸಲ್ಪಡುವ ಪದವಿಯನ್ನು ಯೋಗಿಗಳಾದರೂ ದೊರಕಿಸುವರು. ಸಾಂಖ್ಯ ಮತ್ತು ಯೋಗ ಇವೆರಡೂ ಮಾರ್ಗಗಳು ಒಂದೇ ಎಂದು ತಿಳಿದವನೇ ಜ್ಞಾನಿಯು. ೫

ಅರ್ಜುನಾ, ಕರ್ಮಯೋಗದ ಸಹಾಯವಿಲ್ಲದೆ ಕರ್ಮಸನ್ಯಾಸಿಯಾಗುವದು ಕಠಿಣವು. ಯೋಗಯುಕ್ತ ಮುನಿಯು ತೀವ್ರವೇ ಬ್ರಹ್ಮಪದವಿಯನ್ನು ಹೊಂದುವನು. ೬

ಯಾವನು ಪವಿತ್ರನೂ ಮನಸ್ಸನ್ನು ಗೆದ್ದವನೂ ಜಿತೇಂದ್ರಿಯನೂ ತನ್ನ ಆತ್ಮನನ್ನು ಸರ್ವಾಂತರ್ಯಾಮಿಯಲ್ಲಿ ಸ್ಥಿರವಾಗಿ ಇಟ್ಟವನೂ ಇರುವನೋ ಆ ಕರ್ಮಯೋಗಿಯು ಕರ್ಮಮಾಡಿದರೂ ಬದ್ಧನಾಗನು. ೭

ನೋಡೋಣ ಕೇಳೋಣ ಸ್ಪರ್ಶಿಸೋಣ ಮೂಸಿಸೋಣ ಹೋಗೋಣ ಮಲಗೋಣ ಉಸುರಾಡಿಸೋಣ ಮಾತಾಡೋಣ ಬಿಡೋಣ ಹಿಡಿಯೋಣ ಕಣ್ಣುತೆರೆಯೋಣ ಮುಚ್ಚೋಣ ಮುಂತಾದ ಕ್ರಿಯೆಗಳನ್ನು ಮಾಡುತ್ತಿದ್ದರೂ ಇಂದ್ರಿಯಗಳು ತಮ್ಮ ವಿಷಯಗಳನ್ನು ಕುರಿತು ಕರ್ಮ ಮಾಡುತ್ತಿರುವವೆಂದು ತಿಳಿದು ಜ್ಞಾನಿಯಾದ ಯೋಗಯುಕ್ತನು ' ನಾನು ಏನೂ ಮಾಡುವದಿಲ್ಲ ' ಎಂದು ಎಣಿಸತಕ್ಕದ್ದು. ೮-೯

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ |
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ ೧೧ ॥

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ |
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ |
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ |
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥

ಬ್ರಹ್ಮಾರ್ಪಣ ಬುದ್ಧಿಯಿಂದ ಅನಾಸಕ್ತನಾಗಿ ಕರ್ಮಗಳನ್ನು ಆಚರಿಸುವವನನ್ನು, ಕಮಲಪತ್ರವನ್ನು ನೀರು ಮುಟ್ಟದಿರುವಂತೆ, ಪಾಪವು ಮುಟ್ಟದು. ೧೦

ಯೋಗಿಗಳು ಸಂಗರಹಿತರಾಗಿ ಶರೀರಮನಬುದ್ಧಿಗಳಿಂದ ಕೇವಲ ಇಂದ್ರಿಯಗಳಿಂದ ಆತ್ಮಶುದ್ಧಿಗಾಗಿ ಕರ್ಮವನ್ನಾಚರಿಸುವರು. ೧೧

ಯೋಗಯುಕ್ತನು ಕರ್ಮಫಲವನ್ನು ತೊರೆದು ಏಕನಿಷ್ಠೆಯಿಂದ ಪ್ರಾಪ್ತವಾಗುವ ಶಾಂತಿಯನ್ನು ಪಡೆಯುವನು. ಯೋಗಹೀನನು ಫಲೇಚ್ಛೆಯ ಮೂಲಕ ಫಲದಲ್ಲಿ ಆಸಕ್ತನಾಗಿ ಬಂಧಕ್ಕೆ ಒಳಗಾಗುವನು. ೧೨

ಜಿತೇಂದ್ರಿಯನು ಎಲ್ಲ ಕರ್ಮಗಳಲ್ಲಿಯೂ ಅನಾಸಕ್ತನಾಗಿರುವದರಿಂದ ತಾನು ಏನೂ ಮಾಡದೆ, ಮಾಡಿಸದೇ ಈ ನವದ್ವಾರಗಳುಳ್ಳ ಶರೀರದಲ್ಲಿ ಸುಖದಿಂದಿರುವನು. ೧೩

ಜನರ ಕರ್ತೃತ್ವ, ಕರ್ಮ, ಕರ್ಮ ಮತ್ತು ಅದರ ಫಲ ಇವುಗಳ ಸಂಯೋಗ, ಇವುಗಳನ್ನು ಪರಮಾತ್ಮನು ಸೃಜಿಸುವದಿಲ್ಲ. ಪ್ರಕೃತಿ ಸ್ವಭಾವದಿಂದ ಅವೆಲ್ಲ ಪ್ರವರ್ತಿಸುತ್ತವೆ. ೧೪

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ |
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫ ॥

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ |
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಂ ॥ ೧೬ ॥

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ |
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ |
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮ ॥

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ ೧೯ ॥

ಸರ್ವವ್ಯಾಪಿ ಪರಮಾತ್ಮನು ತಾನು ಯಾರ ಪುಣ್ಯಪಾಪಗಳನ್ನೂ ಗ್ರಹಿಸುವದಿಲ್ಲ. ಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿರುವದರಿಂದ ಜೀವಗಳು ಮೋಹಕ್ಕೆ ಒಳಗಾಗುತ್ತಾರೆ. ೧೫

ಯಾರ ಆ ಅಜ್ಞಾನವು ಜ್ಞಾನದಿಂದ ನಾಶಿಸಲ್ಪಟ್ಟಿರುವದೋ ಅವರಿಗೆ ಜ್ಞಾನವು ಪರತತ್ವವನ್ನು ಸೂರ್ಯನಂತೆ ಬೆಳಗಿ ತೋರಿಸುವದು. ೧೬

ಆ ಪರತತ್ವದಲ್ಲಿಯೇ ಬುದ್ಧಿಯನ್ನಿಟ್ಟವರು, ಅದರಲ್ಲಿಯೇ ಮಗ್ನರಾದವರು, ನಿಷ್ಠೆಯುಳ್ಳವರು, ಪರಮಾತ್ಮನೇ ಪರಮಾಶ್ರಯವೆಂದರಿತವರು ಜ್ಞಾನದಿಂದ ಪಾಪರಹಿತರಾಗಿ ಪುನಃ ಜನ್ಮಕ್ಕೆ ಬಾರರು. ೧೭

ವಿದ್ಯೆವಿನಯಗಳುಳ್ಳ ಬ್ರಾಹ್ಮಣ, ಆಕಳು, ಆನೆ, ನಾಯಿ, ಚಾಂಡಾಲ ಇವರೆಲ್ಲರನ್ನೂ ಜ್ಞಾನಿಯು ಸಮದೃಷ್ಟಿಯಿಂದ ನೋಡುವನು. ೧೮

ಯಾರ ಮನಸು ಸಮಾವಸ್ಥೆಯಲ್ಲಿ ಸ್ಥಿರವಾಗುವದೋ ಅವರು ಇಲ್ಲಿಯೇ ಸಂಸಾರವನ್ನು ಗೆದ್ದರೆನ್ನಬೇಕು. ನಿರ್ದೋಷವಿದ್ದು ಸಮವಿರುವದೇ ಬ್ರಹ್ಮವು. ಆದುದರಿಂದ ಅಂಥವರು ಬ್ರಹ್ಮನಲ್ಲಿಯೇ ಸ್ಥಿರರಾದರೆನ್ನಬೇಕು. ೧೯

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ |**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**
**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಂ |**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥**
**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ |**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥**
**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ |**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩ ॥**
**ಯೋಽಂತಃಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ |**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

ಪ್ರಿಯವಸ್ತು ದೊರಕಿದರೆ ಹರ್ಷಿಸಬಾರದು ಅಪ್ರಿಯ ವಸ್ತು ಪ್ರಾಪ್ತವಾದರೆ ದುಃಖಿಸಬಾರದು. ಹೀಗೆ ಮೋಹರಹಿತನಾದ ಸ್ಥಿರಬುದ್ಧಿಯವನೇ ಬ್ರಹ್ಮಜ್ಞಾನಿಯು. ಅವನು ಬ್ರಹ್ಮನಲ್ಲಿ ಸ್ಥಿತನು. ೨೦

ಬಾಹ್ಯವಿಷಯಗಳಲ್ಲಿ ಅನಾಸಕ್ತನಾಗಿ ಆತ್ಮನಲ್ಲಿಯೇ ಸುಖಹೊಂದುವವನು ಬ್ರಹ್ಮನಲ್ಲಿ ಯೋಗಯುಕ್ತನು. ಅವನು ಅಕ್ಷಯ ಸುಖವನ್ನನುಭವಿಸುವನು. ೨೧

ಇಂದ್ರಿಯಸಂಸರ್ಗದಿಂದುತ್ಪನ್ನವಾದ ಭೋಗಗಳು ದುಃಖದ ಬೀಜಗಳೇ ಸರಿ. ಅವು ಹುಟ್ಟುಸಾವುಗಳುಳ್ಳವುಗಳು. ಜಾಣರು ಅವುಗಳಲ್ಲಿ ಆನಂದಿಸುವದಿಲ್ಲ. ೨೨

ಇಹಲೋಕದಲ್ಲಿಯೆ ಈ ಶರೀರವನ್ನು ತ್ಯಜಿಸುವ ಪೂರ್ವದಲ್ಲಿ ಕಾಮಕ್ರೋಧಗಳ ಆವೇಗವನ್ನು ತಡೆಯಬಲ್ಲವನೇ ಯೋಗಯುಕ್ತನು. ಅವನೇ ಸುಖಿಯು. ೨೩

ಯಾವನು ಅಂತಃಸುಖಿಯೋ ಅಂತರಂಗದಲ್ಲಿ ಆರಾಮಪಡೆದವನೋ ಯಾವನಲ್ಲಿ ಜ್ಞಾನದ ಅಂತರ್ಜ್ಯೋತಿಯು ಬೆಳಗಹತ್ತಿದೆಯೋ ಆ ಯೋಗಿಯು ಬ್ರಹ್ಮರೂಪನಾಗಿ ಬ್ರಹ್ಮಪದವನ್ನು ಹೊಂದುವನು. ೨೪

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ |
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥
ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ |
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬ ॥
ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ |
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥
ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ |
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥
ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ |
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ॥೨೯॥

ಇತಿ ಶ್ರೀಮದ್ಭಗವದ್ಗೀತಾಯಾಂ ಕರ್ಮಸಂನ್ಯಾಸಯೋಗೋ ನಾಮ
ಪಂಚಮೋಧ್ಯಾಯಃ

ಯಾವ ಋಷಿಗಳ ಪಾಪವು ಕ್ಷೀಣವಾಗಿ ದ್ವಂದ್ವಭಾವವಳಿದಿರುವದೋ ಯಾರು ಜಿತೇಂದ್ರಿಯರಿದ್ದು ಸರ್ವಭೂತಗಳ ಕಲ್ಯಾಣದಲ್ಲಿ ತೊಡಗಿರುವರೋ ಅವರು ಬ್ರಹ್ಮಸಾಯುಜ್ಯವನ್ನೇ ಪಡೆಯುವರು. ೨೫

ಮನವನ್ನು ಬಿಗಿಹಿಡಿದ, ಕಾಮಕ್ರೋಧರಹಿತ, ಜ್ಞಾನಿಗಳಾದ ಯತಿಗಳಿಗೆ ಸುತ್ತುಮುತ್ತಲೂ ಪ್ರತ್ಯಕ್ಷ ಬ್ರಹ್ಮಸಾಯುಜ್ಯವೇ ಪ್ರಾಪ್ತವಾಗುತ್ತಿದೆ. ೨೬

ಯಾವ ಮುನಿಯು ಬಾಹ್ಯಸ್ಪರ್ಶಗಳನ್ನು ನಿಲ್ಲಿಸಿ ಹುಬ್ಬಿನ ನಡುವೆ ದೃಷ್ಟಿಯನ್ನಿಟ್ಟು ಮೂಗಿನಲ್ಲಿ ಹೊಯ್ದಾಡುವ ಪ್ರಾಣಾಪಾನವಾಯುಗಳನ್ನು ಸಮಮಾಡಿ ಇಂದ್ರಿಯ ಮನಬುದ್ಧಿಗಳನ್ನು ಸಂಯಮಿಸಿ ಮೋಕ್ಷಪರಾಯಣನಾಗಿ ಕಾಮ ಕ್ರೋಧ ಭಯರಹಿತನಿರುವನೋ ಅವನು ನಿತ್ಯಮುಕ್ತನೇ ಸರಿ. ೨೭–೨೮

ಎಲ್ಲ ಯಜ್ಞ ತಪಸ್ಸುಗಳನ್ನು ಭೋಗಿಸುವವನೂ ಎಲ್ಲ ಭೂತಗಳ ಗೆಳೆಯನೂ ಎಲ್ಲ ಲೋಕಗಳ ಶ್ರೇಷ್ಠ ಈಶ್ವರನೂ ಆದ ನನ್ನ ಜ್ಞಾನವಾದವನು ಶಾಂತಿಯನ್ನು ಪಡೆಯುತ್ತಾನೆ. ೨೯

**ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ**
**೫ ನೆಯ ಅಧ್ಯಾಯವು ಸಮಾಪ್ತವು.**

# ಆರನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥ ೧ ॥

ಯಂ ಸನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥

ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥

ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮ ಸ್ವನುಷಜ್ಜತೇ ।
ಸರ್ವಸಂಕಲ್ಪಸನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥

ಕೃಷ್ಣನು ಅಂದದ್ದು— ಕರ್ಮಫಲವನ್ನಾಶಿಸದೆ ಕರ್ತವ್ಯಕರ್ಮವನ್ನು ಮಾಡುವವನೇ ಸನ್ಯಾಸಿಯು, ಅವನೇ ಯೋಗಿಯು. ಬರಿಯ ಯಜ್ಞಾದಿಗಳನ್ನು ಬಿಟ್ಟವನಾಗಲಿ, ಕರ್ಮರಹಿತನಾಗಲಿ, ಸನ್ಯಾಸಿ ಅಥವಾ ಯೋಗಿಯಲ್ಲ. ೧

ಅರ್ಜುನಾ, ಯಾವುದಕ್ಕೆ ಸನ್ಯಾಸವೆನ್ನುವರೋ ಅದೇ ಯೋಗವೆಂದು ತಿಳಿ. ತನ್ನ ಸಂಕಲ್ಪಗಳ ತ್ಯಾಗ ಮಾಡದೆ ಯಾವನೂ ಯೋಗಿಯಾಗುವುದಿಲ್ಲ. ೨

ಯೋಗಸಿದ್ಧಿಯನ್ನು ಪಡೆಯಲೆತ್ನಿಸುವವನಿಗೆ ಕರ್ಮವು ಯೋಗದ ಸಾಧನವಾಗುತ್ತದೆ. ಸಿದ್ಧಿಯನ್ನು ಪಡೆದವನಿಗೆ ಶಾಂತಿಯು ಆ ಸ್ಥಿತಿಯಲ್ಲಿ ಸ್ಥಿರವಾಗಿರಲಿಕ್ಕೆ ಸಾಧನವಾಗುತ್ತದೆ. ೩

ವಿಷಯಗಳಲ್ಲಿಯೂ, ಕರ್ಮಗಳಲ್ಲಿಯೂ ಅನಾಸಕ್ತನಿದ್ದು ಯಾವನು ತನ್ನ ಎಲ್ಲ ಸಂಕಲ್ಪಗಳನ್ನು ತೊರೆದಿರುವನೋ ಅವನಿಗೆ ಯೋಗಸಿದ್ಧಿಯನ್ನು ಪಡೆದವನೆನ್ನುತ್ತಾರೆ. ೪

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ |
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥

ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ |
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ |
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ |
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥

ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು |
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥

ಮನುಷ್ಯನು ತನ್ನನ್ನು ತಾನೇ ಉದ್ಧರಿಸತಕ್ಕದ್ದು. ತನ್ನನ್ನು ತಾನು ಎಂದೂ ಕುಗ್ಗಿಸತಕ್ಕದ್ದಲ್ಲ. ಮನುಷ್ಯನು ತಾನೇ ತನ್ನ ಶತ್ರುವು, ತಾನೇ ತನ್ನ ಗೆಳೆಯನು. ೫

ಯಾವನು ತನ್ನನ್ನು ತಾನೇ ಗೆದ್ದನೋ ಅವನು ತಾನೇ ತನ್ನ ಗೆಳೆಯನು. ಯಾವನು ಆತ್ಮಜ್ಞಾನ ರಹಿತನೋ ಅವನು ತನ್ನನ್ನು ತಾನೇ ಹಗೆಯಂತೆ ದ್ವೇಷಿಸುವವನೆನ್ನಬೇಕು. ೬

ಜಿತೇಂದ್ರಿಯನಾದ ಶಾಂತಪುರುಷನ ಅಂತರಾತ್ಮನು ಶೀತೋಷ್ಣ ಸುಖದುಃಖ ಮಾನಾಪಮಾನಗಳೆಂಬ ದ್ವಂದ್ವಗಳ ವಿಷಯಕ್ಕೆ ಸಮಚಿತ್ತವುಳ್ಳವನಿರುವನು. ೭

ಯಾವನ ಆತ್ಮವು ಜ್ಞಾನವಿಜ್ಞಾನಗಳಿಂದ ತೃಪ್ತವೋ ಯಾವನು ಜಿತೇಂದ್ರಿಯನೋ ಯಾವನ ಆತ್ಮವು ಪರಮಾತ್ಮನಲ್ಲಿ ಸ್ಥಿರವೋ ಯಾವನು ಕಟ್ಟಿಗೆ ಕಲ್ಲು ಕಾಂಚನಗಳನ್ನು ಸಮದೃಷ್ಟಿಯಿಂದ ನೋಡುವನೋ ಅವನು ಯೋಗಸಿದ್ಧನೆಂದೆನ್ನುವರು. ೮

ಒಳ್ಳೇ ಅಂತಃಕರಣದ ಗೆಳೆಯ, ಹಗೆ, ಉದಾಸೀನ, ಮಧ್ಯಸ್ಥ, ದ್ವೇಷಪಾತ್ರ, ಬಂಧು, ಸಾಧುಗಳು, ಪಾಪಿಗಳು ಇವರೆಲ್ಲರ ವಿಷಯಕ್ಕೆ ಸಮಬುದ್ಧಿಯುಳ್ಳವನು ಶ್ರೇಷ್ಠಪುರುಷನು. ೯

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ ॥ ೧೧ ॥

ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥

ಏಕಾಂತದಲ್ಲಿ ಒಬ್ಬನೇ ಚಿತ್ತವನ್ನು ಸಂಯಮಿಸಿ ಆಶೆಯನ್ನು ತೊರೆದು ವಿಷಯ ಪಾಶಗಳನ್ನು ಹರಿದು ಯೋಗಿಯು ಸತತ ಯೋಗಾಭ್ಯಾಸದಲ್ಲಿ ತೊಡಗಬೇಕು. ೧೦

ಪವಿತ್ರ ಸ್ಥಲದಲ್ಲಿ ತನ್ನ ಸ್ಥಿರವಾದ ಆಸನವನ್ನು ಸ್ಥಾಪಿಸಬೇಕು. ಆಸನಭೂಮಿಯು ಬಹಳ ಎತ್ತರ ಅಥವಾ ಬಹಳ ತಗ್ಗು ಇರಬಾರದು. ಬಟ್ಟೆ, ಅದರ ಕೆಳಗೆ ಮೃಗಚರ್ಮ, ಅದರ ಕೆಳಗೆ ಕುಶಹುಲ್ಲು ಹೀಗೆ ಆಸನವಿರಬೇಕು. ೧೧

ಅಲ್ಲಿ ಆಸನಸ್ಥನಾಗಿ ಆತ್ಮಶುದ್ಧಿಗಾಗಿ ಮನಸ್ಸನ್ನು ಏಕಾಗ್ರಮಾಡಿ ಚಿತ್ತ ಇಂದ್ರಿಯಗಳನ್ನು ಸಂಯಮಿಸಿ ಯೋಗದಲ್ಲಿ ರತನಾಗಬೇಕು. ೧೨

ಬೆನ್ನು, ಗೋಣು, ತಲೆ ಇವುಗಳನ್ನು ಒಂದೇ ರೇಷೆಯಲ್ಲಿ ನಿಲ್ಲಿಸಿ ಅಲ್ಲಾಡದಂತೆ ಸ್ಥಿರಮಾಡಬೇಕು. ಅತ್ತಿತ್ತ ದಿಕ್ಕುಗಳ ಕಡೆಗೆ ನೋಡದೆ ದೃಷ್ಟಿಯನ್ನು ತನ್ನ ಮೂಗಿನ ತುದಿಯಲ್ಲಿ ಏಕಾಗ್ರಮಾಡಬೇಕು. ೧೩

ಶಾಂತಚಿತ್ತನಾಗಿ ಭಯವನ್ನು ತೊರೆದು ಬ್ರಹ್ಮಚರ್ಯ ವ್ರತವನ್ನಾಚರಿಸುತ್ತ ಮನವನ್ನು ಸಂಯಮಿಸಿ ನನ್ನನ್ನು ಧ್ಯಾನಿಸುತ್ತ ನನ್ನಲ್ಲಿ ನಿಷ್ಠೆ ಇಟ್ಟು ಯೋಗಯುಕ್ತನಾಗಬೇಕು. ೧೪

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ |**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ |**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು |**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ |**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ |**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥೧೯॥**

ಈ ಪ್ರಕಾರ ಯಾವಾಗಲೂ ನನ್ನನ್ನು ಧ್ಯಾನಿಸಿ ಯೋಗಾಭ್ಯಾಸ ಮಾಡುವ ಯೋಗಿಯ ಮನಸ್ಸು ಅವನ ವಶಕ್ಕೆ ಬಂದು ಸಾಯುಜ್ಯಮುಕ್ತಿಯನ್ನು ದೊರಕಿಸಿ ಕೊಡುವಂಥ ಶಾಂತಿಯು ಅವನಿಗೆ ಪ್ರಾಪ್ತವಾಗುವದು. ೧೫

ಅರ್ಜುನನೇ, ತಿನಸುಬಕ್ಕನಿಗೆ ಅಥವಾ ನಿರಾಹಾರಿಗೆ, ಅತಿ ನಿದ್ರೆ ಮಾಡುವವನಿಗೆ ಅಥವಾ ಅತಿ ಜಾಗರಣೆಮಾಡುವವನಿಗೆ, ಯೋಗವು ಸಾಧ್ಯವಿಲ್ಲ. ೧೬

ಮಿತಾಹಾರ ವಿಹಾರಮಾಡುವವನ, ಕರ್ಮಮಾಡುವಾಗ ಮಿತಾಯಾಸಪಡುವವನ, ನಿದ್ರೆಜಾಗರಣೆಗಳಲ್ಲಿ ಮಿತನಾಗಿರುವವನ, ಯೋಗಸಾಧನವು ದುಃಖನಾಶಕವಾಗುವದು. ೧೭

ಬಿಗಿಹಿಡಿಯಲ್ಪಟ್ಟ ಮನವು ಆತ್ಮನಲ್ಲಿ ಸ್ಥಿರವಾಗಿ ಸರ್ವಕಾಮನೆಗಳ ವಿಷಯದಲ್ಲಿ ತೃಷ್ಣಾರಹಿತವಾಯಿತೆಂದರೆ ಮನುಷ್ಯನು ಯೋಗಯುಕ್ತನಾದನೆನ್ನುವರು. ೧೮

ಆತ್ಮಯೋಗದ ಅಭ್ಯಾಸಮಾಡುತ್ತಿರುವ ಮನವನ್ನು ಬಿಗಿಹಿಡಿದ ಯೋಗಿಯು ನಿವಾತಸ್ಥಲದಲ್ಲಿಯ ಹೊಯ್ದಾಡದಿರುವ ದೀಪದಂತೆ ನಿಶ್ಚಲನೂ ಶಾಂತನೂ ಇರುವನು. ೧೯

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ |
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥
ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ |
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥
ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ |
ಯಸ್ಮಿಂಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥
ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ |
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥೨೩॥
ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ |
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥

ಯೋಗಾಭ್ಯಾಸದಿಂದ ನಿರೋಧಿಸಲ್ಪಟ್ಟ ಚಿತ್ತವು ಯಾವ ಸ್ಥಿತಿಯಲ್ಲಿ ಸ್ಥಿರವಾಗಿರುವದೋ, ಆತ್ಮನಿಂದ ಆತ್ಮನನ್ನೇ ಅವಲೋಕಿಸುತ್ತ ಯಾವ ಅವಸ್ಥೆಯಲ್ಲಿ ಮನುಷ್ಯನು ತುಷ್ಟನಾಗಿರುವನೋ, ೨೦

ಯಾವ ಸ್ಥಿತಿಯಲ್ಲಿ ಪುರುಷನು ಇಂದ್ರಿಯಗಳಿಗೆ ಅಗೋಚರವಾದ ಹಾಗೂ ಕೇವಲ ಬುದ್ಧಿಗಮ್ಯ ಅನಂತ ಸುಖವನ್ನು ಪಡೆಯುವನೋ, ಹಾಗೂ ಎಲ್ಲಿ ಒಮ್ಮೆ ಸ್ಥಿರನಾದನೆಂದರೆ ಅಚ್ಯುತನಾಗಿರುವನೋ, ೨೧

ಯಾವದನ್ನು ದೊರಕಿಸಿದನೆಂದರೆ ಮನುಷ್ಯನು ಇದಕ್ಕೂ ಹೆಚ್ಚಿನದೇನೂ ಇಲ್ಲವೆಂದೆಣಿಸುವನೋ, ಯಾವ ಸ್ಥಿತಿಯಲ್ಲಿ ಸ್ಥಿರನಾದನೆಂದರೆ ಯಾವ ಘೋರ ದುಃಖವೂ ಮನುಷ್ಯನನ್ನು ಅಲ್ಲಾಡಿಸಲಾರದೋ ೨೨

ಆ ಸ್ಥಿತಿಯೇ ದುಃಖವನ್ನು ಆಮೂಲಾಗ್ರವಾಗಿ ನಾಶಗೊಳಿಸುವ ಯೋಗವೆಂಬ ಸ್ಥಿತಿಯು. ಮನವನ್ನು ದಣಿಯಗೊಡದೇ ನಿಶ್ಚಯದಿಂದ ಆ ಯೋಗವನ್ನು ಸಾಧಿಸತಕ್ಕದ್ದು. ೨೩

ಸಂಕಲ್ಪದಿಂದುತ್ಪನ್ನವಾಗುವ ಎಲ್ಲ ಕಾಮನೆಗಳನ್ನು ನಿಶ್ಶೇಷವಾಗಿ ಬಿಟ್ಟು ಎಲ್ಲ ಕಡೆಯಿಂದಲೂ ಇಂದ್ರಿಯ ಸಮೂಹವನ್ನು ಮನಸ್ಸಿನಿಂದಲೇ ಸಂಯಮಿಸಿ, ೨೪

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥**

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಮೆಲ್ಲಮೆಲ್ಲನೆ ಧೈರ್ಯಯುಕ್ತ ಬುದ್ಧಿಯಿಂದ ಶಾಂತಿಯನ್ನು ದೊರಕಿಸಬೇಕು. ಮನಸ್ಸನ್ನು ಆತ್ಮನಲ್ಲಿ ಸ್ಥಿರಮಾಡಿ ಮಿಕ್ಕ ಎಲ್ಲ ಚಿಂತೆಯನ್ನು ಬಿಟ್ಟು ಬಿಡಬೇಕು. ೨೫

ಅಸ್ಥಿರವಾದ ಚಂಚಲ ಮನಸ್ಸು ಯಾವ ಯಾವ ಮಾರ್ಗಗಳಿಂದ ಪ್ರವರ್ತಿಸಲೆತ್ನಿಸುವದೋ ಅಲ್ಲಲ್ಲಿ ಅದನ್ನು ಕಟ್ಟಿ ವಶಮಾಡಿಕೊಂಡು ಆತ್ಮನಲ್ಲಿ ಸ್ಥಿರಮಾಡಬೇಕು. ೨೬

ಹೀಗೆ ಪ್ರಶಾಂತ ಮನಸ್ಸುಳ್ಳ, ರಜೋರಹಿತ, ಬ್ರಹ್ಮನಿಷ್ಠನಾದ ನಿಷ್ಪಾಪಯೋಗಿಗೆ ಉತ್ತಮ ಸುಖವು ದೊರಕುವದು. ೨೭

ಯೋಗಿಯು ಈ ರೀತಿಯಾಗಿ ಯಾವಾಗಲೂ ಯೋಗವನ್ನು ಆಚರಿಸುತ್ತಿದ್ದರೆ ಪಾಪರಹಿತನಾಗಿ ಅವನು ಅನಾಯಾಸದಿಂದ ಬ್ರಹ್ಮಯೋಗದಿಂದುಂಟಾಗುವ ಅತ್ಯಂತ ಶ್ರೇಷ್ಠ ಸುಖವನ್ನನುಭವಿಸುವನು. ೨೮

ಯೋಗಯುಕ್ತನು ಸರ್ವತ್ರ ಸಮದೃಷ್ಟಿಯುಳ್ಳವನಾಗಿ ಸರ್ವಭೂತಗಳಲ್ಲಿ ಆತ್ಮನನ್ನೂ ಆತ್ಮನಲ್ಲಿ ಸರ್ವಭೂತಗಳನ್ನೂ ನೋಡುವನು. ೨೯

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ |**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**
**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ |**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ॥ ೩೧ ॥**
**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ |**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥**

**ಅರ್ಜುನ ಉವಾಚ—**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ಸ್ಥಿತಿಂ ಸ್ಥಿರಾಮ್ ॥ ೩೩ ॥**
**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ |**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

ಯಾವನು ನನ್ನನ್ನು ಎಲ್ಲಕಡೆಯಲ್ಲಿಯೂ ಎಲ್ಲವನ್ನು ನನ್ನಲ್ಲಿಯೂ ನೋಡುವನೋ ಅವನಿಂದ ನಾನು ದೂರಾಗುವದಿಲ್ಲ. ನನ್ನಿಂದ ಅವನು ದೂರಾಗುವದಿಲ್ಲ. ೩೦

ಪರಮಾತ್ಮನ ಏಕತ್ವದ ಜ್ಞಾನದಲ್ಲಿ ಸ್ಥಿರನಾಗಿ ಸರ್ವಭೂತಗಳಲ್ಲಿರುವ ನನ್ನನ್ನು ಯಾವನು ಭಜಿಸುತ್ತಿರುವನೋ ಅವನು ಎಲ್ಲ ಬಗೆಯ ಕರ್ಮಗಳನ್ನು ಮಾಡುತ್ತಿದ್ದರೂ ನನ್ನಲ್ಲಿ ಸ್ಥಿರನಿರುವನು. ೩೧

ಅರ್ಜುನಾ, ಸುಖವೇ ಆಗಲಿ, ದುಃಖವೇ ಆಗಲಿ, ಇವೆರಡೂ ವಿಷಯಗಳಲ್ಲಿ ಯಾವನು 'ತನ್ನಂತೆ ಪರರು' ಎಂದು ಎಲ್ಲರನ್ನೂ ಸಮವಾಗಿ ಬಗೆಯುವನೋ ಆ ಯೋಗಿಯೇ ಎಲ್ಲಕ್ಕೂ ಶ್ರೇಷ್ಠನೆನಿಸುವನು. ೩೨

**ಅರ್ಜುನನು ಅಂದದ್ದು**—ಕೃಷ್ಣನೇ, ಮನಸ್ಸು ಚಂಚಲವಾದುದರಿಂದ ನೀನು ಉಪದೇಶಿಸಿದ ಸಮತ್ವದಿಂದ ಪ್ರಾಪ್ತವಾಗುವ ಯೋಗವು ಸ್ಥಿರವಾಗಿ ನೆಲೆಸುವ ಬಗೆ ಹೇಗೆಂಬುದನ್ನು ನಾನು ಅರಿಯೆನು. ೩೩

ಕೃಷ್ಣಾ, ಮನವು ಚಂಚಲವು, ಪುಂಡವು, ಬಲಿಷ್ಠವು ಮತ್ತು ಬಿರುಸು. ಮನಸ್ಸನ್ನು ಬಿಗಿಹಿಡಿಯುವ ಕಾರ್ಯವು ಗಾಳಿಯನ್ನು ಕಟ್ಟುವ ಕಾರ್ಯದಷ್ಟೇ ಕಠಿನವಾದದ್ದು. ೩೪

ಶ್ರೀಭಗವಾನುವಾಚ—

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ |
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥
ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ |
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥

ಅರ್ಜುನ ಉವಾಚ—

ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ |
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥
ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ |
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥

**ಶ್ರೀಕೃಷ್ಣನು ಅಂದದ್ದು**— ಅರ್ಜುನಾ, ಮನವು ಚಂಚಲವೂ ನಿಗ್ರಹಿಸಲು ಕಠಿನವೂ ಎಂಬ ಮಾತು ನಿಃಸಂಶಯವು. ಆದರೆ ವೈರಾಗ್ಯದಿಂದಲೂ ಅಭ್ಯಾಸದಿಂದಲೂ ಅದನ್ನು ಬಿಗಿಹಿಡಿಯಲು ಸಾಧ್ಯವು. ೩೫

ಆತ್ಮಸಂಯಮವಿಲ್ಲದೆ ಯೋಗವು ಅಸಾಧ್ಯವೆಂದು ನನ್ನ ಅಭಿಪ್ರಾಯವು. ಆದರೆ ಆತ್ಮಸಂಯಮವುಳ್ಳವನು ಯತ್ನಿಸಲಾಗಿ ಉಪಾಯದಿಂದ ಈ ಯೋಗವು ಪ್ರಾಪ್ತವಾಗಬಹುದು. ೩೬

**ಅರ್ಜುನನು ಅಂದದ್ದು**— ಕೃಷ್ಣಾ, ಶ್ರದ್ಧೆಯಿದ್ದರೂ ಯತ್ನಮಾಡದೇ ಇದ್ದುದರಿಂದ ಯಾವನ ಮನಸ್ಸು ಯೋಗದಿಂದ ಚ್ಯುತವಾಗಿ ಯಾವನಿಗೆ ಯೋಗಸಿದ್ಧಿಯು ಪ್ರಾಪ್ತವಾಗದೇ ಹೋಗಿರುವದೋ ಅವನಿಗೆ ಯಾವ ಗತಿಯಾಗುವದು ? ೩೭

ಶ್ರೀಕೃಷ್ಣನೇ, ಮೋಹಗ್ರಸ್ತನಾದುದರಿಂದ ಬ್ರಹ್ಮಮಾರ್ಗದಲ್ಲಿ ಸ್ಥಿರನಾಗದೇ ಇದ್ದವನು ಇಹಪರ ಎಂಬ ಎರಡೂ ಲೋಕಗಳಿಂದ ಭ್ರಷ್ಟನಾಗಿ ಒಡೆದ ಮೋಡದಂತೆ ಪೂರ್ಣ ನಾಶಕ್ಕಂತೂ ಗುರಿಯಾಗುವದಿಲ್ಲವಲ್ಲ? ೩೮

ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ |
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥

ಶ್ರೀಭಗವಾನುವಾಚ—

ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ |
ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥

ಪ್ರಾಪ್ಯ ಪುಣ್ಯಕೃತಾಂಲ್ಲೋಕಾನುಷಿತ್ವಾ ಶಾಶ್ವತೀಃ ಸಮಾಃ |
ಶುಚೀನಾಂಶ್ರೀಮತಾಂಗೇಹೇಯೋಗಭ್ರಷ್ಟೋಽಭಿಜಾಯತೇ ॥೪೧॥

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ |
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ |
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥

ಕೃಷ್ಣಾ, ಈ ನನ್ನ ಸಂಶಯದ ಬೇರನ್ನು ಸಹ ನೀನು ಕಿತ್ತಿಹಾಕಬೇಕು. ನಿನ್ನ ಹೊರ್ತು ಈ ಸಂಶಯದ ಪರಿಹಾರ ಮಾಡುವವರು ಇನ್ನಾರೂ ಇಲ್ಲ. ೩೯

**ಶ್ರೀಕೃಷ್ಣನು ಅಂದದ್ದು—** ಪಾರ್ಥಾ, ಅವನು ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ನಾಶ ಹೊಂದಲಾರನು. ಸ್ವಲ್ಪಾದರೂ ಶುಭವನ್ನು ಮಾಡಿದವನು ಕೆಟ್ಟ ಗತಿಗೆ ಎಂದೂ ಹೋಗನು. ೪೦

ಸ್ವರ್ಗ ಲೋಕಗಳನ್ನು ಪಡೆದು ಬಹು ಕಾಲದ ವರೆಗೆ ಅಲ್ಲಿ ವಾಸಮಾಡಿ ಯೋಗಭ್ರಷ್ಟನು ಪವಿತ್ರವಾದ ಸಿರಿವಂತರ ಮನೆಯಲ್ಲಿ ಹುಟ್ಟುವನು. ೪೧

ಅಥವಾ ಬುದ್ಧಿವಂತರಾದ ಯೋಗಿಗಳ ಕುಲದಲ್ಲಿ ಜನ್ಮತಾಳುವನು. ಈ ತರದ ಜನ್ಮವು ಈ ಲೋಕದಲ್ಲಿ ಬಹಳೇ ದುರ್ಲಭವು. ೪೨

ಪಾಂಡವನೇ, ಅಲ್ಲಿ ಅವನಿಗೆ ಪೂರ್ವಜನ್ಮದ ಸುಬುದ್ಧಿಯು ದೊರೆಯುವದು. ಅವನು ಅಲ್ಲಿ ಪುನಃ ಯೋಗಸಿದ್ಧಿಗಾಗಿ ಯತ್ನ ಮಾಡುವನು. ೪೩

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ |
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ||೪೪||
ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ |
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂಗತಿಮ್ ||೪೫||
ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ |
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ||೪೬||
ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ |
ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ||೪೭||

ಇತಿ ಶ್ರೀಮದ್ಭಗವದ್ಗೀತಾಯಾಂ ಆತ್ಮಸಂಯಮಯೋಗೋ ನಾಮ
ಷಷ್ಠೋಽಧ್ಯಾಯಃ

ಆ ಪೂರ್ವಾಭ್ಯಾಸದ ಬಲದಿಂದಲೇ ಅವನು ಪುನಃ ಯೋಗದಲ್ಲಿ ಪ್ರವರ್ತಿಸುವನು. ಈ ಯೋಗದ ವಿಷಯಕ್ಕೆ ಕೇವಲ ಜಿಜ್ಞಾಸೆಯುಳ್ಳವನು ಸಹ ಶಬ್ದಬ್ರಹ್ಮದಾಚೆಗೆ ಹೋಗುವನು. ೪೪

ಒಳ್ಳೇ ಆಯಾಸಪಟ್ಟು ಯತ್ನಿಸುತ್ತಿರಲು ಯೋಗಿಯು ನಿಷ್ಪಾಪನಾಗಿ ಅನೇಕ ಜನ್ಮಗಳ ತರುವಾಯ ಜ್ಞಾನಿಯಾಗಿ ಆ ಮೇಲೆ ಪರಮಗತಿಯನ್ನು ಹೊಂದುವನು. ೪೫

ತಪಸ್ವಿಗಳಿಗಿಂತ ಯೋಗಿಯು ಹೆಚ್ಚಿನವನು, ಜ್ಞಾನಿಗಳಿಗಿಂತಲೂ ಅವನು ಹೆಚ್ಚಿನವನು. ಕರ್ಮಿಗಳಿಗಿಂತಲೂ ಅವನು ಶ್ರೇಷ್ಠನು. ಆದುದರಿಂದ ಅರ್ಜುನಾ, ನೀನು ಯೋಗಿಯಾಗು. ೪೬

ಎಲ್ಲ ಯೋಗಿಗಳಲ್ಲಿ ಮತ್ತೆ ತನ್ನ ಅಂತರಾತ್ಮನನ್ನು ನನ್ನಲ್ಲಿ ಸ್ಥಿರವಾಗಿಟ್ಟು ಶ್ರದ್ಧೆಯುಳ್ಳವನಾಗಿ ಯಾವನು ನನ್ನನ್ನು ಭಜಿಸುವನೋ ಅವನು ಎಲ್ಲಕ್ಕೂ ಹೆಚ್ಚಿನವನು. ೪೭

ಶ್ರೀಮದ್ಭಗವದ್ಗೀತೆಯ ಸುಲಭ, ಸರಳ ಕನ್ನಡ ಭಾಷಾಂತರದ
೬ ನೆಯ ಅಧ್ಯಾಯವು ಸಮಾಪ್ತವು.

---

# ಏಳನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥
ಜ್ಞಾನಂ ತೇಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥
ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ತ್ವತಃ ॥ ೩ ॥
ಭೂಮಿರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥೫॥

ಶ್ರೀಕೃಷ್ಣನು ಅಂದದ್ದು—ನನ್ನನ್ನಾಶ್ರಯಿಸಿ ನನ್ನಲ್ಲಿ ಚಿತ್ತವನ್ನಿಟ್ಟು ಯೋಗಾಭ್ಯಾಸ ಮಾಡುತ್ತಿರಲು ನಿನಗೆ ಸಂಪೂರ್ಣ ಹಾಗೂ ಸಂಶಯ ರಹಿತ ಜ್ಞಾನವು ಆಗುವ ಬಗೆಯನ್ನು ಹೇಳುವೆನು ಕೇಳು. ೧

ವಿಜ್ಞಾನಸಹಿತವಾದ ಜ್ಞಾನವನ್ನು ನಾನು ನಿನಗೆ ಪೂರಾ ಉಪದೇಶಿಸುತ್ತಿರುವೆನು. ಅದನ್ನರಿತ ಮೇಲೆ ಇಲ್ಲಿ ಪುನಃ ಅರಿತುಕೊಳ್ಳತಕ್ಕುದೇನೂ ಉಳಿಯುವದಿಲ್ಲ. ೨

ಸಾವಿರಾರು ಜನರಲ್ಲಿ ಯಾವನಾದರೊಬ್ಬನು ಸಿದ್ಧಿಗಾಗಿ ಹೆಣಗುವನು. ಹೀಗೆ ಹೆಣಗಿ ಸಿದ್ಧರಾದವರಲ್ಲಿ ನನ್ನನ್ನು ತತ್ವದೃಷ್ಟಿಯಿಂದರಿತುಕೊಳ್ಳುವವನು ಎಲ್ಲಿಯಾದರೂ ಒಬ್ಬನು. ೩

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನ, ಬುದ್ಧಿ, ಅಹಂಕಾರ ಹೀಗೆ ನನ್ನ ಪ್ರಕೃತಿಯು ಎಂಟು ವಿಧವು. ೪

ಇದು ಅಪರಾ ಪ್ರಕೃತಿಯು. ಯಾತರಿಂದ ಈ ಜಗತ್ತು ಧರಿಸಲ್ಪಟ್ಟಿರುವದೋ ಆ ಜೀವರೂಪ ನನ್ನ ಪರಾಪ್ರಕೃತಿಯು ಇದಕ್ಕೂ ಬೇರೆ ಎಂದು ತಿಳಿ. ೫

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥

ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥

ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥೧೦॥

ಎಲ್ಲ ಭೂತಗಳ ಉಗಮವು ಈ ಪ್ರಕೃತಿಯಿಂದಲೇ ಎಂಬದನ್ನು ಚನ್ನಾಗಿ ಲಕ್ಷದಲ್ಲಿಡು. ನಾನೇ ಈ ಇಡೀ ಜಗತ್ತಿನ ಉತ್ಪತ್ತಿಲಯಗಳ ಕಾರಣನು. ೬

ಧನಂಜಯನೇ, ನನಗೂ ಹೆಚ್ಚಿನದೆಂಬದು ಇನ್ನಾವುದೂ ಇಲ್ಲ. ಸೂತ್ರದಲ್ಲಿ ಪೋಣಿಸಲ್ಪಟ್ಟ ಮಣಿಗಳಂತೆ ಇವೆಲ್ಲವೂ ನನ್ನಲ್ಲಿರುವವು. ೭

ಪ್ರವಾಹಿಗಳಲ್ಲಿ ನಾನು ಸಾರರೂಪರಸನು. ಸೂರ್ಯಚಂದ್ರರ ಪ್ರಕಾಶವೂ ನಾನೇ. ಸರ್ವವೇದಗಳಲ್ಲಿ ಓಂಕಾರವು ನಾನು, ಆಕಾಶದಲ್ಲಿ ಶಬ್ದವು ನಾನು, ಮನುಷ್ಯರಲ್ಲಿಯ ಪೌರುಷವಾದರೂ ನಾನೇ. ೮

ಪೃಥಿವಿಯಲ್ಲಿ ಸುಗಂಧವು ನಾನು, ಅಗ್ನಿಯಲ್ಲಿ ತೇಜವು ನಾನು, ಸರ್ವಭೂತಗಳಲ್ಲಿ ಜೀವನವು ನಾನು, ತಪಸ್ವಿಗಳ ತಪಸ್ಸಾದರೂ ನಾನೇ. ೯

ಪಾರ್ಥಾ, ಸರ್ವಭೂತಗಳ ಸನಾತನ ಬೀಜವಾದರೂ ನಾನೇ ಎಂದು ತಿಳಿ. ಬುದ್ಧಿವಂತರ ಬುದ್ಧಿಯೂ ನಾನೇ, ತೇಜಸ್ವಿಗಳ ತೇಜವೂ ನಾನೇ. ೧೦

ಬಲಂ ಬಲವಂತಾಂಚಾಹಂ ಕಾಮರಾಗವಿವರ್ಜಿತಂ |
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥

ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ |
ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥

ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ |
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥ ೧೩ ॥

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ |
ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥

ಬಲವಂತರಲ್ಲಿರುವ ಕಾಮನೆ ಹಾಗೂ ಆಸಕ್ತಿರಹಿತವಾದ ಬಲವಾದರೂ ನಾನೇ. ಅರ್ಜುನಾ, ಭೂತಗಳಲ್ಲಿ ಧರ್ಮಕ್ಕೆ ಅವಿರುದ್ಧವಾಗಿರುವ ಕಾಮವಾದರೂ ನಾನೇ. ೧೧

ಸಾತ್ವಿಕ ರಾಜಸ ತಾಮಸ ಎಂಬ ಎಲ್ಲ ಸೃಷ್ಟ ಪದಾರ್ಥಗಳು ನನ್ನಿಂದಲೇ ಹುಟ್ಟಿದವೆಂದು ತಿಳಿ. ನಾನು ಅವುಗಳಲ್ಲಿಲ್ಲ, ಆದರೆ ಅವು ನನ್ನಲ್ಲಿರುವವು. ೧೨

ಈ ಮೂರು ಗುಣಗಳಿಂದ ಯುಕ್ತವಾದ ಪದಾರ್ಥಗಳ ಮೂಲಕ ಈ ಜಗತ್ತು ಮೋಹಿತವಾಗಿ ಇದಕ್ಕೂ ಶ್ರೇಷ್ಠ ಹಾಗೂ ಅವ್ಯಯನಾದ ನನ್ನನ್ನು ಅರಿಯುವದಿಲ್ಲ. ೧೩

ತ್ರಿಗುಣಮಯವಾದ ಈ ದಿವ್ಯಮಾಯೆಯು ದಾಟಲಿಕ್ಕೆ ಕಠಿನವು. ಯಾರು ನನ್ನನ್ನೇ ಭಜಿಸುವರೋ ಅವರು ಈ ಮಾಯೆಯೊಳಗಿಂದ ಪಾರಾಗುವರು. ೧೪

ಈ ಮಾಯೆಯಿಂದ ಯಾರ ಜ್ಞಾನವು ನಷ್ಟವಾಗಿರುವದೋ ಯಾರು ಅಸುರ ಬುದ್ಧಿಯನ್ನಾಶ್ರಯಿಸಿರುವರೋ ಆ ದುಷ್ಟ ಮೂಢ ನರಾಧಮರು ನನ್ನನ್ನು ಭಜಿಸುವದಿಲ್ಲ. ೧೫

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ |
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ |
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮಪ್ರಿಯಃ ॥೧೭॥

ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ |
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥ ೧೮ ॥

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ |
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥

ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ |
ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥

ಅರ್ಜುನಾ, ದುಃಖಿತರು, ಜ್ಞಾನವನ್ನರಿಯಲಿಚ್ಛಿಸುವವರು, ಯಾವದಾದರೊಂದು ಆಶೆಯುಳ್ಳವರು, ಜ್ಞಾನಿಗಳು ಹೀಗೆ ನಾಲ್ಕು ಬಗೆಯ ಪುಣ್ಯವಂತರು ನನ್ನನ್ನು ಭಜಿಸುವರು. ೧೬

ಅವರೊಳಗೆ ಅನನ್ಯಭಕ್ತಿಯುಳ್ಳ ನಿತ್ಯಯುಕ್ತ ಜ್ಞಾನಿಯೇ ಶ್ರೇಷ್ಠನು. ನಾನು ಜ್ಞಾನಿಗಳಿಗೆ ಅತ್ಯಂತ ಪ್ರಿಯನು. ಅವರಾದರೂ ನನಗೆ ಪ್ರಿಯರು. ೧೭

ಇವರೆಲ್ಲರೂ ಸಜ್ಜನರೇ. ಆದರೆ ಜ್ಞಾನಿಯೆಂಬವನು ಸಾಕ್ಷಾತ್ ನಾನೇ ಎಂದು ನನ್ನ ಮತವು. ಯಾಕೆಂದರೆ ಯೋಗಯುಕ್ತನಾದ ಜ್ಞಾನಿಯು ಅತ್ಯುತ್ತಮಗತಿಯಾದ ನನ್ನಲ್ಲಿ ಸ್ಥಿರನಾಗಿ ನೆಲೆಸುವನು. ೧೮

ಬಹಳ ಜನ್ಮಗಳ ತರುವಾಯ ಇದೆಲ್ಲವೂ ವಾಸುದೇವನೇ ಎಂಬ ಪ್ರತೀತಿಯಾಗಿ ಜ್ಞಾನಿಯು ನನ್ನ ಬಳಿಗೆ ಬರುವನು. ಇಂತಹ ಮಹಾತ್ಮನು ಬಹಳೇ ವಿರಲನು. ೧೯

ತಮ್ಮ ತಮ್ಮ ಪ್ರಕೃತಿಯಿಂದ ನಿಯತವಾದ ಬೇರೆ ಬೇರೆ ಕಾಮನೆಗಳಿಂದ ಮೋಹಿತರಾಗಿ ಜನರು ಆಯಾ ನಿಯಮಗಳಿಗನುಸರಿಸಿ ಬೇರೆ ಬೇರೆ ದೇವತೆಗಳನ್ನು ಭಜಿಸುವರು. ೨೦

ಯೋಯೋ ಯಾಂಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ೨೧ ॥

ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿತಾನ್ ॥ ೨೨ ॥

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।
ದೇವಾನ್ದೇವಯಜೋ ಯಾಂತಿಮದ್ಭಕ್ತಾ ಯಾಂತಿ ಮಾಮಪಿ ॥ ೨೩ ॥

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ ॥ ೨೪ ॥

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ
॥ ೨೫ ॥

ಯಾವ ಭಕ್ತನು ಯಾವ ದೇವತೆಯನ್ನು ಶ್ರದ್ಧೆಯಿಂದ ಭಜಿಸಲಿಚ್ಛಿಸುವನೋ ಅವನ ಆ ಶ್ರದ್ಧೆಯನ್ನೇ ನಾನು ಸ್ಥಿರಗೊಳಿಸುವೆನು. ೨೧

ಆ ಶ್ರದ್ಧೆಯಿಂದ ಯುಕ್ತನಾಗಿ ಅವನು ಆರಾಧಿಸುವನು. ಆ ಮೇಲೆ ನಾನು ನಿಯಮಿಸಿದ ಆಯಾ ಕಾಮನೆಗಳ ಫಲಗಳೇ ಅವನಿಗೆ ದೊರೆಯುವವು. ೨೨

ಆ ಅಲ್ಪಬುದ್ಧಿಯುಳ್ಳವರ ಆ ಫಲಗಳು ಅಲ್ಪಕಾಲಿಕವಿರುವವು. ದೇವತೆಗಳನ್ನು ಪೂಜಿಸುವವರು ದೇವತೆಗಳೆಡೆಗೆ ಹೋಗುವರು. ನನ್ನನ್ನು ಭಜಿಸುವವರು ನನ್ನೆಡೆಗೆ ಬರುವರು. ೨೩

ನನ್ನ ಅತ್ಯಂತ ಶ್ರೇಷ್ಠ ಹಾಗೂ ಉತ್ತಮೋತ್ತಮ ರೂಪವನ್ನರಿಯದೆ, ಅವ್ಯಕ್ತವಿದ್ದ ನಾನು ವ್ಯಕ್ತನಾಗಿರುವೆನೆಂದು ಬದ್ಧಿಗೇಡಿಗಳು ತಿಳಿಯುವರು. ೨೪

ಯೋಗಮಾಯೆಯಿಂದ ಮರೆಮಾಡಲ್ಪಟ್ಟದ್ದರಿಂದ ನಾನು ಎಲ್ಲರಿಗೂ ಪ್ರಕಟನಾಗಿ ತೋರುವದಿಲ್ಲ. ಜನ್ಮರಹಿತ ಅವ್ಯಯನಾದ ನನ್ನನ್ನು ಮೂಢರು ಅರಿಯುವದಿಲ್ಲ. ೨೫

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ |
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥
ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ |
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥
ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ |
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥ ೨೮ ॥
ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ |
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ ॥ ೨೯ ॥
ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ |
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಜ್ಞಾನವಿಜ್ಞಾನಯೋಗೋ ನಾಮ
ಸಪ್ತಮೋಽಧ್ಯಾಯಃ

ಹಿಂದೆ ಆಗಿಹೋದ, ಸದ್ಯಕ್ಕೆ ಇದ್ದ, ಮುಂದೆ ಆಗುವ ಎಲ್ಲ ಭೂತಗಳನ್ನು ನಾನು ಬಲ್ಲೆನು. ಆದರೆ ನನ್ನನ್ನು ಯಾರೂ ಅರಿಯರು. ೨೬

ಯಾಕಂದರೆ, ಅರ್ಜುನಾ, ಇಚ್ಛೆ, ದ್ವೇಷಾದಿಗಳಿಂದುತ್ಪನ್ನವಾದ ದ್ವಂದ್ವಗಳ ಮೋಹದಿಂದ ಈ ಸಂಸಾರದಲ್ಲಿ ಎಲ್ಲ ಭೂತಗಳು ಹುಚ್ಚಾಗಿ ಹೋಗುವವು. ೨೭

ಆದರೆ ಯಾವ ಪುಣ್ಯವಂತರ ಪಾಪವು ಅಳಿದಿರುವದೋ ಅವರು ಈ ದ್ವಂದ್ವಗಳ ಮೋಹದೊಳಗಿಂದ ಪಾರಾಗಿ ದೃಢಭಕ್ತಿಯಿಂದ ನನ್ನನ್ನು ಭಜಿಸುವರು. ೨೮

ನನ್ನನ್ನಾಶ್ರಯಿಸಿ ಜನನಮರಣಗಳಿಂದ ಮುಕ್ತರಾಗಲೆತ್ನಿಸುವವರು ಸಮಗ್ರ ಬ್ರಹ್ಮವನ್ನೂ ಅಧ್ಯಾತ್ಮವನ್ನೂ ಕರ್ಮವನ್ನೂ ಅರಿತುಕೊಳ್ಳುವರು. ೨೯

ಅಧಿಭೂತ, ಅಧಿದೈವ, ಅಧಿಯಜ್ಞಗಳ ಸಹಿತವಾಗಿ ನನ್ನ ಜ್ಞಾನವನ್ನು ಪಡೆದ ಯುಕ್ತಚಿತ್ತರು ಮರಣ ಸಮಯಕ್ಕೆ ಸಹ ನನ್ನನ್ನು ಮರೆಯರು (ಮತ್ತು ಮೋಕ್ಷವನ್ನು ಪಡೆಯುವರು). ೩೦

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೭ ನೆಯ ಅಧ್ಯಾಯವು ಸಮಾಪ್ತವು.

# ಎಂಟನೆಯ ಅಧ್ಯಾಯವು.

ಅರ್ಜುನ ಉವಾಚ—

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ |
ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥
ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ |
ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥

ಶ್ರೀಭಗವಾನುವಾಚ—

ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ |
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥
ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ |
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥

**ಅರ್ಜುನನು ಅಂದದ್ದು**— ಆ ಬ್ರಹ್ಮವೆಂದರೇನು, ಅಧ್ಯಾತ್ಮವೆಂದರೇನು, ಪುರುಷೋತ್ತಮನೇ, ಕರ್ಮವೆಂದರೇನು? ಅಧಿಭೂತವೆಂದು ಏತಕ್ಕೆ ಅನ್ನುವರು, ಅಧಿದೈವವೆಂದರೇನು? ೧

ಅಧಿಯಜ್ಞನು ಹೇಗಿರುವನು, ಈ ದೇಹದಲ್ಲಿ ಅಧಿಯಜ್ಞನು ಯಾರು? ಕೃಷ್ಣನೇ ಜಿತೇಂದ್ರಿಯರು ಮರಣಸಮಯದಲ್ಲಿ ನಿನ್ನನ್ನು ಹೇಗೆ ಅರಿಯುವರು? ೨

**ಕೃಷ್ಣನು ಅಂದದ್ದು**— ಎಲ್ಲಕ್ಕೂ ಶ್ರೇಷ್ಠವಾದ ನಾಶರಹಿತ ತತ್ತ್ವವೇ ಬ್ರಹ್ಮವು. ವಸ್ತುವಿನ ಮೂಲಸ್ವಭಾವವೇ ಅಧ್ಯಾತ್ಮವೆನಿಸುವದು. ಭೂತಗಳ ಉತ್ಪತ್ತಿಗೆ ಕಾರಣವಾದ ಸೃಷ್ಟಿವ್ಯಾಪಾರವೇ ಕರ್ಮವೆಂದು ಕರೆಯಲ್ಪಡುವದು. ೩

ನಾಶಕ್ಕೊಳಗಾದ ವಸ್ತುವೇ ಅಧಿಭೂತವು, ಚೇತನ ಪುರುಷನೇ ಅಧಿದೈವತವು, ಅರ್ಜುನಾ, ದೇಹಧಾರಿಗಳ ದೇಹದಲ್ಲಿ ಅಧಿಯಜ್ಞನೆಂಬವನು ನಾನೇ ಇರುವೆನು. ೪

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ |**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ || ೫ ||**

**ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ |**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ || ೬ ||**

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ |**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಂ || ೭ ||**

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ |**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ || ೮ ||**

ಅಂತ್ಯಕಾಲಕ್ಕೆ ನನ್ನನ್ನೇ ಸ್ಮರಿಸುತ್ತ ಈ ದೇಹವನ್ನು ಬಿಟ್ಟು ತೆರಳುವವನು ನನ್ನಲ್ಲಿಯೇ ಬೆರೆಯುವನು. ಇದರಲ್ಲಿ ಯಾವ ಸಂದೇಹವೂ ಇಲ್ಲ. ೫

ಅಥವಾ ಅರ್ಜುನಾ, ಯಾವ ಯಾವ ಭಾವಗಳನ್ನು ಸ್ಮರಿಸುತ್ತ ಮನುಷ್ಯನು ಕೊನೆಗೆ ಜೀವಬಿಡುವನೋ, ಆ ಭಾವಗಳಲ್ಲಿಯೇ ಅವನು ಯಾವಾಗಲೂ ಮಗ್ನನಾಗಿರುವದರಿಂದ ಆಯಾ ಸ್ವರೂಪಗಳನ್ನೇ ಹೊಂದುವನು. ೬

ಆದುದರಿಂದ ಸರ್ವಕಾಲವೂ ನನ್ನನ್ನು ಸ್ಮರಿಸು ಹಾಗೂ ಯುದ್ಧ ಮಾಡು. ನಿನ್ನ ಮನಬುದ್ಧಿಗಳು ನನ್ನಲ್ಲಿ ಅರ್ಪಿತವಾದುದರಿಂದ ನೀನು ನಿಃಸಂಶಯವಾಗಿ ನನ್ನ ಸ್ವರೂಪವನ್ನೇ ಹೊಂದುವಿ. ೭

ಪಾರ್ಥಾ, ಯೋಗಾಭ್ಯಾಸದಿಂದ ಸ್ಥಿರಮಾಡಿದ ಹಾಗೂ ಅತ್ತಿತ್ತ ಹೊಯ್ದಾಡದ ಮನದಿಂದ ಶ್ರೇಷ್ಠವಾದ ದಿವ್ಯಪುರುಷನನ್ನೇ ಧ್ಯಾನಿಸುತ್ತಿದ್ದರೆ ಮನುಷ್ಯನು ಅವನ ಬಳಿಗೆಯೇ ಹೋಗುವನು. ೮

ಕವಿಂ ಪುರಾಣಮನುಶಾಸಿತಾರ |
ಮಣೋರಣೀಯಾಂಸಮನುಸ್ಮರೇದ್ಯಃ ||
ಸರ್ವಸ್ಯ ಧಾತಾರಮಚಿಂತ್ಯರೂಪ |
ಮಾದಿತ್ಯವರ್ಣಂ ತಮಸಃ ಪರಸ್ತಾತ್ ||೯||
ಪ್ರಯಾಣಕಾಲೇ ಮನಸಾಚಲೇನ |
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ||
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ |
ಸ ತಂ ಪರಂ ಪುರುಷಮುಪೈತಿ ದಿವ್ಯಂ ||೧೦||
ಯದಕ್ಷರಂ ವೇದವಿದೋ ವದಂತಿ |
ವಿಶಂತಿ ಯದ್ಯತಯೋ ವೀತರಾಗಾಃ ||
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ |
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ||೧೧||

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುದ್ಧ್ಯ ಚ |
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ ||೧೨||

ಜ್ಞಾನಿಯೂ ಪುರಾತನನೂ ಸರ್ವಶಾಸಕನೂ ಸೂಕ್ಷ್ಮಕ್ಕಿಂತ ಸೂಕ್ಷ್ಮನೂ ಎಲ್ಲರ ಆಧಾರನೂ ಅಚಿಂತ್ಯರೂಪನೂ ತಮಸ್ಸಿನಾಚೆಗಿರುವವನೂ ಸೂರ್ಯವರ್ಣವುಳ್ಳವನೂ ಆದ ಪರಮಾತ್ಮನನ್ನು ಅಂತಕಾಲಕ್ಕೆ ಸ್ಥಿರಮನಸ್ಸಿನಿಂದ ಭಕ್ತಿಯುಕ್ತನಾಗಿ, ಯೋಗಬಲದಿಂದ ಪ್ರಾಣವನ್ನು ಹುಬ್ಬುಗಳ ಮಧ್ಯದಲ್ಲಿಟ್ಟು ಯಾವನು ಸ್ಮರಿಸುವನೋ ಅವನು ಆ ದಿವ್ಯ ಪುರುಷನಲ್ಲಿಯೇ ಐಕ್ಯನಾಗುವನು. ೯-೧೦

ವೇದಜ್ಞರು ಯಾವುದಕ್ಕೆ ನಾಶರಹಿತವೆನ್ನುವರೋ ಆಸಕ್ತಿರಹಿತ ಯತಿಗಳು ಯಾವುದರಲ್ಲಿ ಬೆರೆಯುವರೋ ಯಾವ ಪದದ ಇಚ್ಛೆಯಿಂದ ಜನರು ಬ್ರಹ್ಮಚರ್ಯವ್ರತವನ್ನು ಪಾಲಿಸುವರೋ ಆ ಪದದ ಪರಿಚಯವನ್ನು ನಾನು ನಿನಗೆ ಸಂಕ್ಷೇಪದಿಂದ ಮಾಡಿಕೊಡುವೆನು. ೧೧

ದೇಹದ್ವಾರಗಳನ್ನು ಸಂಯಮಿಸಿ, ಮನವನ್ನು ಹೃದಯದಲ್ಲಿ ಸ್ಥಿರಮಾಡಿ, ತನ್ನ ಪ್ರಾಣವನ್ನು ಮಸ್ತಕದಲ್ಲಿರಿಸಿ, ಯೋಗಧಾರಣೆಯಲ್ಲಿ ಸ್ಥಿತನಾಗಿ, ೧೨

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ |
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ ॥ ೧೩ ॥

ಅನನ್ಯ ಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ |
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥

ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ |
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥

ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ |
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥

ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ |
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥೧೭॥

ಓಂ ಎಂಬ ಏಕಾಕ್ಷರ ಬ್ರಹ್ಮದ ಉಚ್ಚಾರಮಾಡುತ್ತ ಹಾಗೂ ನನ್ನನ್ನು ಸ್ಮರಿಸುತ್ತ ಯಾವನು ದೇಹತ್ಯಾಗ ಮಾಡುವನೋ ಅವನು ಪರಮ ಗತಿಯನ್ನು ಪಡೆಯುವನು. ೧೩

ಪಾರ್ಥಾ, ಅನನ್ಯ ಭಕ್ತಿಯಿಂದ ಯಾವಾಗಲೂ ನನ್ನನ್ನೇ ಸ್ಮರಿಸುತ್ತಿರುವ ನಿತ್ಯಯುಕ್ತ ಯೋಗಿಯು ನನ್ನನ್ನು ಅನಾಯಾಸವಾಗಿ ಪ್ರಾಪ್ತ ಮಾಡಿಕೊಳ್ಳುವನು. ೧೪

ಪರಮ ಸಿದ್ಧಿಯನ್ನು ಪಡೆದ ಮಹಾತ್ಮನು ನನ್ನಲ್ಲಿ ಐಕ್ಯಹೊಂದಿದ ಮೇಲೆ ಅಶಾಶ್ವತವಾದ ಹಾಗೂ ದುಃಖದ ಬೀಡಾದ ಪುನರ್ಜನ್ಮವನ್ನು ಹೊಂದನು. ೧೫

ಬ್ರಹ್ಮಲೋಕವನ್ನು ಮೊದಲುಮಾಡಿ ಯಾವ ಲೋಕಕ್ಕೆ ಹೋದರೂ ಅಲ್ಲಿಂದ ತಿರುಗಿ ಬಂದು ಪುನರ್ಜನ್ಮವನ್ನು ತಾಳಬೇಕಾಗುವದು. ಆದರೆ, ಅರ್ಜುನಾ, ನನ್ನ ಬಳಿಗೆ ಬಂದವನಿಗೆ ಪುನರ್ಜನ್ಮವಿಲ್ಲ. ೧೬

ಬ್ರಹ್ಮನ ಹಗಲಿರುಳುಗಳೆಂದರೇನು ಎಂಬದನ್ನು ನಿಜವಾಗಿ ಅರಿತ ಜನರು, ಸಹಸ್ರ ಚತುರ್ಯುಗಗಳೆಂದರೆ ಬ್ರಹ್ಮನದೊಂದು ಹಗಲು, ಸಹಸ್ರ ಚತುರ್ಯುಗಗಳೆಂದರೆ ಬ್ರಹ್ಮನದೊಂದು ಇರುಳು, ಎಂಬದನ್ನು ಅರಿಯುವರು. ೧೭

ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥೧೮॥

ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋ ವ್ಯಕ್ತಾತ್ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥

ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥ ೨೨ ॥

ಬ್ರಹ್ಮನ ಹಗಲಾಗುವಾಗ ವ್ಯಕ್ತ ಭೂತಗಳು ಅವ್ಯಕ್ತದಿಂದ ಹುಟ್ಟುವವು. ಇರುಳು ಬಂದಿತೆಂದರೆ ಆ ಅವ್ಯಕ್ತವೆಂಬುದರಲ್ಲಿಯೇ ಲಯ ಹೊಂದುವವು. ೧೮

ಅದೇ ಭೂತಸಮೂಹವು ಅಸಹಾಯವಿರುವದರಿಂದ ಬ್ರಹ್ಮನ ಹಗಲಾಗುವ ಸಮಯಕ್ಕೆ ಪುನಃಪುನಃ ಹುಟ್ಟಿ ಇರುಳು ಬಂದಿತೆಂದರೆ ಪುನಃ ಪುನಃ ಲಯಹೊಂದುವದು. ೧೯

ಆ ಅವ್ಯಕ್ತಕ್ಕೂ ಆಚೆಗೆ ಸನಾತನ ಹಾಗೂ ಶ್ರೇಷ್ಠವಾದ ಇನ್ನೊಂದು ಅವ್ಯಕ್ತ ಭಾವವಿರುವದು. ಅದು ಎಲ್ಲ ಭೂತಗಳು ನಷ್ಟವಾದರೂ ನಷ್ಟವಾಗುವದಿಲ್ಲ. ೨೦

ಅದು ಅವ್ಯಕ್ತವೂ ಅಕ್ಷರವೂ ಎಂದೆನಿಸುವದು. ಅದೇ ಪರಮಗತಿಯೆಂದೆನ್ನುವರು. ಯಾವುದನ್ನು ಪಡೆಯಲಾಗಿ ಮನುಷ್ಯನು ಪುನಃ ತಿರುಗಿ ಬರುವದಿಲ್ಲವೋ ಅದೇ ನನ್ನ ಶ್ರೇಷ್ಠ ಸ್ಥಾನವು. ೨೧

ಪಾರ್ಥಾ, ಯಾವನಲ್ಲಿ ಈ ಭೂತಗಳಿರುವವೋ ಯಾವನು ಇದನ್ನೆಲ್ಲ ವಿಸ್ತರಿಸಿರುವನೋ ಆ ಪುರುಷೋತ್ತಮನು ಅನನ್ಯ ಭಕ್ತಿಯಿಂದ ಲಭ್ಯನು. ೨೨

ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ |
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ |
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ |
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥

ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ |
ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥

ನೈತೇ ಸೃತೀ ಪಾರ್ಥ ಜಾನನ್‌ಯೋಗೀ ಮುಹ್ಯತಿ ಕಶ್ಚನ |
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭ ॥

ಅರ್ಜುನಾ, ಯಾವ ಕಾಲಕ್ಕೆ ದೇಹ ಬಿಟ್ಟು ತೆರಳಿದರೆ ಯೋಗಿಗಳು ತಿರುಗಿ ಬರುವದಿಲ್ಲ ಹಾಗೂ ಯಾವ ಕಾಲಕ್ಕೆ ತೆರಳಿದರೆ ತಿರುಗಿ ಬರುವರು ಆ ಕಾಲವನ್ನು ನಿನಗೆ ಹೇಳುವೆನು ಕೇಳು. ೨೩

ಬ್ರಹ್ಮಜ್ಞರು ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣದ ಆರು ತಿಂಗಳು ಈ ಮುಖಾಂತರವಾಗಿ ತೆರಳಿದರೆ ಬ್ರಹ್ಮನನ್ನು ಪಡೆಯುವರು. ೨೪

ಯೋಗಿಯು ಹೊಗೆ, ಇರುಳು, ಕೃಷ್ಣಪಕ್ಷ, ದಕ್ಷಿಣಾಯನದ ಆರು ತಿಂಗಳುಗಳಲ್ಲಿ ತೆರಳಿದರೆ ಚಂದ್ರಲೋಕಕ್ಕೆ ಹೋಗಿ ತಿರುಗಿ ಬರುವನು. ೨೫

ಜಗತ್ತಿನಲ್ಲಿ ಶುಕ್ಲ ಹಾಗೂ ಕೃಷ್ಣ ಎಂಬ ಎರಡು ಶಾಶ್ವತವಾದ ಗತಿಗಳು. ಒಂದರಿಂದ ಹೋಗಲಾಗಿ ಪುನರ್ಜನ್ಮವಿಲ್ಲ. ಮತ್ತೊಂದರಿಂದ ಹೋಗಲು ಪುನರ್ಜನ್ಮವು ಕಟ್ಟಿಟ್ಟಂತೆ. ೨೬

ಪಾರ್ಥಾ, ಈ ಮಾರ್ಗಗಳನ್ನರಿತ ಯಾವ ಯೋಗಿಯೂ ಮೋಹ ಪಡುವದಿಲ್ಲ. ಆದುದರಿಂದ ಯಾವಾಗಲೂ ಯೋಗಯುಕ್ತನಾಗಿರು. ೨೭

ವೇದೇಷು ಯಜ್ಞೇಷು ತಪಸ್ಸು ಚೈವ |
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ||
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ |
ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ || ೨೮ ||

ಇತಿ ಶ್ರೀಮದ್ಭಗವದ್ಗೀತಾಯಾಂ ಯೋಗಶಾಸ್ತ್ರೇಽಕ್ಷರಬ್ರಹ್ಮಯೋಗೋ ನಾಮ
ಅಷ್ಟಮೋಽಧ್ಯಾಯ:

ಈ ತತ್ವವನ್ನರಿತ ಯೋಗಿಯು ವೇದಾಧ್ಯಯನದಿಂದ, ಯಜ್ಞಗಳಿಂದ, ತಪಗಳಿಂದ, ದಾನಗಳಿಂದ ದೊರೆಯುತಕ್ಕ ಎಲ್ಲ ಪುಣ್ಯಗಳಿಗಿಂತ ಅಧಿಕವಾದ ಶ್ರೇಷ್ಠ ಆದಿಪದವನ್ನು ಪಡೆಯುವನು. ೨೮

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೮ ನೆಯ ಅಧ್ಯಾಯವು ಸಮಾಪ್ತವು.

# ಒಂಭತ್ತನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ |
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥೧॥
ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ |
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥
ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ |
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥
ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥
ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ |
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥

ಕೃಷ್ಣನು ಅಂದದ್ದು— ನೀನು ಅಸೂಯಾರಹಿತನಿದ್ದುದರಿಂದ ಯಾವದನ್ನರಿತು ನೀನು ಪಾಪರಹಿತನಾಗುವಿಯೋ ಆ ಗೂಢ ಜ್ಞಾನ ವಿಜ್ಞಾನಗಳನ್ನು ನಿನಗೆ ಹೇಳುವೆನು. ೧

ಈ ವಿದ್ಯೆಯು, ಈ ರಹಸ್ಯವು ಎಲ್ಲಕ್ಕೂ ಶ್ರೇಷ್ಠವಾದುದು. ಇದು ಪವಿತ್ರವೂ ಉತ್ತಮವೂ ಪ್ರತ್ಯಕ್ಷ ತಿಳಿಯುವಂತಹದೂ ಧರ್ಮಾನುಕೂಲವೂ ಆಚರಣಕ್ಕೆ ಸುಲಭವೂ ಅವ್ಯಯವೂ ಇರುವದು ೨

ಅರ್ಜುನಾ, ಈ ಧರ್ಮದಲ್ಲಿ ವಿಶ್ವಾಸವಿಲ್ಲದವರು ನನ್ನ ಬಳಿಗೆ ಬರದೆ ಮರ್ತ್ಯವಾದ ಸಂಸಾರ ಮಾರ್ಗಕ್ಕೆ ಮರಳಿ ಹೋಗುವರು. ೩

ಅವ್ಯಕ್ತಸ್ವರೂಪನಾದ ನನ್ನಿಂದ ಈ ಜಗತ್ತೆಲ್ಲವೂ ವಿಸ್ತರಿಸಲ್ಪಟ್ಟಿರುವದು. ಎಲ್ಲ ಭೂತಗಳು ನನ್ನೊಳಗಿರುವವು. ಆದರೆ ನಾನು ಅವುಗಳೊಳಗಿಲ್ಲ. ೪

ನನ್ನೊಳಗೆ ಭೂತಗಳೂ ಇಲ್ಲ! ಅರ್ಜುನನೇ, ನನ್ನ ಯೋಗಸಾಮರ್ಥ್ಯವನ್ನು ನೋಡು. ಭೂತಗಳನ್ನು ಹುಟ್ಟಿಸುವ ನನ್ನ ಆತ್ಮವು ಭೂತಗಳಿಗೆ ಆಧಾರರೂಪವಿರುವದು. ಆದರೆ ಅದು ಭೂತಗಳೊಳಗಿಲ್ಲ. ೫

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ |**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**
**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ |**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**
**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ |**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್॥ ೮ ॥**
**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ |**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**
**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ |**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**
**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ |**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

ಎಲ್ಲ ಕಡೆಗೂ ಹೋಗಬಲ್ಲ ವಾಯುವು ನಿತ್ಯವೂ ಆಕಾಶದಲ್ಲಿರುವಂತೆ ಎಲ್ಲ ಭೂತಗಳು ನನ್ನಲ್ಲಿರುವವೆಂಬದನ್ನು ಲಕ್ಷದಲ್ಲಿಡು. ೬

ಕುಂತೀ ಪುತ್ರನೇ, ಕಲ್ಪಾಂತದಲ್ಲಿ ಎಲ್ಲ ಭೂತಗಳು ನನ್ನ ಪ್ರಕೃತಿಯಲ್ಲಿಯೇ ಲಯಹೊಂದುವವು. ಕಲ್ಪಾರಂಭದಲ್ಲಿ ಅವುಗಳನ್ನು ಪುನಃ ಸೃಜಿಸುವೆನು. ೭

ಪ್ರಕೃತಿಗೆ ಅಧೀನವಾಗಿರುವದರಿಂದ ಅಸ್ವತಂತ್ರವಿರುವ ಎಲ್ಲ ಭೂತ ಸಂಘವನ್ನು ನಾನು ನನ್ನ ಪ್ರಕೃತಿಯ ಸಹಾಯದಿಂದ ಪುನಃ ಪುನಃ ಸೃಜಿಸುವೆನು. ೮

ಅರ್ಜುನಾ, ಉದಾಸೀನನಂತೆ ನಾನು ಆ ಕರ್ಮಗಳಲ್ಲಿ ಅನಾಸಕ್ತನಿರುವದರಿಂದ ಆ ಕರ್ಮಗಳು ನನಗೆ ಬಂಧನಕಾರಕವಾಗುವದಿಲ್ಲ. ೯

ನಾನು ಅಧ್ಯಕ್ಷನಾಗಿ ಈ ಪ್ರಕೃತಿಯ ಕಡೆಯಿಂದ ಈ ಚರಾಚರ ಸೃಷ್ಟಿಯನ್ನು ಉತ್ಪನ್ನಮಾಡಿಸುತ್ತೇನೆ. ಈ ಕಾರಣದಿಂದಲೇ ಜಗತ್ತು ಹೀಗೆ ಪರಿವರ್ತಿಸುತ್ತಿರುವುದು. ೧೦

ಸರ್ವಭೂತಗಳ ಈಶ್ವರನಾದ ನನ್ನ ಶ್ರೇಷ್ಠ ಸ್ವರೂಪವನ್ನರಿಯದೆ ಮೂಢರು ಮನುಷ್ಯದೇಹಧಾರಿಯಾದ ನನ್ನನ್ನು ಅವಮಾನಿಸುವರು. ೧೧

ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ |
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥
ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ |
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥
ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ |
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥
ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ |
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥
ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ |
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥

ಅಂಥವರ ಆಕಾಂಕ್ಷೆ, ಕರ್ಮಜ್ಞಾನಾದಿಗಳು ವ್ಯರ್ಥವಾದವುಗಳು. ಅವರು ಭ್ರಷ್ಟಮನಸ್ಸಿನವರಿದ್ದು ಮೋಹಿಸುವ ರಾಕ್ಷಸೀ ಹಾಗೂ ಆಸುರೀ ಪ್ರಕೃತಿಯ ಆಶ್ರಯದಿಂದ ವರ್ತಿಸುವರು. ೧೨

ಪಾರ್ಥನೇ, ದೈವೀ ಪ್ರಕೃತಿಯನ್ನಾಶ್ರಯಿಸಿದ ಮಹಾತ್ಮರು ನಾನ ಅವ್ಯಯನೂ ಎಲ್ಲ ಭೂತಗಳ ಬೇರೂ ಎಂದು ತಿಳಿದು ಅನನ್ಯ ಮನಸ್ಸಿನಿಂದು ಭಜಿಸುವರು. ೧೩

ಯಾವಾಗಲೂ ನನ್ನ ಕೀರ್ತನಮಾಡುತ್ತ, ದೃಢವ್ರತರಾಗಿ ಇಂದ್ರಿಯ ಸಂಯಮಮಾಡುತ್ತ, ಭಕ್ತಿಯಿಂದ ನನಗೆ ನಮಸ್ಕಾರಮಾಡುತ್ತ, ನಿತ್ಯಯುಕ್ತರು ನನ್ನನ್ನುಪಾಸಿಸುವರು. ೧೪

ಇನ್ನು ಕೆಲವರು ಎಲ್ಲ ಬದಿಗೂ ಮುಖಗಳುಳ್ಳ ನನ್ನನ್ನು ಅಭಿನ್ನ ಭಾವದಿಂದ ಅಥವಾ ಭಿನ್ನಭಾವದಿಂದ ಅಥವಾ ನಾನಾಪ್ರಕಾರದಿಂದ ಜ್ಞಾನಯಜ್ಞದಿಂದ ಉಪಾಸಿಸುವರು. ೧೫

ನಾನೇ ಶ್ರೌತಯಜ್ಞವು. ಸ್ಮಾರ್ತಯಜ್ಞವೂ ನಾನೇ. ಶ್ರಾದ್ಧಾಹುತಿಯೂ ನಾನೇ, ವನಸ್ಪತಿಗಳೂ ನಾನೇ. ನಾನೇ ಮಂತ್ರವು, ನಾನೇ ಘೃತವು. ನಾನೇ ಅಗ್ನಿಯು, ಆಹುತಿಯಾದರೂ ನಾನೇ. ೧೬

**ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥ ೧೭ ॥**

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ**
**ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥ ೨೦ ॥**

ನಾನು ಈ ಜಗತ್ತಿನ ತಂದೆತಾಯಿಯು, ಆಧಾರನು, ಪಿತಾಮಹನು, ಪವಿತ್ರವೂ ಅರಿಯಲಿಕ್ಕೆ ಯೋಗ್ಯವೂ ಆದ ಓಂಕಾರವೂ ಋಕ್‌ಯಜುಸ್ಸಾಮಗಳೂ ನಾನೇ. ೧೭

ನಾನೇ ಎಲ್ಲರ ಪರಮಗತಿಯು, ಪೋಷಕನು, ಸ್ವಾಮಿಯು, ಸಾಕ್ಷಿಯು, ನಿವಾಸಸ್ಥಾನವು, ಆಶ್ರಯನು, ಗೆಳೆಯನು, ನಾನೇ ಎಲ್ಲರ ಉತ್ಪತ್ತಿ ಕಾರಣನು, ಇರುವ ಮೆಟ್ಟು, ಲಯವಾಗುವ ಸ್ಥಾನವು, ಗೊತ್ತು, ಅವ್ಯಯ ಬೀಜವು. ೧೮

ತಪಿಸುವವನು ನಾನೇ. ಮಳೆಯನ್ನು ಸೇದುವವನು ಸೆಳೆಯುವವನು ನಾನೇ. ನಾನೇ ಮರಣವು, ನಾನೇ ಅಮೃತತ್ವವು. ಸದಸತ್ತೆಂಬುದು ನಾನೇ. ೧೯

ಮೂರು ವೇದಗಳಲ್ಲಿ ಉಕ್ತವಾದ ಕರ್ಮಗಳನ್ನು ಮಾಡುವ ನಿಷ್ಪಾಪ ಸೋಮಯಾಜಿಗಳು ಯಜ್ಞಗಳನ್ನು ಮಾಡಿ ನನ್ನನ್ನು ಸ್ವರ್ಗದ ಗೋಸ್ಕರ ಪ್ರಾರ್ಥಿಸುವರು. ಅವರು ಸುರೇಂದ್ರನ ಪುಣ್ಯಲೋಕಕ್ಕೆ ಹೋಗಿ ಸ್ವರ್ಗದಲ್ಲಿ ದಿವ್ಯ ಭೊಗಗಳನ್ನು ಭೋಗಿಸುವರು. ೨೦

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ।
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥
ಏವಂ ತ್ರಯೀಧರ್ಮಮನುಪ್ರಪನ್ನಾ ।
ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ೨೨ ॥

ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥ ೨೩ ॥

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥

ಅವರು ಆ ವಿಶಾಲವಾದ ಸ್ವರ್ಗಲೋಕವನ್ನನುಭೋಗಿಸಿ ತಮ್ಮ ಪುಣ್ಯವು ತೀರಿದ ಬಳಿಕ ಮೃತ್ಯುಲೋಕಕ್ಕೆ ಬರುವರು. ಈ ವಿಧವಾಗಿ ಕಾಮಗಳ ಆಶೆಯುಳ್ಳ ವೇದೋಕ್ತ ಕರ್ಮವನ್ನಾಚರಿಸುವವರಿಗೆ ಬರುಹೋಗುವದು ತಪ್ಪುವದಿಲ್ಲ. ೨೧

ಎರಡನೆಯದೇನನ್ನೂ ಚಿಂತಿಸದೇ ನನ್ನನ್ನು ಭಜಿಸುತ್ತಿರುವ ನಿತ್ಯಯುಕ್ತ ಜನರ ಯೋಗಕ್ಷೇಮವನ್ನು ನಾನೇ ನಡಿಸುವೆನು. ೨೨

ಪಾರ್ಥಾ, ಶ್ರದ್ಧಾಯುಕ್ತರಾಗಿ ಅನ್ಯದೇವತೆಗಳನ್ನು ಭಜಿಸುವವರು ಸಹ ವಿಧಿಯುಕ್ತಮಾರ್ಗದಿಂದಲ್ಲದಿದ್ದರೂ ಒಂದು ಬಗೆಯಿಂದ ನನ್ನನ್ನೇ ಭಜಿಸುವರು. ೨೩

ಯಾಕಂದರೆ ನಾನೇ ಎಲ್ಲ ಯಜ್ಞಗಳನ್ನು ಭೋಗಿಸುವವನು. ಅವುಗಳ ಸ್ವಾಮಿಯಾದರೂ ನಾನೇ ಇರುವೆನು. ಆದರೆ ಅವರು ನನ್ನನ್ನು ತತ್ವತಃ ಅರಿಯದ್ದರಿಂದ ಅಡ್ಡ ಹಾದೀ ಬೀಳುವರು. ೨೪

ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಂ ॥ ೨೫ ॥
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥
ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥ ೨೭ ॥
ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥
ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥೨೯॥

ದೇವರ ವ್ರತಮಾಡುವವರು ದೇವರ ಬಳಿಗೂ ಪಿತೃಗಳ ವ್ರತ ಮಾಡುವವರು ಪಿತೃಗಳ ಬಳಿಗೂ ಭೂತವಿಶೇಷಗಳನ್ನು ಭಜಿಸುವವರು ಭೂತಗಳ ಬಳಿಗೂ ಹೋಗುವರು. ನನ್ನನ್ನು ಭಜಿಸುವವರು ನನ್ನ ಬಳಿಗೆ ಬರುವರು. ೨೫

ಸಂಯಮಿಯು ಭಕ್ತಿಯಿಂದರ್ಪಿಸಿದ ಪತ್ರ, ಪುಷ್ಪ, ಫಲ, ಜಲ ಮುಂತಾದ ಯಾವದೇ ಅಲ್ಪವಸ್ತುವನ್ನು ಸಹ ಪ್ರೀತಿಯಿಂದ ಸ್ವೀಕರಿಸುವೆನು. ೨೬

ಅರ್ಜುನಾ, ನೀನು ಮಾಡುವದನ್ನು ತಿನ್ನುವದನ್ನು ಹೋಮಿಸುವದನ್ನು ಕೊಡುವದನ್ನು ತಪಿಸುವದನ್ನು ಅರ್ಥಾತ್ ಎಲ್ಲ ಕರ್ಮಗಳನ್ನೂ ನನಗೆ ಅರ್ಪಿಸು. ೨೭

ಹೀಗೆ ಮಾಡಿದರೆ ಕರ್ಮಗಳ ಶುಭಾಶುಭ ಫಲಗಳಿಂದ ನೀನು ಮುಕ್ತನಾಗುವಿ. ಸನ್ಯಾಸಯೋಗದಿಂದ ಯುಕ್ತಚಿತ್ತನಿದ್ದ ನೀನು ಮುಕ್ತನಾಗಿ ನನ್ನ ಬಳಿಗೆ ಬರುವಿ. ೨೮

ಸರ್ವ ಭೂತಗಳಲ್ಲಿಯೂ ನಾನು ಸಮದೃಷ್ಟಿಯುಳ್ಳವನು. ನನಗೆ ದ್ವೇಷ್ಯನಾಗಲೀ ಪ್ರಿಯನಾಗಲೀ ಯಾರೂ ಇಲ್ಲ. ಆದರೆ ಯಾರು ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರು ನನ್ನೊಳಗಿರುವರು. ನಾನು ಅವರೊಳಗಿರುವೆನು. ೨೯

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**
**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**
**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥೩೨॥**
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥ ೩೩ ॥**
**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

ಇತಿ ಶ್ರೀಭಗವದ್ಗೀತಾಯಾಂ ರಾಜವಿದ್ಯಾರಾಜಗುಹ್ಯಯೋಗೋನಾಮ ನವಮೋಧ್ಯಾಯಃ

ಅತ್ಯಂತ ದುರಾಚಾರಿಯು ಸಹ ನನ್ನನ್ನು ಅನನ್ಯ ಭಕ್ತಿಯಿಂದ ಭಜಿಸಿದರೆ ಅವನು ಸಾಧುವೆಂದೇ ಎಣಿಸಲ್ಪಡತಕ್ಕದ್ದು. ಅವನು ಸ್ಥಿರಬುದ್ಧಿಯುವನೇ ಸೈ. ೩೦

ಅವನು ತೀವ್ರವೇ ಧರ್ಮಾತ್ಮನಾಗಿ ಶಾಶ್ವತ ಶಾಂತಿಯನ್ನು ಪಡೆಯುವನು. ಅರ್ಜುನಾ, ನನ್ನ ಭಕ್ತನು ಎಂದೂ ನಾಶಹೊಂದನೆಂಬುದು ಸಿದ್ಧಾಂತವೆಂದು ತಿಳಿ. ೩೧

ಪಾರ್ಥನೇ, ಸ್ತ್ರೀ ವೈಶ್ಯ ಶೂದ್ರರು ಹಾಗೂ ಅತ್ಯಂತ ಪಾಪಯೋನಿಗಳಲ್ಲಿ ಹುಟ್ಟಿದವರು ಸಹ ನನ್ನನ್ನಾಶ್ರಯಿಸಿ ಶ್ರೇಷ್ಠ ಪದವಿಯನ್ನು ಪಡೆಯುವರು. ೩೨

ಅಂದಬಳಿಕ ಭಕ್ತರಿದ್ದ ಪುಣ್ಯವಂತ ಬ್ರಾಹ್ಮಣರು ಹಾಗೂ ರಾಜರ್ಷಿಗಳು ಆ ಪದವನ್ನು ಪಡೆಯದಿರರೇ? ಪಾರ್ಥಾ, ಈ ಅನಿತ್ಯ ಮತ್ತು ಸುಖರಹಿತ ಲೋಕಗಳಲ್ಲಿ ನೀನು ನನ್ನನ್ನು ಭಜಿಸುವಂಥವನಾಗು. ೩೩

ನನ್ನಲ್ಲಿ ಮನವನ್ನಿರಿಸು, ನನ್ನ ಭಕ್ತನಾಗು, ನನ್ನನ್ನು ಭಜಿಸು, ನನಗೆ ನಮಸ್ಕಾರಮಾಡು, ಹೀಗೆ ನನ್ನ ಉಪಾಸಕನಾಗಿ ಯುಕ್ತಚಿತ್ತನಾದುದರಿಂದ ನೀನು ನನ್ನ ಬಳಿಗೆ ಬರುವಿ. ೩೪

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೯ನೆಯ ಅಧ್ಯಾಯವು ಸಮಾಪ್ತವು.

# ಹತ್ತನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ |
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥೧॥

ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ |
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥

ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ |
ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ |
ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥೪॥

ಕೃಷ್ಣನು ಅಂದದ್ದು—ವಿಶಾಲ ಬಾಹುಗಳುಳ್ಳವನೇ, ನನ್ನ ಮಾತು ಕೇಳಿ ಪ್ರಸನ್ನನಾಗುವ ನಿನಗೆ ಹಿತವಾಗಬೇಕೆಂದು ನಾನು ಪುನಃ ಹೇಳುವ ಪರಮ ವಚನವನ್ನು ಕೇಳು. ೧

ಸುರ ಸಮೂಹವಾಗಲಿ ಮಹರ್ಷಿಗಳಾಗಲಿ ನನ್ನ ಹುಟ್ಟನ್ನರಿಯರು. ಯಾಕಂದರೆ ಎಲ್ಲ ದೇವ ದೇವತೆಗಳ ಹಾಗೂ ಮಹರ್ಷಿಗಳ ಆದಿಕಾರಣನು ನಾನೇ. ೨

ನಾನು ಜನ್ಮರಹಿತನೂ ಅನಾದಿಯೂ ಸರ್ವೇಶ್ವರನೂ ಎಂದು ಯಾವ ಮನುಜನು ಅರಿಯುವನೋ ಅವನು ಮೋಹರಹಿತನಾಗಿ ಎಲ್ಲ ಪಾಪಗಳಿಂದ ಮುಕ್ತನಾಗುವನು. ೩

ಬುದ್ಧಿ, ಜ್ಞಾನ, ಮೋಹಗೊಳದೆ ಇರೋಣ, ಕ್ಷಮೆ, ಸತ್ಯ, ಇಂದ್ರಿಯ ದಮನ, ಮನಃಸಂಯಮ, ಸುಖ, ದುಃಖ, ಹುಟ್ಟು, ಬಾಳ್ವೆ, ಭಯ, ಅಭಯ, ೪

ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ |
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥

ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ |
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ |
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥

ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ |
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥

ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ |
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥

ಜೀವಗಳಿಗೆ ಅಹಿಂಸೆ, ಸಮತೆ, ಸಂತುಷ್ಟಿ, ತಪ, ದಾನ, ಯಶ, ಅಯಶ, ಎಂಬ ನಾನಾವಿಧದ ಗುಣಧರ್ಮಗಳು ನನ್ನಿಂದಲೇ ಪ್ರಾಪ್ತವಾಗುವವು. ೫

ಯಾವ ಏಳು ಮಹರ್ಷಿಗಳಿಂದಲೂ ಮೊದಲಿನ ನಾಲ್ವರಿಂದಲೂ ಮನುಗಳಿಂದಲೂ ಈ ಲೋಕದ ಪ್ರಜೆಗಳೆಲ್ಲರೂ ಹುಟ್ಟಿದರೋ ಅವರೆಲ್ಲರೂ ನನ್ನ ಮಾನಸ ಪುತ್ರರೇ. ೬

ಯಾವನು ಈ ನನ್ನ ಮಹಾತ್ಮ್ಯವನ್ನೂ ಯೋಗಶಕ್ತಿಯನ್ನೂ ತತ್ವತಃ ತಿಳಿದುಕೊಳ್ಳುವನೋ ಅವನು ನಿಃಸಂಶಯವಾಗಿ ಸ್ಥಿರವಾದ ಯೋಗಸ್ಥಿತಿಯನ್ನು ಪಡೆಯುವನು. ೭

ನಾನೇ ಎಲ್ಲರ ಉತ್ಪತ್ತಿಸ್ಥಾನವು, ಎಲ್ಲವೂ ನನ್ನಿಂದಲೇ ಹುಟ್ಟುವದು, ಎಂಬದನ್ನು ತಿಳಿದು ಬುದ್ಧಿವಂತರು ಭಕ್ತಿಯುಕ್ತರಾಗಿ ನನ್ನನ್ನು ಭಜಿಸುವರು. ೮

ನನ್ನಲ್ಲಿ ಚಿತ್ತವನ್ನಿಟ್ಟು ಪ್ರಾಣವನ್ನು ನನ್ನಲ್ಲಿರಿಸಿ ಪರಸ್ಪರರಿಗೆ ಬೋಧಿಸುತ್ತ ನಿತ್ಯವೂ ನನ್ನ ಕಥೆಗಳನ್ನು ಹೇಳುತ್ತ ಭಕ್ತರು ಸಂತೋಷಬಡುವರು ಹಾಗೂ ನನ್ನ ಧ್ಯಾನದಲ್ಲಿ ರಮಮಾಣರಾಗುವರು. ೯

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ |
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ||೧೦||

ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ |
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ||೧೧||

ಅರ್ಜುನ ಉವಾಚ—

ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ |
ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಂ ||೧೨||

ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ |
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ||೧೩||

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ |
ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ||೧೪||

ನನ್ನಲ್ಲಿ ನಿತ್ಯಯುಕ್ತರಾಗಿ ಪ್ರೀತಿಯಿಂದ ಹೀಗೆ ಭಜಿಸುವವರಿಗೆ ನಾನು ಬುದ್ಧಿಯೋಗವನ್ನು ಅನುಗ್ರಹಿಸುವೆನು. ಅದರಿಂದ ಅವರು ನನ್ನ ಬಳಿಗೆ ಬರುವರು. ೧೦

ಅವರ ಮೇಲೆ ಅನುಗ್ರಹಮಾಡಬೇಕೆಂದು ನಾನು ಅವರ ಅಂತಃಕರಣದಲ್ಲಿ ನಿಂತು ಪ್ರಕಾಶಮಾನವಾದ ಜ್ಞಾನಜ್ಯೋತಿಯಿಂದ ಅವರ ಅಜ್ಞಾನದ ಕತ್ತಲೆಯನ್ನು ಹರಿಯುವೆನು. ೧೧

**ಅರ್ಜುನನು ಅಂದದ್ದು—** ನೀನು ಪರಬ್ರಹ್ಮನು, ಪರಮ ಶ್ರೇಷ್ಠ ಸ್ಥಾನವು, ಪರಮ ಪವಿತ್ರನು, ಶಾಶ್ವತಪುರುಷನು, ದಿವ್ಯವಾದ ಆದಿ ದೇವತೆಯು, ನೀನು ಜನ್ಮರಹಿತನು, ಸರ್ವವ್ಯಾಪಕನು, ೧೨

ಎಂದು ಋಷಿಗಳೂ ದೇವರ್ಷಿಯಾದ ನಾರದನೂ ಅಸಿತದೇವಲ ವ್ಯಾಸಾದಿ ಮುನಿಗಳೂ ಹೇಳುವರು. ನೀನಾದರೂ ಹಾಗೆಯೇ ಅನ್ನುವಿ. ೧೩

ಕೃಷ್ಣಾ, ನೀನು ಹೇಳುವದೆಲ್ಲ ಸತ್ಯವೆಂದು ನಾನು ನಂಬುವೆನು. ದೇವದಾನವರಿಗೆ ಸಹ ನಿನ್ನ ಸಾಮರ್ಥ್ಯವು ತಿಳಿದಿಲ್ಲ. ೧೪

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ |**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥೧೫॥**
**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ |**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥**
**ಕಥಂ ವಿದ್ಯಾಮಹಂ ಯೋಗಿಂ ಸ್ತ್ವಾಂ ಸದಾ ಪರಿಚಿಂತಯನ್ |**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ ॥೧೭॥**
**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ |**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ॥ ೧೮ ॥**

ಶ್ರೀಭಗವಾನುವಾಚ—

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ |**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥**

ಸಕಲ ವಸ್ತುಗಳನ್ನು ಹುಟ್ಟಿಸುವ ಸರ್ವೇಶನೇ, ದೇವತೆಗಳ ದೇವನಾದ ಜಗದೀಶನೇ, ಪುರುಷೋತ್ತಮನೇ, ನಿನ್ನನ್ನು ನೀನೇ ಸ್ವತಃ ಅರಿಯುವಿ. ೧೫

ನೀನು ಯಾವ ಸ್ವರೂಪಗಳಿಂದ ಈ ಲೋಕಗಳನ್ನು ವ್ಯಾಪಿಸಿರುವಿಯೋ ಆ ಎಲ್ಲ ದಿವ್ಯ ರೂಪಗಳನ್ನು ಅಶೇಷವಾಗಿ ನನಗೆ ಹೇಳಬೇಕು. ೧೬

ಹೇ ಭಗವಂತನೇ, ನಿನ್ನ ಯಾವ ಯಾವ ಸ್ವರೂಪಗಳನ್ನು ನಾನು ಧ್ಯಾನಿಸಬೇಕು? ನಿತ್ಯ ಧ್ಯಾನಿಸುತ್ತಿರಲಾಗಿ, ಹೇ ಯೋಗೀಶ್ವರನೇ, ನಿನ್ನನ್ನು ನಾನು ಹೇಗೆ ತಿಳಿದುಕೊಳ್ಳಬೇಕು? ೧೭

ಜನಾರ್ದನಾ, ನಿನ್ನ ಯೋಗಸಾಮರ್ಥ್ಯವನ್ನೂ ನಿನ್ನ ಶ್ರೇಷ್ಠ ಸ್ವರೂಪಗಳನ್ನೂ ವಿಸ್ತಾರದಿಂದ ಪುನಃ ಹೇಳು. ಈ ಅಮೃತ ವಚನವನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಇಲ್ಲ. ೧೮

**ಶ್ರೀಕೃಷ್ಣನು ಅಂದದ್ದು**— ಒಳ್ಳೇದು, ಪಾರ್ಥಾ, ನನ್ನ ವಿಸ್ತಾರವು ಅನಂತವಿರುವದರಿಂದ ಮುಖ್ಯ ಮುಖ್ಯವಾದ ನನ್ನ ದಿವ್ಯ ವಿಭೂತಿಗಳನ್ನಷ್ಟೇ ಹೇಳುವೆನು ಕೇಳು. ೧೯

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥**

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ |**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ |**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ |**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಂ ॥ ೨೩ ॥**

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ |**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥**

ಎಲ್ಲ ಭೂತಗಳ ಅಂತರಂಗದಲ್ಲಿರುವ ಆತ್ಮನು ನಾನೇ, ಸಕಲ ಭೂತಗಳ ಆದಿ ಮಧ್ಯ ಅಂತವೂ ನಾನೇ. ೨೦

ಆದಿತ್ಯರಲ್ಲಿ ನಾನು ವಿಷ್ಣುವು, ಜ್ಯೋತಿಗಳಲ್ಲಿ ನಾನು ಕಿರಣಗಳುಳ್ಳ ಸೂರ್ಯನು. ಮರುದ್ದೇವತೆಗಳಲ್ಲಿ ನಾನು ಮರೀಚಿಯು, ನಕ್ಷತ್ರಗಳಲ್ಲಿ ನಾನು ಚಂದ್ರನು. ೨೧

ವೇದಗಳಲ್ಲಿ ನಾನು ಸಾಮವೇದನಿರುವೆನು. ದೇವತೆಗಳಲ್ಲಿ ನಾನು ಇಂದ್ರನು, ಇಂದ್ರಿಯಗಳಲ್ಲಿ ನಾನು ಮನವು, ಭೂತಜಾತಗಳಲ್ಲಿ ನಾನು ಚೈತನ್ಯವು. ೨೨

ರುದ್ರರಲ್ಲಿ ನಾನು ಶಂಕರನಿರುವೆನು, ಯಕ್ಷ ರಾಕ್ಷಸರಲ್ಲಿ ನಾನು ಕುಬೇರನು, ಅಷ್ಟವಸುಗಳಲ್ಲಿ ನಾನು ಅಗ್ನಿಯು, ಪರ್ವತಗಳಲ್ಲಿ ನಾನು ಮೇರುವು, ೨೩

ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೇ ಎಂದು ತಿಳಿ. ಸೇನಾಪತಿಗಳಲ್ಲಿ ನಾನು ಸ್ಕಂದನು (ಕಾರ್ತಿಕೇಯನು), ಜಲಾಶಯಗಳಲ್ಲಿ ನಾನು ಸಾಗರನು. ೨೪

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫ ॥**

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥ ೨೭ ॥**

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಂ ॥ ೨೯ ॥**

ಮಹರ್ಷಿಗಳಲ್ಲಿ ನಾನು ಭೃಗುಋಷಿಯು, ವಾಣಿಯಲ್ಲಿ ಏಕಾಕ್ಷರವಾದ ಓಂಕಾರವು. ಯಜ್ಞಗಳಲ್ಲಿ ನಾನು ಜಪಯಜ್ಞವು. ಸ್ಥಾವರ ವಸ್ತುಗಳಲ್ಲಿ ನಾನು ಹಿಮಾಚಲನು. **೨೫**

ಎಲ್ಲ ವೃಕ್ಷಗಳಲ್ಲಿ ನಾನು ಅಶ್ವತ್ಥನು, ಎಲ್ಲ ದೇವರ್ಷಿಗಳಲ್ಲಿ ನಾನು ನಾರದನು, ಗಂಧರ್ವರಲ್ಲಿ ನಾನು ಚಿತ್ರರಥನು, ಸಿದ್ಧರಲ್ಲಿ ನಾನು ಕಪಿಲ ಮುನಿಯು, **೨೬**

ನಾನು ಕುದುರೆಗಳಲ್ಲಿ ಅಮೃತಮಂಥನದ ಕಾಲಕ್ಕೆ ಹೊರಟ ಉಚ್ಚೈಃಶ್ರವಸನು, ಗಜೇಂದ್ರಗಳಲ್ಲಿ ನಾನು ಐರಾವತನು, ನರರಲ್ಲಿ ನಾನು ನರಾಧಿಪನು. **೨೭**

ಆಯುಧಗಳಲ್ಲಿ ನಾನು ವಜ್ರವು, ಆಕಳುಗಳಲ್ಲಿ ನಾನು ಕಾಮಧೇನುವು, ಪ್ರಜೋತ್ಪಾದಕರಲ್ಲಿ ನಾನು ಕಾಮನು, ಸರ್ಪಗಳಲ್ಲಿ ನಾನು ವಾಸುಕಿಯು, **೨೮**

ನಾಗಗಳಲ್ಲಿ ನಾನು ಅನಂತನು, ಜಲದೇವತೆಗಳಲ್ಲಿ ವರುಣನು, ಪಿತೃಗಳಲ್ಲಿ ನಾನು ಅರ್ಯಮನು, ಶಾಸನ ಮಾಡುವವರಲ್ಲಿ ನಾನು ಯಮನು. **೨೯**

ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಂ ।
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ ॥೩೦॥

ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಂ ।
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ ॥೩೨॥

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩॥

ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಂ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥೩೪॥

ದೈತ್ಯರಲ್ಲಿ ನಾನು ಪ್ರಹ್ಲಾದನು, ಭಕ್ಷಿಸುವವರಲ್ಲಿ ನಾನು ಮಹಾಕಾಲನು, ಮೃಗಗಳಲ್ಲಿ ನಾನು ಮೃಗರಾಜನು, ಪಕ್ಷಿಗಳಲ್ಲಿ ಗರುಡನು. ೩೦

ವೇಗವುಳ್ಳವರಲ್ಲಿ ನಾನು ವಾಯುವು, ಶಸ್ತ್ರಧಾರಿಗಳಲ್ಲಿ ನಾನು ರಾಮನು, ಮೀನಗಳಲ್ಲಿ ನಾನು ಮೊಸಳೆಯು, ಹರಿಯುವ ನದಿಗಳಲ್ಲಿ ನಾನು ಗಂಗೆಯು. ೩೧

ಅರ್ಜುನಾ, ಈ ಸೃಷ್ಟಿಯ ಆದಿ ಮಧ್ಯ ಅಂತವು ನಾನೇ, ವಿದ್ಯೆಗಳಲ್ಲಿ ನಾನು ಅಧ್ಯಾತ್ಮವಿದ್ಯೆಯು. ವಾದಿಸುವವರ ವಾದವು ನಾನೇ. ೩೨

ಅಕ್ಷರಗಳಲ್ಲಿ ನಾನು ಅಕಾರನು, ಸಮಾಸಗಳಲ್ಲಿ ನಾನು ದ್ವಂದ್ವವು. ಅಕ್ಷಯವಾದ ಕಾಲನೂ ನಾನೇ, ಎಲ್ಲ ಬದಿಗೂ ಮುಖಗಳುಳ್ಳ ಬ್ರಹ್ಮನೂ ನಾನೇ. ೩೩

ಸರ್ವಘಾತಕ ಮೃತ್ಯುವು ನಾನೇ. ಭವಿಷ್ಯದಲ್ಲಿ ಹುಟ್ಟುವವರ ಉತ್ಪತ್ತಿಸ್ಥಾನವೂ ನಾನೇ. ಸ್ತ್ರೀಯರಲ್ಲಿ ಕೀರ್ತಿ, ಲಕ್ಷ್ಮಿ, ವಾಣಿ, ಸ್ಮೃತಿ, ಮೇಧಾಶಕ್ತಿ, ಧೈರ್ಯ, ಕ್ಷಮೆ ಮುಂತಾದವುಗಳಾದರೂ ನಾನೇ. ೩೪

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ |**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ**
**|| ೩೫ ||**
**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ |**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್||೩೬||**
**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ |**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ || ೩೭ ||**
**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ |**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್||೩೮||**
**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ |**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ || ೩೯ ||**
**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ |**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ||೪೦||**

ಸಾಮ ಮಂತ್ರಗಳಲ್ಲಿ ನಾನು ಬ್ರಹತ್ಸಾಮವು, ಛಂದಸ್ಸುಗಳಲ್ಲಿ ಗಾಯತ್ರಿಯು ನಾನೇ. ತಿಂಗಳುಗಳಲ್ಲಿ ನಾನು ಮಾರ್ಗಶೀರ್ಷವು. ಋತುಗಳಲ್ಲಿ ನಾನು ವಸಂತನು. ೩೫

ತಕ್ಕಿಸುವವರಲ್ಲಿ ನಾನು ದ್ಯೂತವು, ತೇಜಸ್ವಿಗಳ ತೇಜವೂ ನಾನೇ. ನಾನೇ ಜಯ, ನಾನೇ ನಿಶ್ಚಯ, ಸತ್ವವಂತರ ಸತ್ವವೂ ನಾನೇ. ೩೬

ವೃಷ್ಣಿಗಳಲ್ಲಿ ನಾನು ವಾಸುದೇವನು, ಪಾಂಡವರಲ್ಲಿ ನಾನು ಧನಂಜಯನು. ಮುನಿಗಳಲ್ಲಿ ನಾನು ವ್ಯಾಸನು, ಕವಿಗಳಲ್ಲಿ ಶುಕ್ರಾಚಾರ್ಯನು. ೩೭

ಶಾಸಕರ ದಂಡವು ನಾನೇ, ಗೆಲ್ಲಲಿಚ್ಛಿಸುವವರ ರಾಜನೀತಿಯು ನಾನೇ, ಗೌಪ್ಯಗಳಲ್ಲಿ ಮೌನವೂ ನಾನೇ. ಜ್ಞಾನಿಗಳ ಜ್ಞಾನವಾದರೂ ನಾನೇ. ೩೮

ಅರ್ಜುನಾ, ಸರ್ವಭೂತಗಳ ಆದಿ ಬೀಜವೂ ನಾನೇ. ಸೃಷ್ಟಿಯಲ್ಲಿ ನನ್ನನ್ನು ಬಿಟ್ಟು ಇರುವ ಚರಾಚರ ಭೂತಗಳಾವೂ ಇಲ್ಲ. ೩೯

ಪಾರ್ಥಾ, ನನ್ನ ದಿವ್ಯಸ್ವರೂಪಗಳು ಅನಂತವಿರುವವು. ನನ್ನ ವಿಭೂತಿಗಳ ವಿಸ್ತಾರವನ್ನು ನಾನು ನಿನಗೆ ಈಗ ಅಂಶತಃ ಹೇಳಿದೆನು. ೪೦

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ |**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ ॥ ೪೧ ॥**
**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥**

ಇತಿ ಶ್ರೀಮದ್ಭಗವದ್ಗೀತಾಯಾಂ ವಿಭೂತಿಯೋಗೋ ನಾಮ
ದಶಮೋಧ್ಯಾಯಃ

ಸಂಕ್ಷೇಪದಿಂದ ಹೇಳುವದಾದರೆ ಯಾವ ಯಾವ ವಸ್ತುವು ವೈಭವ, ಸಿರಿಸಂಪತ್ತು, ಅಭಿವೃದ್ಧಿಗಳಿಂದ ಯುಕ್ತವಿರುವದೋ ಅದು ನನ್ನ ತೇಜದ ಅಂಶಮಾತ್ರದಿಂದ ಉದ್ಭವಿಸಿರುವದೆಂದು ತಿಳಿ. ೪೧

ಅಥವಾ ಅರ್ಜುನಾ, ನಿನಗೆ ಹೀಗೆ ಹೆಚ್ಚು ಹೇಳಿ ಯಾವ ಪ್ರಯೋಜನವು? ನಾನು ನನ್ನ ಒಂದೇ ಅಂಶದಿಂದ ಈ ವಿಶ್ವವನ್ನು ವ್ಯಾಪಿಸಿಬಿಟ್ಟಿರುವೆನೆಂಬುದನ್ನು ತಿಳಿದಿರು. ೪೨

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೦ನೆಯ ಅಧ್ಯಾಯವು ಸಮಾಪ್ತವು.

---

# ಹನ್ನೊಂದನೆಯ ಅಧ್ಯಾಯವು.

---

ಅರ್ಜುನ ಉವಾಚ—

ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮ ಸಂಜ್ಞಿತಂ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ॥೧॥
ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಂ ॥ ೨ ॥
ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥
ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥ ೪ ॥

ಅರ್ಜುನನು ಅಂದದ್ದು— ನನ್ನ ಮೇಲೆ ಅನುಗ್ರಹಮಾಡುವದಕ್ಕಾಗಿ ನೀನು ಹೇಳಿದ ಅಧ್ಯಾತ್ಮವೆಂಬ ಪರಮ ಜ್ಞಾನದ ರಹಸ್ಯದಿಂದ ನನ್ನ ಮೋಹವು ನಷ್ಟವಾಯ್ತು. ೧

ಕೃಷ್ಣನೇ, ಭೂತಗಳ ಹುಟ್ಟು ಸಾವುಗಳನ್ನೂ ನಿನ್ನ ಅವ್ಯಯವಾದ ಮಹಾತ್ಮ್ಯವನ್ನೂ ವಿಸ್ತಾರಪೂರ್ವಕವಾಗಿ ನಾನು ನಿನ್ನಿಂದ ಕೇಳಿದೆನು. ೨

ಪರಮೇಶ್ವರನೇ, ನೀನು, ಈಗ ವರ್ಣಿಸಿದ ನಿನ್ನ ದಿವ್ಯಸ್ವರೂಪದ ಪ್ರತ್ಯಕ್ಷ ದರ್ಶನವನ್ನು ನಾನು ಪಡೆಯಲಿಚ್ಛಿಸುವೆನು. ೩

ಪ್ರಭುವೇ, ಅದು ನನ್ನಿಂದ ನೋಡಲ್ಪಡುವದು ಶಕ್ಯವಿರುವದೆಂದು ನಿನಗೆ ತೋರಿದರೆ, ಯೋಗೇಶ್ವರನೇ, ಆ ಅವ್ಯಯವಾದ ನಿನ್ನ ಸ್ವರೂಪದ ದರ್ಶನವನ್ನು ನನಗೆ ಕೊಡು. ೪

ಶ್ರೀಭಗವಾನುವಾಚ—

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥
ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥
ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥
ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥ ೮ ॥

ಸಂಜಯ ಉವಾಚ—

ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥ ೯ ॥

ಕೃಷ್ಣನು ಅಂದದ್ದು— ಪಾರ್ಥಾ, ನೋಡು. ನಾನಾವಿಧದ ದಿವ್ಯವಾದ ನಾನಾವರ್ಣದ ನಾನಾಆಕೃತಿಗಳುಳ್ಳ ನನ್ನ ನೂರಾರು ಸಾವಿರಾರು ರೂಪಗಳನ್ನು ನೋಡು ೫

ಆದಿತ್ಯರನ್ನು ವಸುಗಳನ್ನು ರುದ್ರರನ್ನು ಅಶ್ವಿನಿಕುಮಾರರನ್ನು ಮರುತರನ್ನು ನೋಡು. ಭಾರತಾ, ಆಶ್ಚರ್ಯಕರವಾದ ಹಾಗೂ ಇದುವರೆಗೆ ಎಂದೂ ನೋಡದಿದ್ದ ಅನೇಕರನ್ನು ಇಲ್ಲಿ ನೋಡು. ೬

ಪಾರ್ಥಾ, ನನ್ನಲ್ಲಿ ಒಂದಾಗಿ ಕಂಗೊಳಿಸುವ ಚರಾಚರ ಸೃಷ್ಟಿಯನ್ನು ನೋಡು ಹಾಗೂ ನಿನಗೆ ಇಷ್ಟವಾದ ಮತ್ತೆ ಬೇಕಾದುದನ್ನು ನನ್ನ ದೇಹದಲ್ಲಿ ನೋಡಿಕೋ. ೭

ಈ ನಿನ್ನ ಚರ್ಮಚಕ್ಷುಗಳಿಂದ ನೀನು ನನ್ನನ್ನು ಕಾಣಲಾರೆ. ಆದುದರಿಂದ ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನು. ನನ್ನ ಯೋಗಸಾಮರ್ಥ್ಯವನ್ನು ನೋಡು. ೮

**ಸಂಜಯನು ಅಂದದ್ದು**— ಅರಸನೇ, ಮಹಾಯೋಗೇಶ್ವರನಾದ ಕೃಷ್ಣನು ಹೀಗೆ ಅಂದು ತನ್ನ ಸ್ವರೂಪದ ವೈಭವವನ್ನು ತೋರಿಸಿದನು. ೯

ಅನೇಕ ವಕ್ತ್ರನಯನಮನೇಕಾದ್ಭುತದರ್ಶನಂ ।
ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ ॥೧೦॥

ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।
ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥ ೧೧ ॥

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥೧೩॥

ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥

ಆ ರೂಪದಲ್ಲಿ ಅನೇಕ ಮುಖಗಳು, ಕಣ್ಣುಗಳು, ಅನೇಕ ಅದ್ಭುತ ನೋಟಗಳು, ಅನೇಕ ದಿವ್ಯ ಅಲಂಕಾರಗಳು, ಅನೇಕ ಸಜ್ಜುವಾದ ಆಯುಧಗಳು ಕಂಗೊಳಿಸುತ್ತಿದ್ದುವು. ೧೦

ಆ ಅನಂತ ಹಾಗೂ ಎಲ್ಲ ಕಡೆಗೂ ಮುಖಗಳುಳ್ಳ ಆಶ್ಚರ್ಯಕರವಾದ ರೂಪವು ದಿವ್ಯವಾದ ಉಡಿಗೆತೊಡಿಗೆ ಪೂಮಾಲೆಗಳಿಂದಲೂ ದಿವ್ಯ ಗಂಧಲೇಪನಗಳಿಂದಲೂ ಶೋಭಿಸುತ್ತಿತ್ತು. ೧೧

ಸಾವಿರ ಸೂರ್ಯರು ಏಕಕಾಲಕ್ಕೆ ಆಕಾಶದಲ್ಲಿ ಬೆಳಗಿದರೆ ಅವರು ಎಷ್ಟು ಹೊಳೆಯುವರೋ ಅಷ್ಟು ಆ ಮಹಾತ್ಮನು ಹೊಳೆಯುತ್ತಿದ್ದನು. ೧೨

ಒಡೆದು ಅನೇಕವಾಗಿ ವಿಭಾಗಿಸಲ್ಪಟ್ಟಂತೆ ಇರುವ ಈ ಇಡೀ ವಿಶ್ವವನ್ನು ಆ ದೇವದೇವನ ಶರೀರದಲ್ಲಿ ಒಂದಾದುದನ್ನು ಅರ್ಜುನನು ಕಂಡನು. ೧೩

ಆಗ ಆಶ್ಚರ್ಯಚಕಿತನಾಗಿ ಮೈಮೇಲೆ ಮುಳ್ಳು ಬಂದು ಅರ್ಜುನನು ದೇವರಿಗೆ ತಲೆಬಾಗಿ ನಮಸ್ಕಾರ ಮಾಡಿ ಸೆರಗೊಡ್ಡಿ ಪ್ರಾರ್ಥಿಸಿದನು. ೧೪

ಅರ್ಜುನ ಉವಾಚ—

ಪಶ್ಯಾಮಿ ದೇವಾಂಸ್ತವ ದೇವ ದೇಹೇ |
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ||
ಬ್ರಹ್ಮಾಣಮೀಶಂ ಕಮಲಾಸನಸ್ಥಮೃಷೀಂಶ್ಚ |
ಸರ್ವಾನುರಗಾಂಶ್ಚ ದಿವ್ಯಾನ್ ||೧೫||

ಅನೇಕಬಾಹೂದರವಕ್ತ್ರನೇತ್ರಂ |
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ ||
ನಾಂತಂ ನ ಮಧ್ಯಂ ನ ಪುನಸ್ತವಾದಿಂ |
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ ||೧೬||

ಕಿರೀಟಿನಂ ಗದಿನಂ ಚಕ್ರಿಣಂ ಚ |
ತೇಜೋರಾಶಿಂ ಸರ್ವತೋ ದೀಪ್ತಿಮಂತಂ ||
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್ |
ದೀಪ್ತಾನಲಾರ್ಕದ್ಯುತಿಮಪ್ರಮೇಯಂ ||೧೭||

ಅರ್ಜುನನು ಅಂದದ್ದು— ಹೇ ದೇವನೇ, ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನೂ ಎಲ್ಲ ಭೂತಸಮೂಹವನ್ನೂ ಕಮಲಾಸನದ ಮೇಲೆ ಕುಳಿತ ಸರ್ವಸ್ವಾಮಿಯಾದ ಬ್ರಹ್ಮನನ್ನೂ, ಎಲ್ಲ ಋಷಿಗಳನ್ನೂ ಎಲ್ಲ ದಿವ್ಯ ಸರ್ಪಗಳನ್ನೂ ನೋಡುತ್ತಿರುವೆನು. ೧೫

ಅನೇಕ ಬಾಹು, ಉದರ, ಮುಖ, ನೇತ್ರಗಳುಳ್ಳ ಅನಂತರೂಪನಾದ ನಿನ್ನನ್ನೇ ಎತ್ತೆತ್ತಲೂ ಕಾಣುತ್ತಿರುವೆನು. ವಿಶ್ವೇಶ್ವರನಾದ ವಿಶ್ವರೂಪನೇ ನಿನ್ನ ಆದಿ, ಮಧ್ಯ, ಅಂತಗಳನ್ನು ನಾನು ಎಲ್ಲಿಯೂ ಕಾಣೆನು. ೧೬

ಕಿರೀಟವನ್ನು ಧರಿಸಿದ, ಗದಾಧಾರಿಯೂ ಚಕ್ರಪಾಣಿಯೂ ಆದ, ಎಲ್ಲ ಕಡೆಗೂ ಬೆಳಕು ಬೀರಿದ, ತೇಜಃಪುಂಜನಾದ, ನೋಡಲಿಕ್ಕೆ ಅಸಹ್ಯನಾದ, ಅಗ್ನಿಸೂರ್ಯರಂತೆ ಬೆಳಕುಳ್ಳ, ಅಪಾರವಾದ ನಿನ್ನನ್ನೇ ಎಲ್ಲ ದಿಕ್ಕುಗಳಲ್ಲಿಯೂ ನೋಡುತ್ತಿರುವೆನು. ೧೭

ತ್ವಮಕ್ಷರಂ ಪರಮಂ ವೇದಿತವ್ಯಂ ।
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ॥
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ।
ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥

ಅನಾದಿಮಧ್ಯಾಂತಮನಂತವೀರ್ಯ ।
ಮನಂತಬಾಹುಂ ಶಶಿಸೂರ್ಯನೇತ್ರಂ ॥
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ ।
ಸ್ವತೇಜಸಾ ವಿಶ್ವಮಿದಂ ತಪಂತಂ ॥ ೧೯ ॥

ದ್ಯಾವಾಪೃಥಿವ್ಯೋರಿದಮಂತರಂ ಹಿ ।
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ॥
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ।
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥

ನೀನು ನಾಶರಹಿತನು, ನೀನು ತಿಳಿದುಕೊಳ್ಳತಕ್ಕ ಶ್ರೇಷ್ಠ ವಸ್ತು. ನೀನು ಈ ವಿಶ್ವದ ಪರಮ ಆಧಾರನು, ಅವ್ಯಯನು, ಶಾಶ್ವತ ಧರ್ಮ ರಕ್ಷಕನು. ನೀನು ಸನಾತನ ಪುರುಷನೆಂದು ನಾನು ತಿಳಿಯುವೆನು. ೧೮

ಆದಿ ಮಧ್ಯ ಅಂತಗಳಿಲ್ಲದ, ಅನಂತ ವೀರ್ಯವುಳ್ಳ, ಅನಂತ ಬಾಹುಗಳುಳ್ಳ, ಚಂದ್ರ ಸೂರ್ಯರೇ ಕಣ್ಣುಗಳಾದ, ಪ್ರಜ್ವಲಿತ ಅಗ್ನಿರೂಪ ಮುಖವುಳ್ಳ ನೀನು ನಿನ್ನ ತೇಜದಿಂದ ವಿಶ್ವವನ್ನು ಬೆಳಗುವದನ್ನು ನಾನು ನೋಡುತ್ತಿರುವೆನು. ೧೯

ಆಕಾಶಪೃಥಿವಿಗಳ ನಡುವಿನ ಅಂತರಿಕ್ಷವನ್ನೂ ಎಲ್ಲದಿಕ್ಕುಗಳನ್ನೂ ನೀನೊಬ್ಬನೇ ವ್ಯಾಪಿಸಿರುವಿ. ಈ ನಿನ್ನ ಅದ್ಭುತವಾದ ಉಗ್ರರೂಪವನ್ನು ನೋಡಿ ಹೇ ಮಹಾತ್ಮನೇ, ಈ ಮೂರು ಲೋಕಗಳು ನಡುಗುತ್ತಿರುವವು. ೨೦

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ |
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ||
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ |
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ || ೨೧ ||
ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ |
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ||
ಗಂಧರ್ವಯಕ್ಷಾಸುರಸಿದ್ಧಸಂಘಾ |
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ||೨೨||
ರೂಪಂ ಮಹತ್ತೇ ಬಹುವಕ್ತ್ರನೇತ್ರಂ |
ಮಹಾಬಾಹೋ ಬಹುಬಾಹೂರುಪಾದಂ ||
ಬಹೂದರಂ ಬಹುದಂಷ್ಟ್ರಾಕರಾಲಂ |
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಂ ||೨೩||

ಇಕೋ ಸುರಗಣಗಳು ನಿನ್ನನ್ನು ಪ್ರವೇಸಿಸುತ್ತಲಿವೆ. ಕೆಲವರು ಕೈಜೋಡಿಸಿ ಭಯಭೀತರಾಗಿ ಪ್ರಾರ್ಥಿಸುತ್ತಿರುವರು. ಸ್ವಸ್ತಿಯೆಂದು ನಿನ್ನನ್ನು ಮಹರ್ಷಿಗಳೂ ಸಿದ್ಧಸಂಘಗಳೂ ಸ್ತೋತ್ರಗಳಿಂದ ಹೊಗಳುತ್ತಿರುವವು. ೨೧

ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀಕುಮಾರರು, ಮರುತರು, ಪಿತೃಗಳು ಹಾಗೂ ಗಂಧರ್ವ, ಯಕ್ಷ, ಅಸುರ, ಸಿದ್ಧರ ಸಂಘಗಳು ಎಲ್ಲರೂ ನಿನ್ನ ಕಡೆಗೆ ವಿಸ್ಮಿತರಾಗಿ ನೋಡುತ್ತಿರುವರು. ೨೨

ಮಹಾ ವಿಶಾಲ ಬಾಹುಗಳುಳ್ಳವನೇ, ನಿನ್ನ ಅನೇಕ ಮುಖನೇತ್ರಗಳುಳ್ಳ, ಅನಂತ ಬಾಹುಗಳೂ ತೊಡೆಪಾದಗಳೂ ಇದ್ದ, ಅನೇಕ ವಿಕರಾಳ ದವಡೆಗಳುಳ್ಳ ನಿನ್ನ ಮಹದ್ರೂಪವನ್ನು ನೋಡಿ ಈ ಲೋಕಗಳು ಹಾಗೂ ನಾನಾದರೂ ಅಂಜಿಹೋಗಿರುವೆವು. ೨೩

ನಭಃ ಸ್ಪೃಶಂ ದೀಪ್ತಮನೇಕವರ್ಣಂ ।
ವ್ಯಾತ್ತಾನನಂ ದೀಪ್ತವಿಶಾಲನೇತ್ರಂ ॥
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ ।
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥೨೪॥

ದಂಷ್ಟ್ರಾ ಕರಾಲಾನಿ ಚ ತೇ ಮುಖಾನಿ ।
ದೃಷ್ಟ್ವೈವ ಕಾಲಾನಲಸಂನಿಭಾನಿ ॥
ದಿಶೋ ನ ಜಾನೇ ನ ಲಭೇ ಚ ಶರ್ಮ ।
ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ।
ಸರ್ವೇ ಸಹೈವಾವನಿಪಾಲಸಂಘೈಃ ॥
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ ।
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ॥ ೨೬ ॥

ಆಕಾಶಕ್ಕೆ ಮುಟ್ಟುವ, ತೇಜಸ್ವಿಯಾದ, ಅನೇಕ ಬಣ್ಣದ, ದವಡೆಗಳನ್ನು ಪಸರಿಸಿದ, ಹೊಳೆಯುವ ವಿಶಾಲನೇತ್ರಗಳುಳ್ಳ ನಿನ್ನನ್ನು ನೋಡಿ ನನ್ನ ಅಂತರಾತ್ಮನು ಅಂಜಿರುವದರಿಂದ ಹೇ ವಿಷ್ಣುವೇ, ನಾನು ಎದೆಗೆಟ್ಟಿರುವೆನು ಹಾಗೂ ನನ್ನ ಶಾಂತಿಯು ನಷ್ಟವಾಗಿರುವದು. ೨೪

ಪ್ರಳಯಕಾಲದ ಅಗ್ನಿಯಂತಿರುವ ಹಾಗೂ ವಿಕ್ರಾಳದವಡೆಗಳುಳ್ಳ ನಿನ್ನ ಮುಖಗಳನ್ನು ನೋಡಿ ನಾನು ದಿಕ್ಕುತಪ್ಪಿರುವೆನು ಹಾಗೂ ನನ್ನ ಸಮಾಧಾನವು ಹಾರಿಹೋಗಿರುವದು. ಹೇ ದೇವತೆಗಳ ಸ್ವಾಮಿಯಾದ ಜಗನ್ನಿವಾಸನೇ, ಪ್ರಸನ್ನನಾಗು. ೨೫

ಇಕೋ ಅರಸರ ಸಂಘಗಳನ್ನೊಡಗೊಂಡು ಧೃತರಾಷ್ಟ್ರನ ಎಲ್ಲ ಪುತ್ರರೂ ಭೀಷ್ಮದ್ರೋಣರೂ ಈ ಕರ್ಣನೂ ನಮ್ಮ ಪಕ್ಷದ ಎಲ್ಲ ಮುಖ್ಯ ವೀರರ ಸಹಿತವಾಗಿ ೨೬

ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ |
ದಂಷ್ಟ್ರಾಕರಾಲಾನಿ ಭಯಾನಕಾನಿ ||
ಕೇಚಿದ್ವಿಲಗ್ನಾ ದಶನಾಂತರೇಷು |
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥

ಯಥಾ ನದೀನಾಂ ಬಹವೋಽಂಬುವೇಗಾಃ |
ಸಮುದ್ರಮೇವಾಭಿಮುಖಾ ದ್ರವಂತಿ ||
ತಥಾ ತವಾಮೀ ನರಲೋಕವೀರಾ |
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮ ॥

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ |
ವಿಶಂತಿ ನಾಶಾಯ ಸಮೃದ್ಧವೇಗಾಃ ||
ತಥೈವ ನಾಶಾಯ ವಿಶಂತಿ ಲೋಕಾ |
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥

ನಿನ್ನ ಅಕ್ರಾಳವಿಕ್ರಾಳ ದವಡೆಗಳುಳ್ಳ ಭಯಾನಕವಾದ ಬಾಯಿಗಳಲ್ಲಿ ತ್ವರೆಯಿಂದ ಪ್ರವೇಶಿಸುತ್ತಿರುವರು. ಅಕೋ ಹಲ್ಲುಗಳಲ್ಲಿ ಸಿಕ್ಕು ಕೆಲವರ ತಲೆಗಳು ಪುಡಿಪುಡಿಯಾಗುತ್ತಿರುವವು. ೨೭

ವೇಗದಿಂದ ಹರಿಯುವ ನದಿಗಳ ಪ್ರವಾಹಗಳೆಲ್ಲ ಸಮುದ್ರವನ್ನೇ ಕುರಿತು ಹೋಗುವಂತೆ ಈ ನರವೀರರೆಲ್ಲರೂ ನಿನ್ನ ಪ್ರಜ್ವಲಿತವಾದ ಬಾಯಿಯ ಕಡೆಗೆಯೆ ಸಾಗಿರುವರು. ೨೮

ದೀಪದ ಹುಳಗಳು ತಮ್ಮ ನಾಶಕ್ಕಾಗಿಯೇ ಹೊತ್ತಿದ ಕಿಚ್ಚಿನಲ್ಲಿ ಬಳ್ಳೇ ವೇಗದಿಂದ ಹೋಗಿ ಬೀಳುವಂತೆ ಈ ಜನರಾದರೂ ತಮ್ಮ ನಾಶಕ್ಕಾಗಿಯೇ ರಭಸದಿಂದ ಬಂದು ನಿನ್ನ ಬಾಯಿಯಲ್ಲಿ ಬೀಳುತ್ತಿರುವರು. ೨೯

ಲೇಲಿಹ್ಯಸೇ ಗ್ರಸಮಾನಃ ಸಮಂತಾ |
ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ||
ತೇಜೋಭಿರಾಪೂರ್ಯ ಜಗತ್ಸಮಗ್ರಂ |
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ || ೩೦ ||

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ |
ನಮೋಽಸ್ತು ತೇ ದೇವವರ ಪ್ರಸೀದ ||
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ |
ನ ಹಿ ಪ್ರಜಾನಾಮಿ ತವ ಪ್ರವೃತ್ತಿಂ || ೩೧ ||

ಶ್ರೀಭಗವಾನುವಾಚ—

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ |
ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ||
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ |
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ || ೩೨ ||

ನಿನ್ನ ಪ್ರಜ್ವಲಿಸುವ ಮುಖಗಳಿಂದ ಸುತ್ತುಮುತ್ತಲಿನ ಎಲ್ಲ ಜನರನ್ನು ನುಂಗುತ್ತ ನೀನು ರುಚಿಗೊಂಡು ನಾಲಿಗೆ ನೆಕ್ಕುತ್ತಿರುವಿ. ಹೇ ವಿಷ್ಣೋ ನಿನ್ನ ಉಗ್ರ ಕಿರಣಗಳು ಎಲ್ಲ ಜಗತ್ತನ್ನು ತುಂಬಿ ಸುಡುತ್ತಿರುವವು. ೩೦

ಈ ಉಗ್ರಸ್ವರೂಪಿಯು ಯಾರು ಇದನ್ನು ನನಗೆ ಹೇಳು. ಹೇ ದೇವ ಶ್ರೇಷ್ಠನೇ, ನಿನಗೆ ನಮಸ್ಕಾರವಿರಲಿ. ಇನ್ನು ಪ್ರಸನ್ನನಾಗು. ಎಲ್ಲಕ್ಕೂ ಕಾರಣನಾದ ನಿನ್ನನ್ನು ಅರಿತುಕೊಳ್ಳಲಿಚ್ಛಿಸುವೆನು. ನಿನ್ನ ಈ ಅದ್ಭುತ ವ್ಯಾಪಾರವನ್ನು ನಾನು ಅರಿಯೆನು. ೩೧

**ಶ್ರೀಕೃಷ್ಣನು ಅಂದದ್ದು**— ನಾನು ಲೋಕವನ್ನು ಸಂಹರಿಸುವ ಪ್ರಚಂಡ ಕಾಲನು. ಲೋಕಸಂಹಾರಕ್ಕಾಗಿ ಇಲ್ಲಿ ಪ್ರವೃತ್ತನಾಗಿರುವೆನು. ಪ್ರತಿಸೈನ್ಯದಲ್ಲಿ ನಿಂತಿರುವ ಈ ಎಲ್ಲ ವೀರರು ನೀನು ಹೊಡೆಯದಿದ್ದರೂ ಇಲ್ಲದಂತಾಗುವದು ನಿಶ್ಚಯವು. ೩೨

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ ।
ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಂ ॥
ಮಯೈವೈತೇ ನಿಹತಾಃ ಪೂರ್ವಮೇವ ।
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ ।
ಕರ್ಣಂ ತಥಾನ್ಯಾನಪಿ ಯೋಧವೀರಾನ್ ॥
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ ।
ಯುಧ್ಯಸ್ವ ಜೇತಾಽಸಿ ರಣೇ ಸಪತ್ನಾನ್ ॥ ೩೪ ॥

ಸಂಜಯ ಉವಾಚ—

ಏತಚ್ಛ್ರುತ್ವಾ ವಚನಂ ಕೇಶವಸ್ಯ ।
ಕೃತಾಂಜಲಿರ್ವೇಪಮಾನಃ ಕಿರೀಟೀ ॥
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ।
ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥

ಆದುದರಿಂದ ಏಳು. ಇವರನ್ನು ಗೆದ್ದು ಯಶಸ್ಸನ್ನು ದೊರಕಿಸು. ಶತ್ರುಗಳನ್ನು ಜಯಿಸಿ ಸಮೃದ್ಧ ರಾಜ್ಯವನ್ನುಪಭೋಗಿಸು. ಈ ಮೊದಲೇ ಇವರೆಲ್ಲರೂ ನನ್ನಿಂದ ಸಂಹರಿಸಲ್ಪಟ್ಟಿರುವರು. ಪಾರ್ಥನೇ, ನೀನು ನನ್ನ ಕೈಯಲ್ಲಿ ಕೇವಲ ನಿಮಿತ್ತನಾಗು. ೩೩

ಮೊದಲೇ ನನ್ನಿಂದ ಹತರಾದ ಭೀಷ್ಮ, ದ್ರೋಣ, ಕರ್ಣ, ಜಯದ್ರಥ ಮುಂತಾದ ವೀರರನ್ನು ಸಂಹರಿಸು. ವ್ಯಥೆಪಡಬೇಡ. ಯುದ್ಧ ಮಾಡು. ರಣದಲ್ಲಿ ನೀನು ಶತ್ರುಗಳನ್ನು ಜಯಿಸುವಿ. ೩೪

**ಸಂಜಯನು ಅಂದದ್ದು—** ಕೃಷ್ಣನ ಈ ವಚನವನ್ನು ಕೇಳಿ ಅರ್ಜುನನು ನಡುಗುತ್ತ ಕೈಜೋಡಿಸಿ ನಮಸ್ಕಾರಮಾಡಿ ತಲೆಬಾಗಿ ಗದ್ಗದಕಂಠದಿಂದ ಪುನಃ ಕೃಷ್ಣನಿಗೆ ಅಂದನು. ೩೫

ಅರ್ಜುನ ಉವಾಚ—

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ |
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ||
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ |
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ || ೩೬ ||

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್ |
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ||
ಅನಂತ ದೇವೇಶ ಜಗನ್ನಿವಾಸ |
ತ್ವಮಕ್ಷರಂ ಸದಸತ್ತತ್ಪರಂ ಯತ್ || ೩೭ ||

ತ್ವಮಾದಿದೇವಃ ಪುರುಷಃ ಪುರಾಣ |
ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ||
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ |
ತ್ವಯಾ ತತಂ ವಿಶ್ವಮನಂತರೂಪ || ೩೮ ||

ಅರ್ಜುನನು ಅಂದದ್ದು— ದೇವಾ, ನಿನ್ನ ಸಂಕೀರ್ತನದಿಂದ ಜಗತ್ತು ಆನಂದಿಸುವದು. ಹಾಗೂ ಆ ಸಂಕೀರ್ತನದಲ್ಲಿ ರಮಮಾಣವಾಗುವದು. ರಾಕ್ಷಸರು ಅಂಜಿಕೆಯಿಂದ ದಿಕ್ಕೆಟ್ಟು ಓಡಿಹೋಗುವರು. ಎಲ್ಲ ಸಿದ್ಧಸಂಘಗಳು ನಿನಗೆ ನಮಸ್ಕಾರಮಾಡುವವು. ಇದೆಲ್ಲವೂ ಯೋಗ್ಯವೇ ಸರಿ. ೩೬

ಹೇ ಮಹಾತ್ಮನ್ ಬ್ರಹ್ಮನನ್ನು ಸಹ ಹುಟ್ಟಿಸಿದ ಶ್ರೇಷ್ಠನಾದ ನಿನಗೆ ಅವರೆಲ್ಲರೂ ನಮಸ್ಕಾರವನ್ನು ಮಾಡುವದು ಆಶ್ಚರ್ಯವೇ? ಅನಂತನೇ, ಜಗನ್ನಿವಾಸನೇ, ನೀನು ಅಕ್ಷರನು, ಸತ್ ಅಸತ್ ಎಂಬುವು ನೀನೇ. ಅವುಗಳಾಚೆಗಿರುವ ಪರಮ ತತ್ವವಾದರೂ ನೀನೇ. ೩೭

ನೀನು ಆದಿದೇವನು, ಪುರಾಣ ಪುರುಷನು, ನೀನು ಈ ವಿಶ್ವದ ಪರಮ ಆಧಾರನು. ನೀನು ಜ್ಞಾನಿಯು ಮತ್ತು ಜ್ಞೇಯವು, ನೀನು ಪರಮಸ್ಥಾನವು, ಹೇ ಅನಂತರೂಪನೇ ಈ ಸಕಲ ವಿಶ್ವವು ನಿನ್ನಿಂದ ವ್ಯಾಪ್ತವು. ೩೮

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ |
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ||
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ |
ಪುನಶ್ಚ ಭೂಯೋಽಪಿ ನಮೋ ನಮಸ್ತೇ ||೩೯||

ನಮಃ ಪುರಸ್ತಾದಥ ಪೃಷ್ಠತಸ್ತೇ |
ನಮೋಽಸ್ತು ತೇ ಸರ್ವತ ಏವ ಸರ್ವ ||
ಅನಂತವೀರ್ಯಾಮಿತವಿಕ್ರಮಸ್ತ್ವಂ |
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ||೪೦||

ಸಖೇತಿ ಮತ್ವಾ ಪ್ರಸಭಂ ಯದುಕ್ತಂ |
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ||
ಅಜಾನತಾ ಮಹಿಮಾನಂ ತವೇದಂ |
ಮಯಾ ಪ್ರಮಾದಾತ್ಪ್ರಣಯೇನ ವಾಪಿ ||೪೧||

ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಪ್ರಪಿತಾಮಹ ಇವರೆಲ್ಲರೂ ನೀನೇ. ಸಾವಿರ ಸಾರೆ ನಿನಗೆ ನಮಸ್ಕಾರವಿರಲಿ. ಪುನಃಪುನಃ ನಿನಗೆ ನಮಸ್ಕಾರವಿರಲಿ. ೩೯

ನಿನಗೆ ಮುಂದಿನಿಂದ ನಮಸ್ಕಾರವು ಹಿಂದಿನಿಂದ ನಮಸ್ಕಾರವು. ನಿನಗೆ ಎಲ್ಲ ಕಡೆಯಿಂದಲೂ ನಮಸ್ಕಾರವಿರಲಿ. ನೀನು ಅನಂತವೀರ್ಯನು, ಅಮಿತ ಶೌರ್ಯವುಳ್ಳವನು, ಎಲ್ಲವನ್ನೂ ನೀನೇ ಸಿದ್ಧಿಗೈಯುವಿ. ಆದುದರಿಂದ ಎಲ್ಲವೂ ನೀನೇ ಇರುವಿ. ೪೦

ಈ ನಿನ್ನ ಮಹಿಮೆಯನ್ನರಿಯದೆ ನೀನು ನನ್ನ ಗೆಳೆಯನೆಂದು ತಿಳಿದು ಹೇ ಕೃಷ್ಣನೇ, ಯಾದವನೇ, ಗೆಳೆಯನೇ ಎಂದು ತಪ್ಪು ತಿಳುವಳಿಕೆಯಿಂದಾಗಲಿ ಪ್ರೇಮದಿಂದಾಗಲಿ ನಿನ್ನನ್ನು ಅಮರ್ಯಾದೆಯಿಂದ ಸಂಬೋಧಿಸಿದ್ದನ್ನೂ, ೪೧

ಯಚ್ಚಾವಹಾಸಾರ್ಥಮಸತ್ಕೃತೋಽಸಿ ।
ವಿಹಾರಶಯ್ಯಾಸನಭೋಜನೇಷು ॥
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ ।
ತತ್ಕ್ಷಾಮಯೇ ತ್ವಾಮಹಮಪ್ರಮೇಯಂ ॥ ೪೨ ॥

ಪಿತಾಸಿ ಲೋಕಸ್ಯ ಚರಾಚರಸ್ಯ ।
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ॥
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ।
ಲೋಕತ್ರಯೇಽಪ್ಯಪ್ರತಿಮಪ್ರಭಾವಃ ॥ ೪೩ ॥

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ।
ಪ್ರಸಾದಯೇ ತ್ವಾಮಹಮೀಶಮೀಡ್ಯಂ ॥
ಪಿತೇವ ಪುತ್ರಸ್ಯ ಸಖೇವ ಸಖ್ಯುಃ ।
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥ ೪೪ ॥

ಆಡುವಾಗ ಕುಳಿತಾಗ ಮಲಗಿದಾಗ ಉಣ್ಣುವಾಗ ಒಬ್ಬನೇ ಇದ್ದಾಗ ಅಥವಾ ನಾಲ್ಕು ಜನರಲ್ಲಿ ನಾನು ಚೇಷ್ಟೆಯಿಂದ ನಿನ್ನನ್ನು ಅವಮಾನಿಸಿದ್ದನ್ನೂ, ಹೇ ಅಗಮ್ಯನೇ, ನೀನು ಕ್ಷಮಿಸಬೇಕೆಂದು ಈಗ ಪ್ರಾರ್ಥಿಸುವೆನು. ೪೨

ಈ ಚರಾಚರ ಲೋಕಗಳಿಗೆ ನೀನು ತಂದೆಯು, ನೀನು ಶ್ರೇಷ್ಠನಾದ ಪೂಜ್ಯಗುರುವು, ನಿನಗೆ ಸಮಾನರು ಸಹ ಯಾರೂ ಇಲ್ಲ. ಅಂದ ಮೇಲೆ ಹೆಚ್ಚಿನವರೆಲ್ಲಿಂದ ಬರಬೇಕು? ತ್ರಿಲೋಕಗಳಲ್ಲಿಯೂ ನಿನ್ನ ಸಮಾನ ಶಕ್ತಿಯುಳ್ಳವರು ಯಾರೂ ಇಲ್ಲ. ೪೩

ಆದುದರಿಂದ ನಾನು ನಮಸ್ಕಾರಮಾಡಿ ಈ ನನ್ನ ದೇಹವನ್ನು ಬಾಗಿಸಿ ಪೂಜ್ಯನಾದ, ಈಶನಾದ ನಿನ್ನನ್ನು ಅನುಗ್ರಹಿಸೆಂದು ಪ್ರಾರ್ಥಿಸುವೆನು. ದೇವನೇ, ತಂದೆಯು ಮಗನ, ಗೆಳೆಯನು ಗೆಳೆಯನ, ಪ್ರಿಯನು ಪ್ರಿಯೆಯ ಅಪರಾಧವನ್ನು ಕ್ಷಮಿಸುವಂತೆ ನನ್ನ ಅಪರಾಧವನ್ನು ನೀನು ಕ್ಷಮಿಸಬೇಕು. ೪೪

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ |
ಭಯೇನ ಚ ಪ್ರವ್ಯಥಿತಂ ಮನೋ ಮೇ ॥
ತದೇವ ಮೇ ದರ್ಶಯ ದೇವ ರೂಪಂ |
ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥

ಕಿರೀಟಿನಂ ಗದಿನಂ ಚಕ್ರಹಸ್ತ |
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ॥
ತೇನೈವ ರೂಪೇಣ ಚತುರ್ಭುಜೇನ |
ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥

ಶ್ರೀಭಗವಾನುವಾಚ—

ಮಯಾ ಪ್ರಸನ್ನೇನ ತವಾರ್ಜುನೇದಂ |
ರೂಪಂ ಪರಂ ದರ್ಶಿತಮಾತ್ಮಯೋಗಾತ್ ॥
ತೇಜೋಮಯಂ ವಿಶ್ವಮನಂತಮಾದ್ಯಂ |
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ ॥ ೪೭ ॥

ಎಂದಿಗೂ ಕಾಣದಂತಹದನ್ನು ಕಂಡು ನಾನು ಹರ್ಷಿತನಾಗಿರುವೆನು ಹಾಗೂ ನನ್ನ ಮನಸ್ಸು ಭಯಭೀತವಾಗಿರುವದು. ದೇವತೆಗಳ ಸ್ವಾಮಿಯಾದ ಜಗನ್ನಿವಾಸನೇ, ಪ್ರಸನ್ನನಾಗು ಹಾಗೂ ಆ ನಿನ್ನ ಪೂರ್ವ ಸ್ವರೂಪವನ್ನು ತೋರಿಸು. ೪೫

ಹೇ ಸಾವಿರ ಬಾಹುಗಳುಳ್ಳ ವಿಶ್ವಮೂರ್ತಿಯೇ, ಮುಕುಟವನ್ನು ಹೊತ್ತ ಗದಾಚಕ್ರಗಳನ್ನು ಧರಿಸಿದ ನಿನ್ನ ಸುಂದರ ರೂಪವನ್ನು ನೋಡಲಿಚ್ಛಿಸುವೆನು. ಆ ನಿನ್ನ ಚತುರ್ಭುಜ ರೂಪವನ್ನು ನನಗೆ ತೋರಿಸು. ೪೬

ಕೃಷ್ಣನು ಅಂದದ್ದು— ಅರ್ಜುನನೇ, ನಿನ್ನ ಹೊರ್ತು ಮಿಕ್ಕವರಾರೂ ಮೊದಲು ನೋಡದೇ ಇದ್ದ ತೇಜೋಮಯವಾದ ಹಾಗೂ ಅನಾದಿಯಾದ ವಿಶ್ವರೂಪವನ್ನು ನನ್ನ ಯೋಗಸಾಮರ್ಥ್ಯದಿಂದ ನಾನು ನಿನಗೆ ಪ್ರಸನ್ನನಾಗಿ ತೋರಿಸಿದೆನು. ೪೭

ನ ವೇದಯಜ್ಞಾಧ್ಯಯನೈರ್ನ ದಾನೈ ।
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ॥
ಏವಂ ರೂಪಃ ಶಕ್ಯ ಅಹಂ ನೃಲೋಕೇ ।
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ ।
ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಂ ॥
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ।
ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥

ಸಂಜಯ ಉವಾಚ—

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ।
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ॥
ಆಶ್ವಾಸಯಾಮಾಸ ಚ ಭೀತಮೇನಂ ।
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥

ವೇದಪಠನ, ಯಜ್ಞ, ಅಧ್ಯಯನ, ದಾನ, ಕರ್ಮ, ಉಗ್ರತಪ ಮುಂತಾದವುಗಳಿಂದ ಸಹ ಈ ಲೋಕದಲ್ಲಿ, ಎಲೈ ಪಾರ್ಥ, ನಿನ್ನ ಹೊರ್ತು ಮಿಕ್ಕವರಿಗೆ ಇಂತಹ ರೂಪದ ದರ್ಶನವಾಗಲಾರದು. ೪೮

ಈ ನನ್ನ ಘೋರ ರೂಪವನ್ನು ನೋಡಿ ವ್ಯಥೆಪಡಬೇಡ, ಗಾಬರಿಯಾಗಬೇಡ. ನಿರ್ಭಯನಾಗಿ ಪ್ರಸನ್ನಚಿತ್ತವುಳ್ಳವನಾಗಿ ಪುನಃ ಅದೇ ನನ್ನ ಮೊದಲಿನ ರೂಪವನ್ನು ನೋಡು. ೪೯

**ಸಂಜಯನು ಅಂದದ್ದು**— ಕೃಷ್ಣನು ಅರ್ಜುನನಿಗೆ ಹೀಗೆ ಹೇಳಿ ತನ್ನ ಪೂರ್ವ ರೂಪವನ್ನು ಮರಳಿ ತೋರಿಸಿದನು. ಪುನಃ ಸೌಮ್ಯರೂಪವನ್ನು ಧರಿಸಿ ಭಯಭೀತನಾದ ಅರ್ಜುನನಿಗೆ ನಂಬಿಗೆಯನ್ನಿತ್ತನು. ೫೦

ಅರ್ಜುನ ಉವಾಚ—

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥

ಶ್ರೀಭಗವಾನುವಾಚ—

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥
ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥
ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥

ಅರ್ಜುನನು ಅಂದದ್ದು— ಕೃಷ್ಣಾ, ಈ ನಿನ್ನ ಸೌಮ್ಯವಾದ ಮನುಷ್ಯರೂಪವನ್ನು ನೋಡಿ ನನ್ನ ಚಿತ್ತವು ಸ್ಥಿರವಾಗಿ ಪೂರ್ವಸ್ಥಿತಿಗೆ ಬಂದಿತು. ೫೧

ಕೃಷ್ಣನು ಅಂದದ್ದು— ಎಂದೆಂದಿಗೂ ದರ್ಶನ ದೊರೆಯಲಸಾಧ್ಯವಾದ ಯಾವ ನನ್ನ ರೂಪವನ್ನು ನೀನು ನೋಡಿದೆಯೋ ಆ ನನ್ನ ರೂಪವನ್ನು ನೋಡಲಿಕ್ಕೆ ದೇವತೆಗಳು ಸಹ ಯಾವಾಗಲೂ ಉತ್ಸುಕರಿರುವರು. ೫೨

ನಿನಗೆ ಯಾವ ರೂಪದ ದರ್ಶನವಾಯಿತೋ ಆ ರೂಪದ ದರ್ಶನವು ವೇದ, ತಪಸ್ಸು, ದಾನ, ಯಜ್ಞ ಮುಂತಾದವುಗಳ ಸಹಾಯದಿಂದ ಸಹ ಆಗುವದು ಶಕ್ಯವಿಲ್ಲ. ೫೩

ಅರ್ಜುನಾ, ಈ ಪ್ರಕಾರವಾಗಿ ನನ್ನ ಜ್ಞಾನವಾಗುವದು, ನನ್ನ ದರ್ಶನವಾಗುವದು, ತತ್ವತಃ ನನ್ನಲ್ಲಿ ಐಕ್ಯವಾಗುವದು ಕೇವಲ ಅನನ್ಯ ಭಕ್ತಿಯಿಂದ ಮಾತ್ರ ಶಕ್ಯವು. ೫೪

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ |**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ ೫೫ ॥**

ಇತಿ ಶ್ರೀಮದ್ಭಗವದ್ಗೀತಾಯಾಂ ಉಪನಿಷತ್ಸು ವಿಶ್ವರೂಪದರ್ಶನಂ
ನಾಮೈಕಾದಶೋಽಧ್ಯಾಯಃ

ಅರ್ಜುನಾ, ನನ್ನ ಕರ್ಮವನ್ನು ಮಾಡುವವನು, ನಾನೇ ಶ್ರೇಷ್ಠನೆಂದು ಭಾವಿಸುವವನು, ನಿಃಸಂಗನಿದ್ದ ನನ್ನ ಭಕ್ತನು, ಸರ್ವ ಭೂತಗಳ ವಿಷಯದಲ್ಲಿ ನಿರ್ವೈರನಾದವನು ನನ್ನ ಬಳಿಗೆ ಬರುವನು. ೫೫

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೧ನೆಯ ಅಧ್ಯಾಯವು ಸಮಾಪ್ತವು.

---

# ಹನ್ನೆರಡನೆಯ ಅಧ್ಯಾಯವು.

---

ಅರ್ಜುನ ಉವಾಚ—

ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥

ಶ್ರೀಭಗವಾನುವಾಚ—

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥
ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಂ ॥ ೩ ॥
ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥

**ಅರ್ಜುನನು ಅಂದದ್ದು**—ಹೀಗೆ ಸತತ ಯುಕ್ತಚಿತ್ತರಾಗಿ ಯಾವ ಭಕ್ತರು ನಿನ್ನನ್ನು ಭಜಿಸುವರೋ ಹಾಗೂ ಯಾರು ನಿನ್ನ ಅವಿನಾಶಿಯೂ ಅವ್ಯಕ್ತವೂ ಆದ ರೂಪವನ್ನುಪಾಸಿಸುವರೋ ಅವರೀರ್ವರಲ್ಲಿ ಹೆಚ್ಚಿನ ಯೋಗವನ್ನರಿತವರು ಯಾರು? ೧

**ಕೃಷ್ಣನು ಅಂದದ್ದು**— ಅತ್ಯಂತ ಶ್ರದ್ಧಾಯುಕ್ತರಾಗಿ ನನ್ನಲ್ಲಿ ಚಿತ್ತವಿಟ್ಟು ಯಾವ ನಿತ್ಯಯುಕ್ತರು ನನ್ನನ್ನು ಭಜಿಸುವರೋ ಅವರು ಎಲ್ಲಕ್ಕೂ ಹೆಚ್ಚಿನ ಯೋಗಿಗಳೆಂದು ನನ್ನ ಅಭಿಪ್ರಾಯವು. ೨

ಆದರೆ ನಾಶರಹಿತವಾದ, ಇಂತಹದೆಂದು ಹೇಳಲಿಕ್ಕೆ ಬಾರದ, ಅವ್ಯಕ್ತ, ಸರ್ವವ್ಯಾಪಕ, ಅಚಿಂತ್ಯ, ಎಲ್ಲ ವಸ್ತುಗಳ ಅಂತರಂಗದಲ್ಲಿದ್ದ, ಅಚಲ, ಸತ್ಯವಾದ ನನ್ನ ರೂಪವನ್ನುಪಾಸಿಸುವ, ೩

ಹಾಗೂ ಇಂದ್ರಿಯಗಳನ್ನು ಸಂಯಮಿಸಿ ಸರ್ವತ್ರ ಸಮಬುದ್ಧಿಯುಳ್ಳವರಾಗಿ ಸರ್ವ ಭೂತಗಳ ಹಿತವನ್ನು ಮಾಡುವದರಲ್ಲಿ ರತವಿರುವವರಾದರೂ ನನ್ನ ಬಳಿಗೆ ಬರುವರು. ೪

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ॥ ೭ ॥

ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥

ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥ ೧೦ ॥

ಅವ್ಯಕ್ತವನ್ನು ಧ್ಯಾನಿಸುವವರಿಗೆ ಹೆಚ್ಚು ಕಷ್ಟವಾಗುವದು. ಯಾಕಂದರೆ ಅವ್ಯಕ್ತೋಪಾಸನೆಯು ಮಾರ್ಗವು ದೇಹಧಾರಿಗಳಿಗೆ ಕಠಿಣವಾದದ್ದು. ೫

ಆದರೆ ಯಾರು ನನಗೆ ಎಲ್ಲ ಕರ್ಮಗಳನ್ನರ್ಪಿಸಿ ನನ್ನನ್ನಾಶ್ರಯಿಸಿ ಅನನ್ಯ ಯೋಗದಿಂದ ನನ್ನನ್ನು ಧ್ಯಾನಿಸುತ್ತ ಭಜಿಸುವರೋ ೬

ಹೇ ಪಾರ್ಥಾ, ಅವರು ನನ್ನಲ್ಲಿ ತಮ್ಮ ಚಿತ್ತವನ್ನರ್ಪಿಸಿದ್ದರಿಂದ ಅವರನ್ನು ನಾನು ತೀವ್ರವೇ ಮೃತ್ಯು ಸಂಸಾರಸಾಗರದಿಂದ ಉದ್ಧರಿಸುವೆನು. ೭

ನನ್ನಲ್ಲಿಯೇ ಚಿತ್ತವನ್ನಿಡು, ನನ್ನಲ್ಲಿಯೇ ಬುದ್ಧಿಯನ್ನರ್ಪಿಸು. ಅಂದರೆ ಇನ್ನು ಮುಂದೆ ನನ್ನಲ್ಲಿಯೇ ವಾಸಿಸುವಿ. ಇದು ನಿಃಸಂಶಯ. ೮

ಇನ್ನು ನನ್ನಲ್ಲಿ ಚಿತ್ತವನ್ನು ಸ್ಥಿರಗೊಳಿಸುವದಾಗದಿದ್ದರೆ, ಅರ್ಜುನಾ, ನನ್ನನ್ನು ಅಭ್ಯಾಸಯೋಗದಿಂದ ದೊರಕಿಸಲೆತ್ನಿಸು. ೯

ಅಭ್ಯಾಸವನ್ನು ಸಹ ಮಾಡುವದಾಗದಿದ್ದರೆ, ನನ್ನ ಕರ್ಮಗಳನ್ನು ಮಾಡುವದರಲ್ಲಿ ರತನಾಗು. ನನ್ನ ಸಲುವಾಗಿ ಕರ್ಮಗಳನ್ನು ಮಾಡುವದರಿಂದ ಸಹ ಸಿದ್ಧಿಯನ್ನು ಪಡೆಯುವಿ. ೧೦

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ |**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ॥ ೧೨ ॥**

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ |**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ |**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ॥೧೪॥**

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥ ೧೫ ॥**

ನೀನು ಇದನ್ನೂ ಮಾಡಲು ಅಸಮರ್ಥನಿದ್ದರೆ ನನ್ನಲ್ಲಿ ಚಿತ್ತವನ್ನಿಟ್ಟು ಪ್ರಯತ್ನಪೂರ್ವಕವಾಗಿ ಎಲ್ಲ ಕರ್ಮಫಲಗಳನ್ನು ತ್ಯಜಿಸುವವನಾಗು. ೧೧

ಅಭ್ಯಾಸಕ್ಕೂ ಜ್ಞಾನವು ಹೆಚ್ಚಿನದು, ಜ್ಞಾನಕ್ಕೂ ಧ್ಯಾನವು ಹೆಚ್ಚಿನದು, ಧ್ಯಾನಕ್ಕೂ ಕರ್ಮಫಲತ್ಯಾಗವು ಹೆಚ್ಚಿನದು, ತ್ಯಾಗಕ್ಕೂ ಶಾಂತಿಯು ಹೆಚ್ಚಿನದು. ೧೨

ಯಾವ ಭಕ್ತನು ದ್ವೇಷರಹಿತನು, ಎಲ್ಲ ಭೂತಗಳ ಮಿತ್ರನು, ಕೃಪಾವಂತನು, ಮಮತ್ವರಹಿತನು, ನಿರಹಂಕಾರಿಯು, ಸುಖದುಃಖಗಳನ್ನು ಸಮವೆಂದು ಲೆಕ್ಕಿಸುವವನು, ಕ್ಷಮಾವಂತನು, ೧೩

ಸದಾ ಸಂತುಷ್ಟನು, ಯೋಗಿಯು, ಸಂಯಮಿಯು, ದೃಢನಿಶ್ಚಯಿಯು, ನನಗೆ ಮನಬುದ್ಧಿಗಳನ್ನರ್ಪಿಸಿದವನು ಇರುವನೋ ಅವನು ನನಗೆ ಪ್ರಿಯನು. ೧೪

ಯಾವನಿಂದ ಜನರಿಗೆ ಆತಂಕವಿಲ್ಲವೋ ಯಾವನು ಜನರಿಂದ ಆತಂಕ ಪಡುವದಿಲ್ಲವೋ ಯಾವನು ಹರ್ಷ ಕ್ರೋಧ ಭಯ ವಿಷಾದಗಳಿಂದ ಮುಕ್ತನೋ ಅವನು ನನಗೆ ಪ್ರಿಯನು. ೧೫

ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ |
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥
ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ |
ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥೧೭॥
ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ |
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥೧೮॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನ ಚಿತ್ |
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧೯॥
ಯೇ ತು ಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ |
ಶ್ರದ್ದಧಾನಾಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥

ಇತಿ ಶ್ರೀಮದ್ಭಗವದ್ಗೀತಾಯಾಂ ಭಕ್ತಿಯೋಗೋನಾಮ ದ್ವಾದಶೋಧ್ಯಾಯಃ

ಅಪೇಕ್ಷಾರಹಿತನು, ಶುದ್ಧನು, ದಕ್ಷನು, ಉದಾಸೀನನು, ವ್ಯಥಾ ರಹಿತನು ಇಷ್ಟು ಎಲ್ಲ ಕಾಮ್ಯಕರ್ಮಗಳನ್ನು ಬಿಟ್ಟ ಭಕ್ತನು ನನಗೆ ಪ್ರಿಯನು. ೧೬

ಯಾವ ಭಕ್ತನು ಹರ್ಷಿಸುವದಿಲ್ಲ, ದ್ವೇಷಿಸುವದಿಲ್ಲ, ಶೋಕಮಾಡುವದಿಲ್ಲ, ಆಶಿಸುವದಿಲ್ಲ, ಯಾವನು ಶುಭಾಶುಭಗಳೆರಡನ್ನೂ ಬಿಟ್ಟಿರುವನು, ಆವನು ನನಗೆ ಪ್ರಿಯನು. ೧೭

ಶತ್ರುಮಿತ್ರರನ್ನೂ ಮಾನಾಪಮಾನಗಳನ್ನೂ ಸಮವೆಂದು ಭಾವಿಸುವ, ಶೀತೋಷ್ಣ ಸುಖದುಃಖಗಳಲ್ಲಿ ಸರಿಯಾಗಿ ಅನಾಸಕ್ತನಿದ್ದ, ೧೮

ನಿಂದಾಸ್ತುತಿಗಳನ್ನು ಸಮದೃಷ್ಟಿಯಿಂದ ನೋಡುವ, ಮೌನದಿಂದಿರುವ, ಯದೃಚ್ಛೆಯಿಂದ ಪ್ರಾಪ್ತವಾದ ವಸ್ತುಗಳಿಂದ ಸಂತುಷ್ಟನಿರುವ ನನ್ನನ್ನಾಶ್ರಯಿಸಿದ ಭಕ್ತನು ನನಗೆ ಪ್ರಿಯನು. ೧೯

ಶ್ರದ್ಧೆಯನ್ನಿಟ್ಟು ಮತ್ಪರಾಯಣರಾಗಿ ಯಾವ ಭಕ್ತರು ನಾನು ಹೇಳಿದಂತೆ ಈ ಅಮೃತದಂತಿರುವ ಧರ್ಮವನ್ನಾಚರಿಸುವರೋ ಅವರು ನನಗೆ ಅತ್ಯಂತ ಪ್ರಿಯರು. ೨೦

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೨ನೆಯ ಅಧ್ಯಾಯವು ಸಮಾಪ್ತವು.

# ಹದಿಮೂರನೆಯ ಅಧ್ಯಾಯವು.

---

ಅರ್ಜುನ ಉವಾಚ—

**ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ |**
**ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ ೧ ॥**

ಶ್ರೀಭಗವಾನುವಾಚ—

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ |**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೨ ॥**

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ |**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥೩॥**

**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್ |**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೪ ॥**

ಅರ್ಜುನನು ಅಂದದ್ದು— ಹೇ ಕೇಶವನೇ, ಪ್ರಕೃತಿಯೆಂದರೇನು, ಪುರುಷನೆಂದರೆ ಏನು, ಕ್ಷೇತ್ರವೆಂದರೆ ಏನು, ಕ್ಷೇತ್ರಜ್ಞನೆಂದರೆ ಏನು, ಎಂಬದನ್ನು ನಾನು ತಿಳಿಯಲಪೇಕ್ಷಿಸುವೆನು. ೧

ಕೃಷ್ಣನು ಅಂದದ್ದು— ಪಾರ್ಥ, ಈ ದೇಹವು ಕ್ಷೇತ್ರವೆಂದೆನಿಸುವದು. ಈ ಕ್ಷೇತ್ರವನ್ನರಿಯುವವನಿಗೆ ಜ್ಞಾನಿಗಳು ಕ್ಷೇತ್ರಜ್ಞನೆಂದೆನ್ನುವರು. ೨

ಎಲ್ಲ ಕ್ಷೇತ್ರಗಳಲ್ಲಿಯೂ ಕ್ಷೇತ್ರಜ್ಞನು ನಾನೇ ಎಂದು ತಿಳಿ. ಕ್ಷೇತ್ರ ಕ್ಷೇತ್ರಜ್ಞರ ಜ್ಞಾನವೇ ನನ್ನ ಜ್ಞಾನವೆಂದೆಣಿಸಲ್ಪಡುವದು. ೩

ಆ ಕ್ಷೇತ್ರವು ಯಾವದು, ಯಾವ ಪ್ರಕಾರದ್ದು, ಅದರಲ್ಲಿ ಯಾವ ವಿಕಾರಗಳಾಗುವವು, ಯಾತರಿಂದ ಏನಾಗುವದು ಹಾಗೂ ಅವನು ಅಂದರೆ ಕ್ಷೇತ್ರಜ್ಞನು ಯಾವನು, ಅವನ ಪ್ರಭಾವವೆಷ್ಟು ಅದನ್ನು ಸಂಕ್ಷೇಪದಿಂದ ಹೇಳುವೆನು ಕೇಳು. ೪

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ |**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೫ ॥**
**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ |**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೬ ॥**
**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ ॥ ೭ ॥**
**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ |**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೮ ॥**
**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ |**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥ ೯ ॥**
**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು |**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೧೦ ॥**

ವಿವಿಧ ಛಂದಸ್ಸುಗಳ ಮುಖಾಂತರ ಬೇರೆ ಬೇರೆಯಾಗಿ ಬಹು ಪ್ರಕಾರದಿಂದ ಋಷಿಗಳಿಂದ ಹಾಗೂ ನಿಶ್ಚಯಾರ್ಥವುಳ್ಳ ಕಾರಣಗಳ ಸಹಿತವಾಗಿ ಬ್ರಹ್ಮಸೂತ್ರ ಪದಗಳಿಂದ ಈ ವಿಷಯುವು ನಿರೂಪಿಸಲ್ಪಟ್ಟಿರುವದು. ೫

ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಹತ್ತು ಸೂಕ್ಷ್ಮ ಇಂದ್ರಿಯುಗಳು, ಒಂದು ಮನಸ್ಸು, ಹಾಗೂ ಐದು ಇಂದ್ರಿಯು ವಿಷಯುಗಳು, ೬

ಇಚ್ಛೆ, ದ್ವೇಷ, ಸುಖದುಃಖ, ಸಂಘಾತ, ಚೇತನಾ, ಧೃತಿ, ಇವೆಲ್ಲ ಕೂಡಿ ಸವಿಕಾರ ಕ್ಷೇತ್ರವೆನಿಸುವದು. ೭

ಗರ್ವವಿಲ್ಲದಿರೋಣ, ಅಹಿಂಸೆ, ಕ್ಷಮೆ, ಸರಲತೆ, ಗುರುಸೇವೆ, ಪಾವಿತ್ರ್ಯ, ಸ್ಥಿರತೆ, ಆತ್ಮಸಂಯುಮ, ೮

ವಿಷಯುಗಳ ಬಗ್ಗೆ ವೈರಾಗ್ಯ, ಹಮ್ಮು ಇಲ್ಲದಿರೋಣ, ಜನ್ಮ ಮರಣ ಮುಪ್ಪು ವ್ಯಾಧಿ ದುಃಖ ಮುಂತಾದವುಗಳು ದೋಷಗಳೆಂಬ ಪ್ರತೀತಿ, ೯

ಅನಾಸಕ್ತಿ, ಪುತ್ರ ಕಲತ್ರ ಮನೆ ಮುಂತಾದವುಗಳಲ್ಲಿ ಸಂಗರಹಿತತ್ವ, ಇಷ್ಟ ಅನಿಷ್ಟ ಘಟನೆಗಳ ಬಗ್ಗೆ ಚಿತ್ತವನ್ನು ಸಮವಿಡೋಣ, ೧೦

ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೧ ॥
ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೨ ॥
ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೩ ॥
ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೪ ॥
ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೫ ॥

ಅನನ್ಯಯೋಗಯುಕ್ತವಾದ ಅಚಲವಾದ ನನ್ನ ಭಕ್ತಿ, ಏಕಾಂತದಲ್ಲಿ ವಾಸಿಸೋಣ, ಜನಸಮೂಹವು ಸೇರದಿರೋಣ, ೧೧

ಅಧ್ಯಾತ್ಮಜ್ಞಾನವು ನಿತ್ಯವೆಂಬ ಭಾವನೆ, ತತ್ವಜ್ಞಾನದ ಅಭ್ಯಾಸ ಇದಕ್ಕೆ ಜ್ಞಾನವೆನ್ನುವರು. ಇದರಿಂದ ಭಿನ್ನವಾದುದು ಅಜ್ಞಾನವು. ೧೨

ಇನ್ನು ಜ್ಞೇಯವು ಯಾವದೆಂಬದನ್ನು ಹೇಳುವೆನು. ಅದನ್ನರಿತು ಮನುಷ್ಯನು ಅಮೃತತ್ವವನ್ನು ಪಡೆಯುವನು. ಅದು ಅನಾದಿಯಾದ ಬ್ರಹ್ಮವು. ಅದಕ್ಕೆ ಸತ್ ಎಂದೂ ಅನ್ನಲಾರರು ಅಸತ್ ಎಂದೂ ಅನ್ನಲಾರರು. ೧೩

ಅದಕ್ಕೆ ಎಲ್ಲ ಬದಿಗೂ ಕೈಕಾಲುಗಳೂ ಕಣ್ಣು ತಲೆ ಮುಖಗಳೂ ಕಿವಿಗಳೂ ಇರುವವು. ಅದು ಲೋಕದಲ್ಲಿ ಎಲ್ಲವನ್ನೂ ವ್ಯಾಪಿಸಿ ಸ್ಥಿತವಿರುವದು. ೧೪

ಇದರಲ್ಲಿ ಎಲ್ಲ ಇಂದ್ರಿಯ ಗುಣಗಳ ಭಾಸವಾದರೂ ಇದ್ದು ಇದು ಎಲ್ಲ ಗುಣಗಳಿಂದ ರಹಿತವು. ಅದು ಅಸಕ್ತವಿದ್ದು ಎಲ್ಲರ ಆಧಾರವು. ಅದು ನಿರ್ಗುಣವಿದ್ದು ಗುಣಗಳನ್ನು ಭೋಗಿಸುವದು. ೧೫

ಬಹಿರಂತಶ್ಚ ಭೂತಾನಾಮುಚರಂ ಚರಮೇವ ಚ ।
ಸೂಕ್ಷ್ಮತ್ವಾತ ದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥೧೬॥
ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥೧೭॥
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಧಿಷ್ಠಿತಮ್ ॥೧೮॥
ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥೧೯॥
ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದಿ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೨೦ ॥

ಅದು ಭೂತಗಳ ಒಳಗೂ ಹೊರಗೂ ಇರುವದು. ಅದು ಅಚರವೂ ಚರವೂ ಇರುವದು. ಅತಿ ಸೂಕ್ಷ್ಮವಿರುವದರಿಂದ ಅದು ಅಜ್ಞೇಯವು. ಅದು ದೂರವಿದ್ದು ಸಮೀಪವೂ ಇರುವದು. ೧೬

ಅದು ಭಾಗರಹಿತವಿದ್ದರೂ ಭೂತಗಳಲ್ಲಿ ವಿಭಾಗಿಸಿದಂತೆ ಇರುವದು. ಅದು ಭೂತಗಳ ಆಧಾರವು. ಭೂತಗಳನ್ನು ಧ್ವಂಸಿಸುವ, ಉತ್ಪನ್ನ ಮಾಡುವ ಶಕ್ತಿಯೂ ಅದೇ ಎಂದು ತಿಳಿಯತಕ್ಕದ್ದು. ೧೭

ಎಲ್ಲ ಜ್ಯೋತಿಗಳಲ್ಲಿಯೂ ಹೆಚು ತೇಜೋಮಯವು. ಅದು ತಮಸ್ಸಿನಾಚೆಗಿರುವದು. ಅದೇ ಅರಿವು, ಅರಿಯತಕ್ಕದ್ದು, ಹಾಗೂ ಅರಿವಿನಿಂದ ತಿಳಿಯುವ ವಸ್ತುವು. ಅದು ಎಲ್ಲರ ಅಂತಃಕರಣದಲ್ಲಿರುವದು. ೧೮

ಈ ಪ್ರಕಾರವಾಗಿ ಕ್ಷೇತ್ರ ಹಾಗೂ ಜ್ಞಾನ ಮತ್ತು ಜ್ಞೇಯಗಳು ಸಂಕ್ಷೇಪದಿಂದ ಹೇಳಲ್ಪಟ್ಟವು. ನನ್ನ ಭಕ್ತನು ಈ ಜ್ಞಾನವನ್ನರಿತು ನನ್ನ ಸ್ವರೂಪವನ್ನು ಹೊಂದುವನು. ೧೯

ಪ್ರಕೃತಿ ಮತ್ತು ಪುರುಷ ಇವೆರಡೂ ಅನಾದಿ ಎಂದು ತಿಳಿ. ವಿಕಾರಗಳೂ ಗುಣಗಳೂ ಪ್ರಕೃತಿಯಿಂದ ಹುಟ್ಟಿರುವವೆಂದು ತಿಳಿ. ೨೦

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ |
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೧ ॥

ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ |
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೨ ॥

ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ |
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೩ ॥

ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ |
ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥೨೪॥

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ |
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೫॥

ಕಾರ್ಯ ಹಾಗೂ ಕರಣಗಳ ಅಂದರೆ ದೇಹಮತ್ತು ಇಂದ್ರಿಯಗಳ ಉದ್ಭವದ ಕಾರಣವು ಪ್ರಕೃತಿಯೆಂದೆನ್ನುವರು. ಸುಖದುಃಖಗಳ ಅನುಭವದ ಕಾರಣವು ಪುರುಷನಿರುವನೆಂದೆನ್ನುವರು. ೨೧

ಪುರುಷನು ಪ್ರಕೃತಿಯಲ್ಲಿದ್ದು ಪ್ರಕೃತಿಯಿಂದುದ್ಭವಿಸಿದ ಗುಣಗಳನ್ನು ಪಭೋಗಿಸುವನು. ಗುಣಗಳ ಸಂಯೋಗವೇ ಪುರುಷನಿಗೆ ಒಳ್ಳೇ ಅಥವಾ ಕೆಡಕು ಜನ್ಮಗಳ ಕಾರಣವು. ೨೨

ಹತ್ತರಿದ್ದು ನೋಡುವವನು ಅನುಮತಿಸುವವನು ಪೋಷಿಸುವವನು ಭೋಗಿಸುವವನು ಇವನೇ. ಅವನಿಗೆ ಮಹೇಶ್ವರನೆಂದು ಪರಮಾತ್ಮನೆಂದು ಈ ದೇಹದಲ್ಲಿರುವ ಶ್ರೇಷ್ಠ ಪುರುಷನೆಂದು ಅನ್ನುವರು. ೨೩

ಯಾವನು ಹೀಗೆ ಗುಣಗಳ ಸಹಿತ ಪುರುಷ ಪ್ರಕೃತಿಗಳನ್ನು ಅರಿಯುವನೋ ಅವನು ಯಾವ ಪ್ರಕಾರವಾಗಿ ವರ್ತಿಸುತ್ತಿದ್ದರೂ ಪುನರ್ಜನ್ಮವನ್ನು ಹೊಂದಲಾರನು. ೨೪

ಕೆಲವರು ಧ್ಯಾನದಿಂದ ಆತ್ಮನನ್ನು ಆತ್ಮನಲ್ಲಿಯೇ ನೋಡುವರು. ಕೆಲವರು ಸಾಂಖ್ಯಯೋಗದಿಂದ ಮತ್ತೆ ಕೆಲವರು ಕರ್ಮಯೋಗದಿಂದ ಆತ್ಮಜ್ಞಾನವನ್ನು ಮಾಡಿಕೊಳ್ಳುವರು. ೨೫

ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ |
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೬ ॥

ಯಾವತ್ಸಂಜಾಯತೇ ಕಿಂಚಿತ್ಸತ್ವಂ ಸ್ಥಾವರಜಂಗಮಂ |
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೭ ॥

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ |
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೮ ॥

ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಂ |
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಂ ॥ ೨೯ ॥

ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ |
ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೩೦ ॥

ಕೆಲವರು ಆದನ್ನರಿಯದೇ, ಮತ್ತೊಬ್ಬರು ಹೇಳಿದ್ದನ್ನು ಕೇಳಿಕೊಂಡು ಉಪಾಸಿಸುವರು. ಶ್ರುತಿಪರಾಯಣರಾದ ಅವರು ಸಹ ಮರಣವನ್ನು ದಾಟುವರು. ೨೬

ಯಾವದೇ ಸ್ಥಾವರ ಅಥವಾ ಜಂಗಮ ವಸ್ತುವು ಉತ್ಪನ್ನವಾದರೂ, ಹೇ ಪಾರ್ಥ, ಅದು ಕ್ಷೇತ್ರ ಕ್ಷೇತ್ರಜ್ಞಗಳ ಸಂಯೋಗದಿಂದಲೇ ಉತ್ಪನ್ನವಾಗುವದೆಂದು ತಿಳಿ. ೨೭

ಎಲ್ಲ ಭೂತಗಳಲ್ಲಿಯೂ ಸಮವಾಗಿ ಅಧಿಷ್ಠಿತನಿದ್ದ, ವಿನಾಶಿಯಾದ ಪದಾರ್ಥಗಳಲ್ಲಿ ಅವಿನಾಶಿಯಾದ ಪರಮೇಶ್ವರನನ್ನು ಯಾವನು ಅರಿತುಕೊಂಡನೋ ಅವನೇ ನಿಜವಾದ ಜ್ಞಾನಿಯು. ೨೮

ಎಲ್ಲ ಕಡೆಗೂ ಸಮನಾಗಿರುವ ಪರಮೇಶ್ವರನನ್ನು ಸರಿಯಾಗಿ ಸಾಕ್ಷಾತ್ಕರಿಸುವವನು ತನ್ನ ಆತ್ಮವನ್ನು ಘಾತಿಸದೇ ಪರಮ ಗತಿಯನ್ನು ಪಡೆಯುವನು. ೨೯

ಸರ್ವ ಪ್ರಕಾರದಿಂದ ಕರ್ಮಗಳು ಪ್ರಕೃತಿಯಿಂದಲೇ ಮಾಡಲ್ಪಡುತ್ತಿರುವವೆಂದೂ ಆತ್ಮನು ಅಕರ್ತನೆಂದೂ ಯಾವನು ಅರಿಯುವನೋ ಅವನೇ ಜ್ಞಾನಿಯು. ೩೦

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥
ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ |
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥
ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ |
ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ ೩೨ ॥
ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥
ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ |
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ ॥ ೩೪ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಕ್ಷೇತ್ರಕ್ಷೇತ್ರಜ್ಞವಿಭಾಗಯೋಗೋನಾಮ
ತ್ರಯೋದಶೋಽಧ್ಯಾಯ:

ಭೂತಗಳಲ್ಲಿಯ ಬೇರೆತನವು ಯಾವಾಗ ಒಂದಾಗಿ ತೋರುವದೋ ಆ ಒಂದರಿಂದಲೇ ಈ ವಿಸ್ತಾರವೆಂದು ಯಾವಾಗ ಪ್ರತೀತವಾಗುವದೋ ಆಗ್ಗೆ ಬ್ರಹ್ಮಪ್ರಾಪ್ತಿಯಾಗುವದು. ೩೦

ಅನಾದಿಯೂ ನಿರ್ಗುಣನೂ ಇರುವದರಿಂದ ಈ ಅವ್ಯಯ ಪರಮಾತ್ಮನು ಶರೀರದಲ್ಲಿದ್ದರೂ ಲಿಪ್ತನಾಗುವದಿಲ್ಲ. ೩೧

ಹೇಗೆ ಸರ್ವವ್ಯಾಪಿಯಾದ ಆಕಾಶವು ತನ್ನ ಸೂಕ್ಷ್ಮತನದ ಮೂಲಕ ಲಿಪ್ತವಾಗುವದಿಲ್ಲವೋ ಹಾಗೆಯೇ ದೇಹದಲ್ಲಿ ವ್ಯಾಪ್ತನಿದ್ದರೂ ಈ ಆತ್ಮನು ಕರ್ಮದಿಂದ ಲಿಪ್ತನಾಗುವದಿಲ್ಲ. ೩೨

ಹೇಗೆ ಒಬ್ಬನೇ ಸೂರ್ಯನು ಈ ಎಲ್ಲ ಲೋಕವನ್ನು ಬೆಳಗುವನೋ ಹಾಗೆಯೇ ಪಾರ್ಥ, ಕ್ಷೇತ್ರಜ್ಞನು ಈ ಇಡೀ ಕ್ಷೇತ್ರವನ್ನು ಬೆಳಗುವನು. ೩೩

ಜ್ಞಾನರೂಪ ಕಣ್ಣುಗಳಿಂದ ಯಾರು ಕ್ಷೇತ್ರ ಕ್ಷೇತ್ರಜ್ಞರಲ್ಲಿರುವ ಈ ಅಂತರವನ್ನೂ ಭೂತಪ್ರಕೃತಿಗಳಿಂದ ತಮ್ಮ ಮೋಕ್ಷವನ್ನೂ ತಿಳಿದುಕೊಳ್ಳುವರೋ ಅವರು ಪರಮ ಪದವನ್ನು ಪಡೆಯುವರು. ೩೪

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೩ನೆಯ ಅಧ್ಯಾಯವು ಸಮಾಪ್ತವು.

# ಹದಿನಾಲ್ಕನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ ।
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥೧॥
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥೨॥
ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥೩॥
ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥೪॥
ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥೫॥

ಶ್ರೀಕೃಷ್ಣನು ಅಂದದ್ದು— ಯಾವ ಜ್ಞಾನವನ್ನರಿತು ಎಲ್ಲ ಮುನಿಗಳು ಈ ಲೋಕದಲ್ಲಿ ಪರಮ ಸಿದ್ಧಿಯನ್ನು ಪಡೆದರೋ ಆ ಉತ್ತಮ ಪರಮ ಜ್ಞಾನವನ್ನು ನಿನಗೆ ಪುನಃ ಹೇಳುವೆನು. ೧

ಈ ಜ್ಞಾನವನ್ನಾಶ್ರಯಿಸಿ ನನ್ನ ಸಾಧರ್ಮ್ಯವನ್ನು ಪಡೆದವರು ಪುನಃ ಸೃಷ್ಟಿಯ ಸಮಯಕ್ಕೆ ಹುಟ್ಟುವದೂ ಇಲ್ಲ ಪ್ರಲಯದ ಸಮಯಕ್ಕೆ ವ್ಯಥೆ ಪಡುವದೂ ಇಲ್ಲ. ೨

ಅರ್ಜುನಾ, ಮಹದ್ಬ್ರಹ್ಮವು ಅಂದರೆ ಮೂಲ ಪ್ರಕೃತಿಯು ಜನನ ಸ್ಥಾನವು. ಅಲ್ಲಿ ನಾನು ಗರ್ಭವನ್ನಿರಿಸುವೆನು. ಅಲ್ಲಿಂದ ಎಲ್ಲ ಭೂತಗಳ ಉತ್ಪತ್ತಿಯಾಗುವದು. ೩

ಅರ್ಜುನಾ, ಎಲ್ಲ ಯೋನಿಗಳಲ್ಲಿಯೂ ಹುಟ್ಟುವ ಮೂರ್ತಿಗಳ ಜನ್ಮಸ್ಥಾನವು ಮಹದ್ಬ್ರಹ್ಮವೇ, ನಾನು ಅವುಗಳ ತಂದೆಯು. ೪

ಪ್ರಕೃತಿಯಲ್ಲಿ ಹುಟ್ಟುವ ಸತ್ವ ರಜ ತಮ ಎಂಬ ಗುಣಗಳು, ಹೇ ಅರ್ಜುನನೇ, ಅವ್ಯಯವಾದ ಆತ್ಮನನ್ನು ಈ ದೇಹದಲ್ಲಿ ಬಂಧಿಸುವವು. ೫

ತತ್ರ ಸತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಂ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥
ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ ॥ ೭ ॥
ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥
ಸತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥
ರಜಸ್ತಮಶ್ಚಾಭಿಭೂಯ ಸತ್ವಂ ಭವತಿ ಭಾರತ ।
ರಜಃ ಸತ್ವಂ ತಮಶ್ಚೈವ ತಮಃ ಸತ್ವಂ ರಜಸ್ತಥಾ ॥ ೧೦ ॥
ಸರ್ವದ್ವಾರೇಷು ದೇಹೇಸ್ಮಿನ್ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ವಮಿತ್ಯುತ ॥ ೧೧ ॥

ಅವುಗಳಲ್ಲಿ ಸತ್ವವು ನಿರ್ಮಲವಿರುವದರಿಂದ ಪ್ರಕಾಶವುಳ್ಳದ್ದೂ ನಿರ್ದೋಷವೂ ಇದ್ದು ಆತ್ಮನನ್ನು ಸುಖ ಹಾಗೂ ಜ್ಞಾನ ಇವುಗಳ ಸಂಗದಿಂದ ಬಂಧಿಸುವದು. ೬

ರಜವೆಂಬದು ಆಸಕ್ತಿಮಯವಿದ್ದು ಇದರಿಂದ ಆಶೆ ಆಸಕ್ತಿಗಳು ಉಂಟಾಗುತ್ತವೆಂದು ತಿಳಿ. ಇದು ಕರ್ಮಾಸಕ್ತಿಯನ್ನುಂಟುಮಾಡಿ ಆತ್ಮನನ್ನು ಬಂಧಿಸುವದು. ೭

ಅಜ್ಞಾನದಿಂದುತ್ಪನ್ನವಾಗುವ ತಮವು ಎಲ್ಲ ಆತ್ಮಗಳನ್ನು ಮೋಹದಿಂದ ಬಂಧಿಸುವದು. ಇದು ಆತ್ಮನನ್ನು ತಪ್ಪು, ಸೋಮಾರಿತನ, ನಿದ್ದೆಗಳಿಂದ ಬಂಧಿಸುವದು. ೮

ಸತ್ವವು ಸುಖದಲ್ಲಿಯೂ ರಜವು ಕರ್ಮದಲ್ಲಿಯೂ ತಮವು ಜ್ಞಾನವನ್ನು ಮರೆಮಾಡಿ ತಪ್ಪಿನಲ್ಲಿಯೂ ಆಸಕ್ತಿಯನ್ನುಂಟುಮಾಡುವದು. ೯

ರಜ ತಮಗಳನ್ನು ಗೆದ್ದು ಸತ್ವವೂ ರಜ ಸತ್ವಗಳನ್ನು ಗೆದ್ದು ತಮವೂ ತಮ ಸತ್ವಗಳನ್ನು ಗೆದ್ದು ರಜವೂ ಮೇಲಾಗಲೆತ್ನಿಸುವವು. ೧೦

ಈ ದೇಹದ ಎಲ್ಲ ಇಂದ್ರಿಯಗಳಲ್ಲಿ ಪ್ರಕಾಶವು ಅಂದರೆ ಜ್ಞಾನವು ಬೆಳಗಲಾರಂಭಿಸಿತೆಂದರೆ ಸತ್ವಗುಣವು ಹೆಚ್ಚಾಯಿತೆಂದು ತಿಳಿಯಬೇಕು. ೧೧

ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥
ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ |
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥
ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ |
ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥ ೧೪ ॥
ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ |
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥
ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಂ |
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ ॥ ೧೬ ॥
ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ |
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ ೧೭ ॥

ಅರ್ಜುನಾ, ರಜವು ಹೆಚ್ಚಾಯಿತೆಂದರೆ ಲೋಭವೂ ಕರ್ಮಪ್ರವೃತ್ತಿಯೂ ಕರ್ಮಾರಂಭವೂ ಅಶಾಂತಿಯೂ ಇಚ್ಛೆಯೂ ಉತ್ಪನ್ನವಾಗುವವು. ೧೨

ತಮದ ಹೆಚ್ಚಳವಾಯಿತೆಂದರೆ ಕತ್ತಲೆ, ಅಪ್ರವೃತ್ತಿ, ತಪ್ಪುವಿಕೆ, ಮೋಹ ಇವು ಉಂಟಾಗುವವು. ೧೩

ಸತ್ವದ ಹೆಚ್ಚಳವಾದಾಗ ಪ್ರಾಣಿಯು ಸತ್ತರೆ ಜ್ಞಾನಿಗಳ ನಿರ್ಮಲ ಲೋಕವು ಅದಕ್ಕೆ ಪ್ರಾಪ್ತವಾಗುವದು. ೧೪

ರಜೋತ್ಕರ್ಷವಾದಾಗ ಮಡಿದರೆ ಮನುಷ್ಯನಿಗೆ ಕರ್ಮಾಸಕ್ತರಲ್ಲಿ ಜನ್ಮವಾಗುವದು. ತಮದ ಹೆಚ್ಚಳವಾದಾಗ ಮರಣ ಬಂದರೆ ಮೂಢ ಯೋನಿಯಲ್ಲಿ ಜನ್ಮವಾಗುವದು. ೧೫

ಪುಣ್ಯಕರ್ಮದ ಫಲವು ಸಾತ್ವಿಕವೂ ಪವಿತ್ರವೂ, ರಾಜಸಕರ್ಮದ ಫಲವು ದುಃಖದಾಯಕವೂ, ತಾಮಸ ಕರ್ಮದ ಫಲವು ಅಜ್ಞಾನಮಯವೂ ಇರುವದು. ೧೬

ಸತ್ವದಿಂದ ಜ್ಞಾನವೂ ರಜದಿಂದ ಲೋಭವೂ ಮತ್ತು ತಮದಿಂದ ಪ್ರಮಾದ ಮೋಹಗಳಲ್ಲದೆ ಅಜ್ಞಾನವೂ ಉಂಟಾಗುತ್ತವೆ. ೧೭

ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮ ॥

ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥

ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥

ಅರ್ಜುನ ಉವಾಚ—

ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥ ೨೧ ॥

ಸಾತ್ವಿಕರು ಮೇಲಕ್ಕೆ ಹೋಗುವರು, ರಾಜಸರು ನಡುವೆ ಅಂದರೆ ಮಾನವ ಲೋಕದಲ್ಲಿ ನಿಲ್ಲುವರು, ಕನಿಷ್ಠಗುಣದವರು ಅಧೋಗತಿಗೆ ಹೋಗುವರು. ೧೮

ಯಾವಾಗ ಪುರುಷನು ಗುಣಗಳನ್ನುಳಿದು ಬೇರೆ ಕರ್ತನಾವನೂ ಇಲ್ಲವೆಂದು ತಿಳಿಯುವನೋ ಗುಣಗಳಾಚೆಗಿನ ಶ್ರೇಷ್ಠ ತತ್ವವನ್ನರಿಯುವನೋ ಆಗ ಅವನು ನನ್ನ ಸ್ವರೂಪವನ್ನು ಹೊಂದುವನು. ೧೯

ದೇಹದಿಂದುತ್ಪನ್ನವಾದ ಈ ಮೂರು ಗುಣಗಳಾಚೆಗೆ ಹೋಗಿ ಆತ್ಮನು ಜನ್ಮ ಮೃತ್ಯು ಮುಪ್ಪು ದುಃಖಗಳಿಂದ ಮುಕ್ತನಾಗಿ ಅಮೃತ ಪದವನ್ನು ಪಡೆಯುವನು. ೨೦

**ಅರ್ಜುನನು ಅಂದದ್ದು—** ಪ್ರಭುವೇ, ಯಾವ ಲಕ್ಷಣಗಳಿಂದ ಮನುಷ್ಯನು ಈ ತ್ರಿಗುಣಗಳನ್ನು ದಾಟಿದನೆಂದು ತಿಳಿಯಬೇಕು, ಅವನ ಆಚಾರವು ಹೇಗಿರುವದು, ಅವನು ತ್ರಿಗುಣಗಳನ್ನು ಹೇಗೆ ದಾಟುವನು? ೨೧

ಶ್ರೀಭಗವಾನುವಾಚ—

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ |**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**
**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ |**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥**
**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ |**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**
**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ |**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**
**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |**
**ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಕೃಷ್ಣನು ಅಂದದ್ದು— ಅರ್ಜುನಾ, ಪ್ರಕಾಶ ಪ್ರವೃತ್ತಿ ಮೋಹಗಳು ಅಂದರೆ ಸತ್ವ ರಜ ತಮಗಳು ಪ್ರಾಪ್ತವಾದರೆ ಯಾವನು ದ್ವೇಷಿಸುವದಿಲ್ಲವೋ ಪ್ರಾಪ್ತವಾಗದಿದ್ದರೆ ಯಾವನು ಅವುಗಳನ್ನು ಆಶಿಸುವದಿಲ್ಲವೋ, ೨೨

ಉದಾಸೀನನಂತಿದ್ದು ಗುಣಗಳಿಂದ ಯಾವನು ವಿಕಾರಹೊಂದುವದಿಲ್ಲವೋ ಗುಣಗಳೇ ಕಾರ್ಯಮಾಡುತ್ತಿರುವವೆಂದು ತಿಳಿದು ಯಾವನು ಚಂಚಲನಾಗದೆ ಸ್ಥಿರನಿರುವನೋ, ೨೩

ಯಾವನಿಗೆ ಸುಖದುಃಖಗಳೂ ಮಣ್ಣುಕಲ್ಲು ಚಿನ್ನಗಳೂ ಸಮಾನವೋ ಯಾವನು ತನ್ನಲ್ಲಿ ತಾನೇ ಸ್ಥಿರನೋ ಯಾವನಿಗೆ ಪ್ರಿಯ ಅಪ್ರಿಯಗಳೂ ನಿಂದೆ ಸ್ತುತಿಗಳೂ ಸಮಾನವಾದವುಗಳೋ ಯಾವನು ಧೀರನೋ, ೨೪

ಯಾವನಿಗೆ ಮಾನಾಪಮಾನಗಳೂ ಮಿತ್ರಪಕ್ಷ ಶತ್ರುಪಕ್ಷಗಳೆರಡೂ ಸರಿಯೋ ಯಾವನು ಎಲ್ಲ (ಅಹಂಕಾರಪೂರ್ವಕ) ಕರ್ಮಗಳನ್ನು ಬಿಟ್ಟಿರುವನೋ ಅವನು ಗುಣಾತೀತನೆನಿಸುವನು. ೨೫

ಯಾವನು ಅನನ್ಯಭಾವದಿಂದ ಭಕ್ತಿಯುಕ್ತನಾಗಿ ನನ್ನನ್ನು ಭಜಿಸುವನೋ ಅವನು ಈ ಗುಣಗಳನ್ನು ದಾಟಿ ಬ್ರಹ್ಮಪದವಿಯನ್ನು ಪಡೆಯಲು ಸಮರ್ಥನಾಗುವನು. ೨೬

ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಗುಣತ್ರಯವಿಭಾಗಯೋಗೋನಾಮ
ಚತುರ್ದಶೋಽಧ್ಯಾಯಃ

ನಾನೇ ಅಮೃತ ಹಾಗೂ ಅವ್ಯಯ ಬ್ರಹ್ಮನ ಆಶ್ರಯಸ್ಥಾನವು. ಶಾಶ್ವತ ಧರ್ಮದ ಹಾಗೂ ಪರಮಾನಂದದ ಆಶ್ರಯವಾದರೂ ನಾನೇ ಇರುವೆನು. ೨೭

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೪ ನೆಯ ಅಧ್ಯಾಯವು ಸಮಾಪ್ತವು.

# ಹದಿನೈದನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಂ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ ।
ಗುಣಪ್ರವೃದ್ಧಾ ವಿಷಯಪ್ರವಾಲಾಃ ॥
ಅಧಶ್ಚ ಮೂಲಾನ್ಯನುಸಂತತಾನಿ ।
ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥

ನ ರೂಪಮಸ್ಯೇಹ ತಥೋಪಲಭ್ಯತೇ ।
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ॥
ಅಶ್ವತ್ಥಮೇನಂ ಸುವಿರೂಢಮೂಲ ।
ಮಸಂಗಶಸ್ತ್ರೇಣ ದೃಢೇನ ಛಿತ್ವಾ ॥ ೩ ॥

ಕೃಷ್ಣನು ಅಂದದ್ದು— ಅವಿನಾಶಿಯಾಗಿ ಅಶ್ವತ್ಥದಂತಿರುವ ಈ ಪ್ರಪಂಚವೃಕ್ಷದ ಬೇರುಗಳು ಮೇಲೆ ಮತ್ತು ಟೊಂಗೆಗಳು ಕೆಳಗೆ ಇರುವವೆಂದು ವರ್ಣಿಸುವರು. ವೇದಗಳೇ ಅದರ ಎಲೆಗಳೆಂದು ಹೇಳುವರು. ಇದನ್ನರಿತವನೇ ವೇದಜ್ಞನೆನ್ನಬಹುದು. ೧

ತ್ರಿಗುಣಗಳಿಂದ ಪೋಷಿಸಲ್ಪಟ್ಟು ಅದರ ಶಾಖೆಗಳು ವಿಷಯಗಳಿಂದ ಯುಕ್ತವಾಗಿ ಮೇಲೆ ಕೆಳಗೆ ಎಲ್ಲ ಕಡೆಗೂ ಹಬ್ಬಿರುವವು. ಕರ್ಮಮಯವಾದ ಅದರ ಬೇರುಗಳು ಮನುಷ್ಯಲೋಕದ ವರೆಗೆ ಕೆಳಗಾದರೂ ಬಂದಿರುವವು. ೨

ಆದರೆ ಇಹಲೋಕದಲ್ಲಿ ಅದರ ರೂಪವೂ ಅದಕ್ಕೆ ಇರುವ ಆದಿ ಅಂತ ಆಧಾರಗಳೂ ತೋರುವದಿಲ್ಲ. ಚನ್ನಾಗಿ ಬೇರು ಬಿಟ್ಟ ಈ ಅಶ್ವತ್ಥವನ್ನು ಅನಾಸಕ್ತಿಯೆಂಬ ಖಡ್ಗದಿಂದ ಕಡಿದು, ೩

ತತಃ ಪದಂ ತತ್ಪರಿಮಾರ್ಗಿತವ್ಯಂ ।
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ॥
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ।
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥
ನಿರ್ಮಾನಮೋಹಾ ಜಿತಸಂಗದೋಷಾ ।
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ॥
ದ್ವಂದ್ವೈರ್ವಿಮುಕ್ತಾಃ ಸುಖದುಃಖ ಸಂಜ್ಞೈ ।
ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥೫॥
ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥
ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।
ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥

ಯಾವನಿಂದ ಮೊದಲು ಸೃಷ್ಟಿಯು ಉದ್ಭವಿಸಿತೋ ಆ ಪುರುಷನನ್ನೇ ಆಶ್ರಯಿಸುವೆನೆಂಬ ಭಾವನೆಯಿಂದ, ಯಾವ ಅಕ್ಷಯ ಪದವನ್ನು ಪಡೆಯಲಾಗಿ ಪುನರ್ಜನ್ಮವಿಲ್ಲವೋ ಆ ಪದವನ್ನೇ ಹುಡುಕಬೇಕು. ೪

ಗರ್ವ ಮೋಹಗಳನ್ನಳಿದವರು, ಆಸಕ್ತಿಯನ್ನು ಗೆದ್ದವರು, ಅಧ್ಯಾತ್ಮ ಜ್ಞಾನವೇ ನಿತ್ಯವೆಂಬ ಭಾವನೆಯುಳ್ಳವರು, ಕಾಮನೆಗಳಿಂದ ನಿವೃತ್ತರಾದವರು, ಸುಖದುಃಖಾದಿ ದ್ವಂದ್ವಗಳಾಚೆಗೆ ಹೋದವರು, ಆ ಜ್ಞಾನಿಗಳು, ಅವ್ಯಯಪದವನ್ನು ಪಡೆಯುವರು. ೫

ಎಲ್ಲಿ ಸೂರ್ಯ ಚಂದ್ರ ಅಗ್ನಿ ಇವರಾರೂ ಬೆಳಗುವದಿಲ್ಲವೋ ಯಾವ ಪದವನ್ನು ಪಡೆಯಲಾಗಿ ಜನರು ತಿರುಗಿ ಬರುವದಿಲ್ಲವೋ ಅದೇ ನನ್ನ ಶ್ರೇಷ್ಠ ಸ್ಥಾನವು. ೬

ನನ್ನ ಸನಾತನ ಅಂಶವೇ ಜೀವಲೋಕದಲ್ಲಿ ಜೀವನಾಗಿ ಪ್ರಕೃತಿಯಲ್ಲಿಯ ಮನದೊಡನೆ ಆರು ಇಂದ್ರಿಯಗಳನ್ನು ಆಕರ್ಷಿಸುವದು. ೭

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥೮॥**
**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**
**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥೧೦॥**
**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥೧೧॥**
**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥೧೨॥**

ಸುಮನಗಳ ಸಮೂಹದಿಂದ ಸುಳಿಗಾಳಿಯು ಸುಗಂಧವನ್ನು ಸೆಳೆದೊಯ್ಯುವಂತೆ ಈ ಈಶ್ವರಾಂಶನಾದ ಜೀವನು ಶರೀರ ಧಾರಣಮಾಡುವಾಗಲೂ ಶರೀರವನ್ನು ಬಿಟ್ಟು ಹೋಗುವಾಗಲೂ ಇವುಗಳನ್ನು ಅಂದರೆ ಮನಾದಿ ಇಂದ್ರಿಯುಗಳನ್ನು ತನ್ನ ಸಂಗಡ ಸೆಳೆದೊಯ್ಯುವನು. ೮

ಕಿವಿ ಕಣ್ಣು ತ್ವಕ್ಕು ನಾಲಿಗೆ ನಾಸಿಕ ಹಾಗೂ ಮನಸ್ಸು ಇವುಗಳಲ್ಲಿ ಅಧಿಷ್ಟಿತನಾಗಿ ಇವನು ವಿಷಯುಗಳನ್ನು ಸೇವಿಸುವನು. ೯

ದೇಹಬಿಟ್ಟು ಹೋಗುತ್ತಿರುವಾಗ ದೇಹದಲ್ಲಿ ಸ್ಥಿರನಿದ್ದಾಗ ಅಥವಾ ಗುಣಯುಕ್ತನಾಗಿ ವಿಷಯುಗಳನ್ನು ಉಪಭೋಗಿಸುತ್ತಿರುವಾಗ ಮೂಢರು ಇವನನ್ನರಿಯುವದಿಲ್ಲ. ಆದರೆ ಜ್ಞಾನಿಗಳು ಇವನನ್ನು ಅರಿಯುವರು. ೧೦

ಇದೇ ಮಾರ್ಗದಿಂದ ಯತ್ನಿಸುತ್ತಿರಲಾಗಿ ಯೋಗಿಗಳು ಈ ಆತ್ಮನಲ್ಲಿರುವವನನ್ನು ಕಾಣುವರು. ಆದರೆ ಮನಃಸಂಯಮವಿಲ್ಲದ ಬುದ್ಧಿಗೇಡಿಗಳು ಯತ್ನಿಸಿದರೂ ಆವನನ್ನು ಕಾಣರು. ೧೧

ಅಖಿಲ ಜಗವನ್ನು ಬೆಳಗುವ ಸೂರ್ಯನಲ್ಲಿದ್ದ ತೇಜವೂ ಚಂದ್ರ ಅಗ್ನಿಗಳಲ್ಲಿದ್ದ ತೇಜವೂ ನನ್ನದೇ ಎಂದು ತಿಳಿ. ೧೨

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ |**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ||೧೩||**
**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ||೧೪||**

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ |**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ||**
**ವೇದೈಶ್ಚ ಸರ್ವೈರಹಮೇವ ವೇದ್ಯೋ |**
**ವೇದಾಂತಕೃದ್ವೇದವಿದೇವ ಚಾಹಂ ||೧೫||**

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ |**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ||೧೬||**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ||೧೭||**

ಪ್ರಥಿವಿಯಲ್ಲಿ ಪ್ರವೇಶಮಾಡಿ ನಾನು ನನ್ನ ತೇಜದಿಂದ ಭೂತಗಳಿಗೆ ಆಧಾರನಾಗುವೆನು. ರಸಪೂರ್ಣ ಚಂದ್ರನಾಗಿ ಎಲ್ಲ ವನಸ್ಪತಿಗಳನ್ನು ನಾನೇ ಪೋಷಿಸುವೆನು. ೧೩

ನಾನು ವೈಶ್ವಾನರ ಅಗ್ನಿಯಾಗಿ ಪ್ರಾಣಿಗಳ ದೇಹದಲ್ಲಿದ್ದು ಪ್ರಾಣ ಅಪಾನವಾಯುಗಳನ್ನೊಡಗೂಡಿ ನಾಲ್ಕು ಬಗೆಯ ಅನ್ನವನ್ನು ಪಚನ ಮಾಡುವೆನು. ೧೪

ಎಲ್ಲರ ಅಂತಃಕರಣದಲ್ಲಿ ನಾನು ಇರುವೆನು. ಸ್ಮೃತಿ, ಜ್ಞಾನ, ವಿಸ್ಮರಣಗಳು ನನ್ನಿಂದಲೇ ಉಂಟಾಗುವವು. ಸರ್ವ ವೇದಗಳ ಜ್ಞೇಯ ತತ್ವವು ನಾನೇ. ವೇದಾಂತಕಾರನೂ ನಾನೇ ವೇದಜ್ಞನೂ ನಾನೇ. ೧೫

ಈ ಲೋಕದಲ್ಲಿ ಕ್ಷರ ಹಾಗೂ ಅಕ್ಷರ ಎಂಬ ಪುರುಷರು ಇರುವರು. ಕ್ಷರನೆಂದರೆ ಎಲ್ಲ ಭೂತಗಳು. ಅಕ್ಷರವೆಂದರೆ ಎಲ್ಲದರ ಮೂಲಕ್ಕೆ ಇರುವ ತತ್ವವು. ೧೬

ಆದರೆ ಉತ್ತಮ ಪುರುಷನು ಇವುಗಳಿಗೂ ಬೇರೆ. ಅವನಿಗೆ ಪರಮಾತ್ಮನೆನ್ನುವರು. ಅವನು ಅವ್ಯಯನು, ಈಶ್ವರನು. ಲೋಕಗಳನ್ನು ವ್ಯಾಪಿಸಿ ಅವುಗಳನ್ನು ಅವನು ಪೋಷಿಸುವನು. ೧೭

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೮॥**
**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**
**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥ ೨೦ ॥**

ಇತಿ ಶ್ರೀಮದ್ಭಗವದ್ಗೀತಾಯಾಂ ಪುರುಷೋತ್ತಮಯೋಗೋನಾಮ
ಪಂಚದಶೋಽಧ್ಯಾಯಃ

ಕ್ಷರದ ಆಚೆಗೂ ಅಕ್ಷರಕ್ಕಿಂತ ಉತ್ತಮನೂ ಇರುವದರಿಂದ ಲೋಕದಲ್ಲಿ ಹಾಗೂ ವೇದಗಳಲ್ಲಿ ಅವನು ಪುರುಷೋತ್ತಮನೆಂದು ಪ್ರಸಿದ್ಧನು. ೧೮

ಯಾವ ಜ್ಞಾನಿಯು ಪುರುಷೋತ್ತಮನಾದ ನನ್ನನ್ನರಿಯುವನೋ ಅವನು ಸರ್ವಜ್ಞನಾಗಿ ನನ್ನನ್ನು ಸಮಗ್ರಭಾವದಿಂದ ಭಜಿಸುವನು. ೧೯

ಅರ್ಜುನನೇ, ಹೀಗೆ ಅತ್ಯಂತ ಗೂಢವಾದ ಈ ಶಾಸ್ತ್ರವನ್ನು ನಿನಗೆ ಹೇಳುವೆನು. ಇದನ್ನರಿತು ಬುದ್ಧಿವಂತನು ಕೃತಕೃತ್ಯನಾಗುವನು. ೨೦

ಇತಿ ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೫ ನೆಯ ಅಧ್ಯಾಯವು ಸಮಾಪ್ತವು.

# ಹದಿನಾರನೆಯ ಅಧ್ಯಾಯವು.

---

ಶ್ರೀಭಗವಾನುವಾಚ—

ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮುಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥ ೧ ॥

ಅಹಿಂಸಾ ಸತ್ಯಮುಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ॥ ೨ ॥

ತೇಜಃ ಕ್ಷಮಾ ಧೃತಿಃ ಶೌಚಮುದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀಮುಭಿಜಾತಸ್ಯ ಭಾರತ ॥ ೩ ॥

ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ ॥ ೪ ॥

ಕೃಷ್ಣನು ಅಂದದ್ದು— ಅಭಯ, ಶುದ್ಧವೃತ್ತಿ, ಜ್ಞಾನ, ಹಾಗೂ ಕರ್ಮಯೋಗಮಾರ್ಗಗಳ ಯೋಗ್ಯ ವ್ಯವಸ್ಥೆ, ದಾನ, ಇಂದ್ರಿಯದಮನ, ಯಜ್ಞ, ವೇದಾಧ್ಯಯನ, ತಪ, ಸರಲತೆ, ೧

ಅಹಿಂಸೆ, ಸತ್ಯ, ಅಸ್ತೇಯ, ಸಿಟ್ಟು ಬಾರದಿರೋಣ, ತ್ಯಾಗ, ಶಾಂತಿ, ಉದಾರಬುದ್ಧಿ, ಭೂತದಯೆ, ಅನಾಸಕ್ತಿ, ಮೃದುತ್ವ, ಲಜ್ಜೆ, ಸ್ಥಿರತೆ, ೨

ತೇಜ, ಕ್ಷಮೆ, ಧೈರ್ಯ, ಪಾವಿತ್ರ್ಯ, ದ್ರೋಹಮಾಡದಿರೋಣ, ಗರ್ವವಿಲ್ಲದಿರೋಣ, ಹೇ ಅರ್ಜುನಾ, ಇವು ದೈವೀ ಸಂಪತ್ತಿಯುಕ್ತನಾಗಿ ಹುಟ್ಟಿದವನ ಗುಣಗಳು. ೩

ಪಾರ್ಥಾ ದಂಭ, ಗರ್ವ, ಅಭಿಮಾನ, ಕಠೋರತೆ, ಸಿಟ್ಟು, ಅಜ್ಞಾನ, ಇವು ಆಸುರೀ ಸಂಪತ್ತಿಯಿಂದ ಯುಕ್ತನಾಗಿ ಹುಟ್ಟಿದವನ ಗುಣಗಳು. ೪

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥

ದ್ವೌ ಭೂತಸರ್ಗೌ ಲೋಕೇಽಸ್ಮಿನ್ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥

ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥ ೮ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥

ದೈವೀ ಸಂಪತ್ತು ಮೋಕ್ಷದಾಯಿಯು, ಆಸುರೀ ಸಂಪತ್ತು ಬಂಧನ ಕಾರಿಯು. ಪಾರ್ಥ, ನೀನು ಶೋಕ ಮಾಡಬೇಡ. ನೀನು ದೈವೀ ಸಂಪತ್ತಿನಿಂದ ಯುಕ್ತನಾಗಿ ಹುಟ್ಟಿರುವಿ. ೫

ಈ ಲೋಕದಲ್ಲಿ ದೈವೀ ಮತ್ತು ಆಸುರೀ ಎಂಬ ಎರಡು ಬಗೆಯ ಪ್ರಾಣಿಗಳು ಹುಟ್ಟುವವು. ದೈವೀ ಸಂಪತ್ತಿನ ವರ್ಣನೆಯು ವಿಸ್ತಾರ ದಿಂದಾಯಿತು. ಇನ್ನು ಆಸುರೀ ಸಂಪತ್ತಿನ ವರ್ಣನೆಯನ್ನು ಕೇಳು. ೬

ಒಳಿತು ಮತ್ತು ಕೆಡಕು ಪ್ರವೃತ್ತಿನಿವೃತ್ತಿಗಳು ಆಸುರ ಜನರಿಗೆ ತಿಳಿ ಯುವದಿಲ್ಲ; ಅವರಲ್ಲಿ ಪಾವಿತ್ರ್ಯ, ಒಳ್ಳೇ ಆಚಾರ, ಸತ್ಯ ಈ ಗುಣಗಳಿರುವ ದಿಲ್ಲ. ೭

ಈ ಜಗವು ಅಸತ್ಯವೂ, ಆಶ್ರಯರಹಿತವೂ, ಪರಸ್ಪರ ಸಂಬಂಧ ವಿಲ್ಲದೇ ಹುಟ್ಟಿದ್ದೂ ಇರುವದು; ಕಾಮಪೂರ್ತಿಯ ಹೊರ್ತು ಈ ಸೃಷ್ಟಿಯ ಹೇತುವು ಮತ್ತೇನಿರಬಹುದು ಎಂದು ಅವರು ಕೇಳುವರು. ೮

ಈ ತರದ ಮತಗಳುಳ್ಳವರಾದ ಅಲ್ಪಬುದ್ಧಿಯ ಈ ನಷ್ಟಾತ್ಮರು ಹಾಗೂ ಕ್ರೂರಕರ್ಮ ಮಾಡುವ ದುಷ್ಟರು ಈ ಲೋಕದ ನಾಶಾರ್ಥ ವಾಗಿ ಹುಟ್ಟುವರು. ೯

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ |
ಮೋಹಾದ್ಗೃಹೀತ್ವಾಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ ॥೧೦॥
ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ |
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ॥ ॥ ೧೧ ॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ |
ಈಹಂತೇಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್
॥ ೧೨ ॥
ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ |
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ ॥ ೧೩ ॥
ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ |
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ॥೧೪॥

ಎಂದೂ ತೃಪ್ತವಾಗದ ಕಾಮವನ್ನಾಶ್ರಯಿಸಿ ದಂಭ, ಗರ್ವ, ಮದಗಳಿಂದ ತುಂಬಿ ಮೋಹದಿಂದ ತಪ್ಪುಗ್ರಹಿಕೆಗಳನ್ನು ಮಾಡಿಕೊಂಡು ಅಪವಿತ್ರ ಕಾರ್ಯಗಳಲ್ಲಿ ಇವರು ತೊಡಗುತ್ತಾರೆ. ೧೦

ಇವರು ಕೊನೆಯ ವರೆಗೆ ಅಪಾರ ಚಿಂತೆಯಲ್ಲಿ ಮುಳುಗಿರುತ್ತಾರೆ. ಈ ಕಾಮೋಪಭೋಗಗಳೇ ಎಲ್ಲಕ್ಕೂ ಹೆಚ್ಚಿನವೆಂದು ಅವರ ಮನವರಿಕೆ ಇರುವದು. ೧೧

ನೂರಾರು ಆಶಾಪಾಶಗಳಿಂದ ಬದ್ಧರಾದ, ಕಾಮ-ಕ್ರೋಧಗಳಿಂದ ಯುಕ್ತರಾದ ಇವರು, ಕಾಮಭೋಗಗಳ ಸಲುವಾಗಿ ಅನ್ಯಾಯದಿಂದ ಧನವನ್ನು ಸಂಚಯಿಸಲಿಚ್ಛಿಸುವರು. ೧೨

ಇದು ನನಗೆ ಈ ದಿನ ದೊರೆಯಿತು, ಈ ಮನೋರಥವು ಮುಂದೆ ಪೂರ್ಣವಾಗುವದು, ನನ್ನ ಬಳಿಗೆ ಇಷ್ಟು ಧನವಿರುವದು, ಆಕೋ ಆ ಧನವಾದರೂ ನನಗೆ ದೊರೆಯುವದು, ೧೩

ಆ ಶತ್ರುವು ನನ್ನಿಂದ ಹತನಾದನು; ಮಿಕ್ಕವರನ್ನಾದರೂ ಕೊಲ್ಲುವೆನು; ನಾನು ಈಶ್ವರನು, ಭೋಗಿಯು, ಸಿದ್ಧನು, ನಾನು ಬಲವಂತನು, ಸುಖಿಯು, ೧೪

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ |
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥

ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ |
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥

ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ |
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ॥ ೧೭ ॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥

ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ |
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥

ನಾನು ಸಿರಿವಂತನು, ಕುಲವಂತನು, ನನ್ನಂತೆ ಮತ್ತಾರಿರುವರು, ನಾನು ಯಜ್ಞ ಮಾಡುವೆನು, ದಾನ ಕೊಡುವೆನು, ಆನಂದಿಸುವೆನು ಎಂದು ಅಜ್ಞಾನದಿಂದ ಅವರು ಮೋಹಿತರಾಗಿರುವರು. ೧೫

ಚಿತ್ತಚಾಂಚಲ್ಯದಿಂದ ಭ್ರಮಿಷ್ಟರಾದ, ಮೋಹದಲ್ಲಿ ತೊಡಗಿದ, ಕಾಮಭೋಗಗಳಲ್ಲಿ ಅತ್ಯಂತ ಆಸಕ್ತರಾದ ಇವರು ಅಪವಿತ್ರವಾದ ನರಕದಲ್ಲಿ ಬೀಳುವರು. ೧೬

ಆತ್ಮಪ್ರಶಂಸೆ ಮಾಡುವ, ಧನ-ಮಾನ-ಮದಗಳಿಂದ ಯುಕ್ತರಾದ, ಸೆಟೆದು ನಡೆಯುವ, ಈ ಅಸುರರು ದಂಭದಿಂದ ಕೇವಲ ಹೆಸರಿಗೆ ಮಾತ್ರ ವಿಧಿವಿರುದ್ಧವಾಗಿ ಯಜ್ಞಗಳನ್ನು ಮಾಡುವರು. ೧೭

ಅಹಂಕಾರ, ಬಲ, ಗರ್ವ, ಕಾಮ, ಕ್ರೋಧ ಇವುಗಳನ್ನಾಶ್ರಯಿಸುವ ಈ ನಿಂದಕರು ತಮ್ಮ ಹಾಗೂ ಪರರ ದೇಹಗಳಲ್ಲಿರುವ ನನ್ನನ್ನು ದ್ವೇಷಿಸುವರು. ೧೮

ನನ್ನನ್ನು ದ್ವೇಷಿಸುವ ಈ ಅಮಂಗಲ ಕ್ರೂರ ನರಾಧಮರನ್ನು ನಾನು ಪುನಃ ಈ ಸಂಸಾರದಲ್ಲಿಯ ಆಸುರೀ ಯೋನಿಗಳಲ್ಲಿ ಹುಟ್ಟಿಸುವೆನು. ೧೯

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ |**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ॥೨೦॥**
**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ |**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥**
**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ |**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಂ ॥ ೨೨ ॥**
**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |**
**ನ ಸ ಸಿಧ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥ ೨೩ ॥**
**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ |**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

ಇತಿ ಶ್ರೀಮದ್ಭಗವದ್ಗೀತಾಯಾಂ ದೈವಾಸುರಸಂಪದ್ವಿಭಾಗಯೋಗೋ ನಾಮ
ಷೋಡಶೋಽಧ್ಯಾಯಃ

ಆಸುರೀ ಯೋನಿಯಲ್ಲಿ ಹುಟ್ಟಿದ ಈ ಮೂಢರು ಜನ್ಮಜನ್ಮಾಂತರಗಳಲ್ಲಿಯೂ ನನ್ನನ್ನು ಕಾಣದೇ ಅಲ್ಲಿಂದ ಅಧಮಗತಿಗೆ ಹೋಗುವರು. ೨೦

ಕಾಮ, ಕ್ರೋಧ, ಲೋಭ ಇವು ನರಕದ ಮೂರು ಬಾಗಿಲುಗಳು; ಅವು ಆತ್ಮಘಾತಕವಿರುವವು. ಆದುದರಿಂದ ಆ ಮೂರನ್ನು ಬಿಟ್ಟು ಬಿಡಬೇಕು. ೨೧

ಅರ್ಜುನಾ, ತಮೋಲೋಕಕ್ಕೆ ಒಯ್ಯುವ ಈ ಮೂರರಿಂದ ಮುಕ್ತನಾಗಿ ಮನುಷ್ಯನು ತನಗೆ ಕಲ್ಯಾಣಕಾರಿಯಾದುದನ್ನೇ ಆಚರಿಸಿದರೆ ಪರಮಗತಿಯನ್ನು ಸಂಪಾದಿಸುವನು. ೨೨

ಯಾವನು ಶಾಸ್ತ್ರವಿಧಿಯನ್ನು ಬಿಟ್ಟು ಕಾಮಮೂಲಕ ವರ್ತಿಸುವನೋ ಅವನಿಗೆ ಸಿದ್ಧಿಯೂ ಆಗದು, ಸುಖವೂ ದೊರಕದು, ಪರಮಗತಿಯೂ ಪ್ರಾಪ್ತವಾಗದು. ೨೩

ಆದುದರಿಂದ ಅರ್ಜುನಾ, ಕಾರ್ಯ ಅಕಾರ್ಯಗಳನ್ನು ನಿಶ್ಚಯಿಸುವದರಲ್ಲಿ ಶಾಸ್ತ್ರವೇ ಪ್ರಮಾಣವು. ಶಾಸ್ತ್ರವನ್ನರಿತುಕೊಂಡು ನೀನು ವಿಧಿವಿಹಿತ ಕರ್ಮಗಳನ್ನು ಮಾಡುವದೇ ಯೋಗ್ಯವು. ೨೪

**ಇತಿ ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ**
**೧೬ ನೆಯ ಅಧ್ಯಾಯವು ಸಮಾಪ್ತವು.**

# ಹದಿನೇಳನೆಯ ಅಧ್ಯಾಯವು.

---

ಅರ್ಜುನ ಉವಾಚ—

ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ |
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ವಮಾಹೋ ರಜಸ್ತಮಃ ॥ ೧ ॥

ಶ್ರೀಭಗವಾನುವಾಚ—

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ |
ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥

ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ |
ಶ್ರದ್ಧಾಮಯೋಽಯಂ ಪುರುಷೋಯೋ,ಯಚ್ಛ್ರದ್ಧಃ ಸ ಏವ ಸಃ॥೩॥

ಯಜಂತೇ ಸಾತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ |
ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥

**ಅರ್ಜುನನು ಅಂದದ್ದು**— ಕೃಷ್ಣಾ, ಅಜ್ಞಾನಮೂಲಕ ಶಾಸ್ತ್ರವಿಧಿಯುಕ್ತ ಮಾಡದಿದ್ದರೂ ಶ್ರದ್ಧೆಯಿಂದ ಯಾರು ಯಜ್ಞಗಳನ್ನು ಮಾಡುವರೋ ಅವರ ನಿಷ್ಠೆಯು ಸಾತ್ವಿಕವೋ ರಾಜಸವೋ ತಾಮಸವೋ? ೧

**ಕೃಷ್ಣನು ಅಂದದ್ದು**—ಪ್ರಾಣಿಗಳಲ್ಲಿ ಸ್ವಾಭಾವಿಕವಾದ ಶ್ರದ್ಧೆಯು ಸಾತ್ವಿಕ, ರಾಜಸಿಕ, ತಾಮಸಿಕ ಎಂದು ಮೂರು ವಿಧವು. ಅದು ಹೇಗೆಂಬುದನ್ನು ಕೇಳು. ೨

ಅರ್ಜುನನೇ, ಎಲ್ಲರ ಶ್ರದ್ಧೆಯು ಅವರವರ ಸ್ವಭಾವದಂತೆ ಇರುವದು. ಮನುಷ್ಯನು ಶ್ರದ್ಧಾಮಯನು. ಯಾವನ ಶ್ರದ್ಧೆಯು ಹೇಗೋ ಹಾಗೆಯೇ ಅವನು ಇರುವನು. ೩

ಸಾತ್ವಿಕರು ದೇವತೆಗಳನ್ನೂ, ರಾಜಸರು ಯಕ್ಷರಾಕ್ಷಸರನ್ನೂ, ತಾಮಸರು ಭೂತಪ್ರೇತಗಳನ್ನೂ ಪೂಜಿಸುವರು. ೪

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥

ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬ ॥

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥

ಆಯುಃಸತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ॥ ೮ ॥

ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥

ದಂಭ ಮತ್ತು ಅಹಂಕಾರಗಳಿಂದ ಯುಕ್ತರಾಗಿ ಕಾಮನೆ ಹಾಗೂ ಆಸಕ್ತಿಗಳ ಬಲದಿಂದ ಶಾಸ್ತ್ರವಿರುದ್ಧವಾದ ಘೋರ ತಪವನ್ನಾಚರಿಸುವ ೫

ಹಾಗೂ ಶರೀರದಲ್ಲಿಯ ಪಂಚಮಹಾಭೂತಗಳ ಸಂಘವನ್ನಲ್ಲದೆ ಶರೀರಾಂತರದಲ್ಲಿರುವ ನನ್ನನ್ನು ಸಹ ವ್ಯಥೆ ಪಡಿಸುವ ಅವಿವೇಕಿಗಳು ಅಸುರರೆಂದು ತಿಳಿ. ೬

ಬೇರೆ ಬೇರೆ ಜನರಿಗೆ ಪ್ರಿಯವಿದ್ದ ಆಹಾರವಾದರೂ ಮೂರು ಪ್ರಕಾರದ್ದಿರುವದು. ಯಜ್ಞ-ದಾನ-ತಪಗಳಲ್ಲಾದರೂ ಹೀಗೆ ಮೂರು ಪ್ರಕಾರಗಳಿರುವವು. ಈ ಭೇದಗಳನ್ನು ಕೇಳು. ೭

ಆಯುಷ್ಯ, ಸತ್ವ, ಬಲ, ಆರೋಗ್ಯ, ಸುಖ, ಪ್ರೀತಿ ಇವುಗಳನ್ನು ಹೆಚ್ಚಿಸುವ ರಸಯುಕ್ತ, ಸ್ನೇಹಯುಕ್ತ, ಶರೀರದಲ್ಲಿ ಸ್ಥಿರವಿದ್ದು ಸಂತೋಷವನ್ನುಂಟು ಮಾಡುವ ಆಹಾರವು ಸಾತ್ವಿಕರಿಗೆ ಪ್ರಿಯವಾದುದು. ೮

ದುಃಖ, ಶೋಕ, ರೋಗಗಳನ್ನು ಹುಟ್ಟಿಸುವ, ಕಾರ, ಹುಳಿ, ಉಪ್ಪು, ಅತಿ ಊಷ್ಣ, ರುಕ್ಷ, ಹೊಟ್ಟೆಯಲ್ಲಿ ಬೆಂಕಿ ಬೀಳುವಂತಹ ಆಹಾರಗಳು ರಾಜಸರಿಗೆ ಇಷ್ಟವಾದವುಗಳು. ೯

ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ |
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥ ೧೦ ॥

ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ |
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ವಿಕಃ ॥ ೧೧॥

ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ |
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥ ೧೨ ॥

ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ |
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥

ದೇವದ್ವಿಜಗುರುಪ್ರಾಜ್ಞ ಪೂಜನಂ ಶೌಚಮಾರ್ಜವಂ |
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪ ॥

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ |
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ | ॥ ೧೫ ॥

ಆರಿಹೋದ, ರಸವಿಲ್ಲದ, ನಾರುವ, ಬಾಸಿಯ, ಎಂಜಲಾದ, ಅಪವಿತ್ರವಾದ ಅನ್ನವು ತಾಮಸರಿಗೆ ಪ್ರಿಯವು. ೧೦

ಫಲಾಶೆ ಇಲ್ಲದವರು ಕರ್ತವ್ಯಕರ್ಮವೆಂದು ವಿಧಿವಿಹಿತವಾಗಿ ಸ್ಥಿರಚಿತ್ತದಿಂದ ಮಾಡುವ ಯಜ್ಞವು ಸಾತ್ವಿಕವೆನಿಸುವದು. ೧೧

ಆದರೆ ಅರ್ಜುನಾ, ಫಲಾಶೆಯಿಂದ ಕೇವಲ ದಂಭಾರ್ಥವಾಗಿ ಯಾವ ಯಜ್ಞವು ಮಾಡಲ್ಪಡುವದೋ ಅದು ರಾಜಸವು. ೧೨

ವಿಧಿ ವಿಹೀನವಾದ ಅನ್ನದಾನವಿಲ್ಲದ ಮಂತ್ರ, ದಕ್ಷಿಣೆಗಳಿಲ್ಲದ ಶ್ರದ್ಧಾವಿಹೀನವಾದ ಯಜ್ಞವು ತಾಮಸವೆನಿಸುವದು. ೧೩

ದೇವಬ್ರಾಹ್ಮಣರನ್ನು ಗುರುವಿದ್ವಾಂಸರನ್ನು ಪೂಜಿಸುವದು, ಪಾವಿತ್ರ್ಯ, ಸರಲತೆ, ಬ್ರಹ್ಮಚರ್ಯ, ಅಹಿಂಸೆ, ಈ ವ್ರತಗಳನ್ನು ಪಾಲಿಸುವದು ಶಾರೀರಿಕ ತಪವೆನಿಸುತ್ತದೆ. ೧೪

ಯಾರ ಮನಸ್ಸು ನೋಯದಂತೆ ನುಡಿಯೋಣ, ಪ್ರಿಯ, ಸತ್ಯ ಹಾಗೂ ಹಿತಕರ ಮಾತುಗಳನ್ನಾಡೋಣ, ಸ್ವಾಧ್ಯಾಯ ಹಾಗೂ ಅಭ್ಯಾಸ ಮಾಡೋಣ ಇವು ವಾಣಿಯ ತಪವೆನಿಸುವವು. ೧೫

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ |
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥

ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ |
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥

ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ |
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥

ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ |
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ೧೯ ॥

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ |
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥೨೦॥

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ |
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧ ॥

ಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮಸಂಯಮ, ಭಾವಶುದ್ಧಿ ಇವು ಮಾನಸಿಕ ತಪದ ಲಕ್ಷಣಗಳೆನಿಸುವವು. ೧೬

ಫಲಾಶೆ ಇಲ್ಲದ ಯೋಗಯುಕ್ತ ಜನರು ಪರಮ ಶ್ರದ್ಧೆಯಿಂದ ಮಾಡುವ ಈ ಮೂರು ವಿಧದ ತಪವು ಸಾತ್ವಿಕವೆನಿಸುವದು. ೧೭

ಜನರಲ್ಲಿ ತನ್ನ ಸತ್ಕಾರ ಮಾನ ಪ್ರಶಂಸೆಗಳಾಗಬೇಕೆಂದು ಮಾಡಿದ ದಾಂಭಿಕ ತಪಕ್ಕೆ ರಾಜಸ ತಪವೆನ್ನುವರು. ಅದು ಸ್ಥಿರವೂ ನಿತ್ಯವೂ ಇರಲಾರದು. ೧೮

ಮೂರ್ಖತನದ ದುರಾಗ್ರಹದಿಂದ, ತನ್ನನ್ನು ಪೀಡಿಸಿ, ಎರಡನೆಯವರ ನಾಶಕ್ಕಾಗಿ ಮಾಡಲ್ಪಟ್ಟ ತಪವು ತಾಮಸವೆನಿಸುತ್ತದೆ. ೧೯

ಕೇವಲ ಕರ್ತವ್ಯಬುದ್ಧಿಯಿಂದ ಯೋಗ್ಯವಾದ ದೇಶ ಕಾಲ ಪಾತ್ರಗಳನ್ನು ನೋಡಿ ತನ್ನ ಮೇಲೆ ಉಪಕಾರ ಮಾಡದವನಿಗೆ ಕೊಟ್ಟ ದಾನವು ಸಾತ್ವಿಕವು. ೨೦

ಆದರೆ ಪ್ರತ್ಯುಪಕಾರವೆಂದು ಹಾಗೂ ಫಲಾಶೆಯಿಂದ, ಮನಸ್ತಾಪದಿಂದ ಕೊಟ್ಟ ದಾನವು ರಾಜಸವು. ೨೧

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ |**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥ ೨೨ ॥**

**"ಓಂತತ್ಸ"ದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ |**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ |**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಂ ॥ ೨೪ ॥**

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ |**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ |**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

ಯಾವ ದಾನವು ಅಯೋಗ್ಯ ಸ್ಥಲಕಾಲಗಳಲ್ಲಿ ಅಯೋಗ್ಯ ಮನುಷ್ಯನಿಗೆ ಅನಾದರದಿಂದಲೂ ಅಪಮಾನಪೂರ್ವಕವೂ ಕೊಡಲ್ಪಡುವದೋ ಅದು ತಾಮಸ ದಾನವು. ೨೨

ಓಂ ತತ್ ಸತ್ ಎಂದು ಬ್ರಹ್ಮನಿರ್ದೇಶವು ಮೂರು ವಿಧವಿರುವದು. ಮೊದಲು ಬ್ರಾಹ್ಮಣ, ವೇದ, ಯಜ್ಞಗಳು ಈ ನಿರ್ದೇಶಪೂರ್ವಕವಾಗಿಯೇ ನಿರ್ಮಿಸಲ್ಪಟ್ಟವು. ೨೩

ಆದುದರಿಂದಲೇ ಮುಮುಕ್ಷುಗಳು ಮಾಡುವ ವಿಧಿಯುಕ್ತವಾದ ಯಜ್ಞ, ದಾನ, ತಪಾದಿ ವಿವಿಧ ಕರ್ಮಗಳು ಯಾವಾಗಲೂ ಓಂ ಎಂಬ ಉಚ್ಚಾರದಿಂದಲೇ ಆರಂಭಿಸುತ್ತವೆ. ೨೪

ತತ್ ಎಂದು ಫಲಾಶೆಯಿಲ್ಲದೆ ಯಜ್ಞ, ದಾನ, ತಪ ಮುಂತಾದ ವಿವಿಧ ಕರ್ಮಗಳನ್ನು ಮೋಕ್ಷ ಕಾಂಕ್ಷಿಗಳು ಮಾಡುತ್ತಾರೆ. ೨೫

ಸತ್ ಅಂದರೆ ಇರುವದು, ಸಾಧು ಅಂದರೆ ಒಳಿತು. ಈ ಅರ್ಥದಲ್ಲಿ ಸತ್ ಇದು ಉಪಯೋಗಿಸಲ್ಪಡುವದು. ಪಾರ್ಥಾ, ಪ್ರಶಸ್ತಕರ್ಮಗಳು ಎಂಬ ಅರ್ಥದಲ್ಲಿಯೂ ಸತ್ ಎಂಬ ಶಬ್ದವು ಉಪಯೋಗಿಸಲ್ಪಡುವದು. ೨೬

ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ |
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ |
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥

ಇತಿ ಶ್ರೀಮದ್ಭಗವದ್ಗೀತಾಯಾಂ ಶ್ರದ್ಧಾತ್ರಯವಿಭಾಗಯೋಗೋ ನಾಮ
ಸಪ್ತದಶೋಽಧ್ಯಾಯಃ

ಯಜ್ಞ, ದಾನ, ತಪ ಇವುಗಳನ್ನು ಸ್ಥಿರವಾಗಿ ಮಾಡುತ್ತಿರುವದು ಸತ್ ಎನಿಸುವದು. ಅವುಗಳ ಸಲುವಾಗಿ ಮಾಡಲ್ಪಟ್ಟ ಎಲ್ಲ ಕರ್ಮಗಳು ಸಹ ಸತ್ ಎಂದು ಕರೆಯಲ್ಪಡುವವು. ೨೭

ಅಶ್ರದ್ಧೆಯಿಂದ ಮಾಡಿದ ಯಜ್ಞ, ಕೊಟ್ಟ ದಾನ, ಆಚರಿಸಿದ ತಪ ಹಾಗೂ ಇತರ ಯಾವದೇ ಕರ್ಮವು ಅಸತ್ ಎಂದೆನಿಸುವದು. ಪಾರ್ಥಾ, ಆ ಕರ್ಮದಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಗತಿಯೂ ಇಲ್ಲ, ಲಾಭವೂ ಇಲ್ಲ. ೨೮

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ
೧೭ ನೆಯ ಅಧ್ಯಾಯವು ಸಮಾಪ್ತವು.

# ಹದಿನೆಂಟನೆಯ ಅಧ್ಯಾಯವು.

---

ಅರ್ಜುನ ಉವಾಚ—

ಸನ್ಯಾಸಸ್ಯ ಮಹಾಬಾಹೋ ತತ್ವಮಿಚ್ಛಾಮಿ ವೇದಿತುಂ ।
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥

ಶ್ರೀಭಗವಾನುವಾಚ—

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ಯಾಸಂ ಕವಯೋ ವಿದುಃ ।
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥
ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃ ಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥
ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥

ಅರ್ಜುನನು ಅಂದದ್ದು—ಕೃಷ್ಣಾ, ಸನ್ಯಾಸ ಹಾಗೂ ತ್ಯಾಗ ಇವುಗಳ ತತ್ವವನ್ನು ಬೇರೆ ಬೇರೆಯಾಗಿ ಅರಿಯಲಿಚ್ಛಿಸುವೆನು. ೧

ಕೃಷ್ಣನು ಅಂದದ್ದು— ಕಾಮ್ಯಕರ್ಮಗಳನ್ನು ಬಿಟ್ಟುಬಿಡುವದೇ ಸನ್ಯಾಸವೆಂದು ಜಾಣರು ತಿಳಿಯುವರು. ಎಲ್ಲ ಕರ್ಮಗಳ ಫಲಗಳನ್ನು ಬಿಟ್ಟುಬಿಡುವದೇ ತ್ಯಾಗವೆಂದು ಪಂಡಿತರು ಹೇಳುವರು. ೨

ಕರ್ಮವು ದೋಷಯುಕ್ತವಿರುವದರಿಂದ ಅದನ್ನು ಬಿಡತಕ್ಕದ್ದೆಂದು ಕೆಲವು ವಿದ್ವಾಂಸರ ಮತವು. ಯಜ್ಞ, ದಾನ, ತಪ ಈ ಕರ್ಮಗಳನ್ನು ಎಂದಿಗೂ ಬಿಡತಕ್ಕದಲ್ಲವೆಂದು, ಅನ್ಯ ವಿದ್ವಾಂಸರು ಹೇಳುವರು. ೩

ಅರ್ಜುನನೇ, ತ್ಯಾಗದ ವಿಷಯವಾಗಿ ನನ್ನ ನಿರ್ಣಯವನ್ನು ಕೇಳು. ತ್ಯಾಗವು ಮೂರು ವಿಧವಾದದ್ದೆಂದು ಪ್ರಸಿದ್ಧವು. ೪

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ॥ ೫ ॥

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ |
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥ ೬ ॥

ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ |
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ |
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ |
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥

ಯಜ್ಞ, ದಾನ, ತಪ ಈ ಕರ್ಮಗಳನ್ನು ಬಿಡತಕ್ಕದ್ದಲ್ಲ; ಅವುಗಳನ್ನು ಮಾಡಲೇಬೇಕು. ಯಜ್ಞ, ದಾನ, ತಪಗಳು ವಿದ್ವಾಂಸರ ಚಿತ್ತಶುದ್ಧಿಯನ್ನು ಮಾಡುವವು. ೫

ಈ ಕರ್ಮಗಳನ್ನಾದರೂ ಅನಾಸಕ್ತರಾಗಿ ಫಲವನ್ನಾಶಿಸದೆ ಮಾಡತಕ್ಕದ್ದೆಂದು ನನ್ನ ನಿಶ್ಚಿತವಾದ ಅಭಿಪ್ರಾಯವಿರುವದು. ೬

ನಿಯತ ಕರ್ಮವನ್ನು ಬಿಡುವದು ಎಂದೂ ಉಚಿತವಲ್ಲ. ಮೂರ್ಖತನದಿಂದ ಅದನ್ನು ಬಿಟ್ಟರೆ ಅದು ತಾಮಸ ತ್ಯಾಗವೆನಿಸುವದು. ೭

ದುಃಖಕಾರಕವೆಂದು, ಶರೀರಕ್ಕೆ ಕಷ್ಟಕರವೆಂಬ ಭಯದಿಂದ ಕರ್ಮವನ್ನು ಬಿಟ್ಟರೆ ಅದು ರಾಜಸ ತ್ಯಾಗವು. ಅದರಿಂದ ತ್ಯಾಗಫಲವು ಎಂದೆಂದಿಗೂ ದೊರೆಯದು. ೮

ಅನಾಸಕ್ತಿಯಿಂದ ಫಲಾಶೆಯನ್ನು ಬಿಟ್ಟು ಕರ್ತವ್ಯವೆಂದು ನಿಯತ ಕರ್ಮವನ್ನು ಮಾಡಲಾಗಿ ಅದು ಸಾತ್ವಿಕ ತ್ಯಾಗವೆನಿಸುವದು. ೯

ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥

ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥

ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ ।
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ಯಾಸಿನಾಂ ಕ್ವಚಿತ್ ॥ ೧೨ ॥

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ ॥೧೩॥

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥ ೧೪ ॥

ಯಾವನು ಕ್ಲೇಶಕರವಾದ ಕರ್ಮವನ್ನು ದ್ವೇಷಿಸುವದಿಲ್ಲವೋ ಸುಖಕರವೆನಿಸುವ ಕರ್ಮದಲ್ಲಿ ಆಸಕ್ತನಾಗುವದಿಲ್ಲವೋ ಅವನೇ ಎಲ್ಲ ಸಂಶಯಗಳನ್ನು ದಾಟಿದ ಬುದ್ಧಿವಂತನೂ, ಸತ್ವವಂತನೂ ಆದ ತ್ಯಾಗಿಯು. ೧೦

ದೇಹಧಾರಿಯು ಸಮಗ್ರ ಕರ್ಮಗಳನ್ನು ಬಿಟ್ಟುಬಿಡುವದು ಅಶಕ್ಯವು. ಆದುದರಿಂದ ಯಾವನು ಕರ್ಮಫಲಗಳನ್ನು ತ್ಯಜಿಸುವನೋ ಅವನೇ ತ್ಯಾಗಿಯೆನಿಸುವನು. ೧೧

ಫಲಾಶೆಯನ್ನು ಬಿಡದೇ ಇದ್ದವರಿಗೆ ಅನಿಷ್ಟ, ಇಷ್ಟ ಹಾಗೂ ಮಿಶ್ರವೆಂಬ ಮೂರು ಪ್ರಕಾರದ ಕರ್ಮಫಲಗಳು ಮರಣದ ನಂತರ ಪ್ರಾಪ್ತವಾಗುವವು. ತ್ಯಾಗಿಗೆ ಇವಾವೂ ತಗಲಲಾರವು; ಅವನು ಈ ಬಂಧನಗಳಿಂದ ಮುಕ್ತನಿರುವನು. ೧೨

ಎಲ್ಲ ಕರ್ಮಗಳ ಸಿದ್ಧಿಗಾಗಿ ಈ ಕೆಳಗಿನ ಐದು ಕಾರಣಗಳು ಅವಶ್ಯವೆಂದು ಸಾಂಖ್ಯ ಗ್ರಂಥಗಳಲ್ಲಿ ಹೇಳಿದೆ. ಅವುಗಳನ್ನು ಹೇಳುವೆನು ಕೇಳು. ೧೩

ಸ್ಥಾನವು, ಕರ್ತನು, ನಾನಾವಿಧದ ಸಾಧನಗಳು, ಬಗೆಬಗೆಯ ಯತ್ನಗಳು ಹಾಗೂ ಐದನೆಯದು ದೈವವು. ೧೪

ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ |
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥
ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ |
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥೧೬॥
ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ |
ಹತ್ವಾಪಿ ಸ ಇಮಾಲ್ಲೋಕಾನ್ನ ಹಂತಿ ನ ನಿಬಧ್ಯತೆ ॥೧೭॥
ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ |
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥
ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |
ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥೧೯॥

ಮನುಷ್ಯನು ತನ್ನ ಶರೀರ ವಾಣಿ ಮನಗಳಿಂದ ಯಾವ ಕರ್ಮವನ್ನಾರಂಭಿಸುವನೋ, ಆ ಕರ್ಮವು ನ್ಯಾಯಿದ್ದಿರಲಿ, ಅನ್ಯಾಯಿದ್ದಿರಲಿ ಅದಕ್ಕೆ ಈ ಐದು ಕಾರಣಗಳು ಅವಶ್ಯವೇ ಇರುವವು. ೧೫

ಹೀಗಿರಲಾಗಿ ಮೂರ್ಖತನದಿಂದ ತಾನೊಬ್ಬನೇ ಕರ್ತನೆಂದು ತಿಳಿಯುವ ಬುದ್ಧಿಗೇಡಿಗೆ ಏನೂ ತಿಳಿಯುವದಿಲ್ಲ. ೧೬

ಯಾವನಿಗೆ ಅಹಂಕಾರದ ಭಾವನೆಯಿಲ್ಲವೋ ಯಾವನ ಬುದ್ಧಿಯು ಕರ್ಮಗಳಿಂದ ಅಲಿಪ್ತವೋ ಅವನು ಈ ಎಲ್ಲ ಜನರನ್ನು ಸಂಹರಿಸಿದರೂ ತತ್ವತಃ ಅವರನ್ನು ಅವನು ಸಂಹರಿಸುವದೂ ಇಲ್ಲ, ಅದರಿಂದ ಬದ್ಧನೂ ಆಗುವದಿಲ್ಲ. ೧೭

ಜ್ಞಾನ, ಜ್ಞೇಯ, ಜ್ಞಾತಾ ಹೀಗೆ ಮೂರು ಕರ್ಮಪ್ರೇರಣೆಗೆ ಅವಶ್ಯವಾದವುಗಳು. ಕರ್ಮ, ಕರಣ, ಕರ್ತನು ಹೀಗೆ ಮೂರು ಕರ್ಮಸಂಗ್ರಹಕ್ಕೆ ಬೇಕಾದವುಗಳು. ೧೮

ಗುಣಭೇದದಿಂದ ಜ್ಞಾನ, ಕರ್ಮ, ಕರ್ತೃ ಇವುಗಳಲ್ಲಿ ಮೂರು ಪ್ರಕಾರವಿರುವವೆಂದು ಸಾಂಖ್ಯಶಾಸ್ತ್ರದಲ್ಲಿ ಹೇಳಿದೆ. ಅದರಲ್ಲಿದ್ದಂತೆಯೇ ಹೇಳುವೆನು ಕೇಳು. ೧೯

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಂ ॥ ೨೦ ॥

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ ॥ ೨೧ ॥

ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಂ ।
ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ ॥ ೨೨ ॥

ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ ।
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥

ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥ ೨೪ ॥

ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಂ ।
ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಂ ॥ ೨೫ ॥

ಭಿನ್ನ ಬಿನ್ನ ಭೂತಗಳಲ್ಲಿ ಒಂದೇ ಅಖಂಡ, ಅವ್ಯಯ ಭಗವದ್ರೂಪವು ಯಾವ ಜ್ಞಾನದಿಂದ ಗೋಚರವಾಗುವದೋ ಆ ಜ್ಞಾನವು ಸಾತ್ವಿಕವೆಂದು ತಿಳಿ. ೨೦

ಯಾವ ಜ್ಞಾನದ ಮೂಲಕ ಎಲ್ಲ ಭೂತಗಳಲ್ಲಿ ಬೇರೆ ಬೇರೆಯಾಗಿ ನಾನಾ ರೂಪಗಳು ಕಾಣುವವೋ ಆ ಜ್ಞಾನವು ರಾಜಸವು. ೨೧

ನಿಶ್ಚಿತವಾದ ಉದ್ದೇಶವಿಲ್ಲದೆ ತತ್ವದ ಜ್ಞಾನವಿಲ್ಲದೆ ಇದೇ ಸರ್ವಸ್ವವೆಂದು ಒಂಬೇ ಕಾರ್ಯದಲ್ಲಿ ತೊಡಗಿದ ಜ್ಞಾನವು ತಾಮಸ ಜ್ಞಾನವು. ೨೨

ಫಲಾಶಾರಹಿತನಾದವನು ಆಸಕ್ತಿ ಇಲ್ಲದೆ, ರಾಗದ್ವೇಷಗಳಿಲ್ಲದೆ ಮಾಡುವ ನಿಯತ ಕರ್ಮವು ಸಾತ್ವಿಕವೆನಿಸುವದು. ೨೩

ಫಲಾಶೆಯುಳ್ಳವನು ಅಹಂಕಾರಯುಕ್ತನಾಗಿ ಬಹಳ ಆಯಾಸದಿಂದ ಮಾಡಿದ ಕರ್ಮವು ರಾಜಸವೆನಿಸುವದು. ೨೪

ಪರಿಣಾಮ, ತನ್ನ ಬಲ, ನಾಶ, ಅಹಿಂಸೆ ಇವುಗಳ ವಿಚಾರ ಮಾಡದೆ ಅವಿವೇಕದಿಂದ ಆರಂಭಿಸಲ್ಪಟ್ಟ ಕರ್ಮವು ತಾಮಸವೆನಿಸುವದು. ೨೫

ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ |
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ || ೨೬ ||
ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ |
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ || ೨೭ ||
ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ |
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ || ೨೮ ||
ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು |
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ || ೨೯ ||
ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ |
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ||೩೦||
ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ |
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ || ೩೧ ||

ನಿಸ್ಸಂಗನು, ನಿರಹಂಕಾರಿಯು, ಧೈರ್ಯೋತ್ಸಾಹಗಳಿಂದ ಯುಕ್ತನು, ಸಿದ್ಧಿ ಅಸಿದ್ಧಿಗಳಿಂದ ವಿಕಾರ ಹೊಂದದಿರುವ ಕರ್ತನು ಸಾತ್ವಿಕನು. ೨೬

ಆಸಕ್ತಿಯುಳ್ಳ, ಫಲಾಶೆಯುಳ್ಳ, ಲೋಭಿಯಾದ, ಹಿಂಸೆ ಮಾಡುವ, ಅಪವಿತ್ರನಾದ, ಹರ್ಷ-ಶೋಕಗಳಿಗೆ ಈಡಾದ ಕರ್ತನು ರಾಜಸನೆಂದು ಹೇಳಲ್ಪಟ್ಟಿರುವನು. ೨೭

ಚಂಚಲ ಬುದ್ಧಿಯುವನು, ದಡ್ಡನು, ಶೆಟೆದು ನಡೆಯುವವನು ತಕ್ಕನು, ಜನರನ್ನು ಮುಳುಗಿಸುವವನು, ಸೋಮಾರಿಯು, ಜೋಲುಮೋರೆಯುವನು, ದೀರ್ಘಸೂತ್ರಿಯು ಆದ ಕರ್ತನು ತಾಮಸನೆನಿಸುವನು. ೨೮

ಪಾರ್ಥಾ, ಗುಣಭೇದದಿಂದ ಬುದ್ಧಿ ಹಾಗೂ ಧೃತಿ ಇವುಗಳಲ್ಲಿ ಆಗುವ ಮೂರು ಪ್ರಕಾರಗಳನ್ನು ನಾನು ಬೇರೆ ಬೇರೆ ಮಾಡಿ ನಿಃಶೇಷವಾಗಿ ಹೇಳುವದನ್ನು ಕೇಳು. ೨೯

ಪ್ರವೃತ್ತಿ ನಿವೃತ್ತಿ, ಕಾರ್ಯ ಅಕಾರ್ಯ, ಭಯ ಅಭಯ, ಬಂಧ ಮೋಕ್ಷ, ಇವುಗಳನ್ನು ಚನ್ನಾಗಿ ತಿಳಿಯುವ ಬುದ್ಧಿಯು ಸಾತ್ವಿಕವು. ೩೦

ಧರ್ಮ ಅಧರ್ಮ, ಕಾರ್ಯ ಅಕಾರ್ಯ ಇವುಗಳನ್ನು ಯಥಾರ್ಥವಾಗಿ ತಿಳಿಯದಿರುವ ಬುದ್ಧಿಯು ರಾಜಸವು. ೩೧

ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ |
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥
ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ |
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ವಿಕೀ ॥ ೩೩ ॥
ಯಯಾ ತು ಧರ್ಮಕಾಮಾರ್ಥಾನ್ಧೃತ್ಯಾ ಧಾರಯತೇಽರ್ಜುನ |
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥
ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ |
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥
ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ |
ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥

ಯಾವ ಬುದ್ಧಿಯು ಅಜ್ಞಾನದಿಂದಾವರಿಸಿದ್ದರಿಂದ ಅಧರ್ಮಕ್ಕೆ ಧರ್ಮವೆನ್ನುವದೋ ಎಲ್ಲ ಸಂಗತಿಗಳನ್ನು ವಿಪರೀತವಾಗಿ ತಿಳಿಯುವದೋ ಅದು ತಾಮಸ ಬುದ್ಧಿಯು. ೩೨

ಯಾವ ಧೃತಿಯು ಅತ್ತಿತ್ತ ಚಲಿಸದೆ ಸ್ಥಿರವಿದ್ದು ಮನ ಪ್ರಾಣ ಇಂದ್ರಿಯಗಳ ಕ್ರಿಯೆಗಳನ್ನು ಫಲಾಶೆಯಿಲ್ಲದೆ ಧಾರಣಮಾಡುತ್ತಿರುವದೋ ಅದು ಸಾತ್ವಿಕ ಧೃತಿಯು. ೩೩

ಪ್ರಸಂಗವಶಾತ್ ಫಲಾಶೆಯುಳ್ಳ ಯಾವ ಧೃತಿಯಿಂದ ಧರ್ಮ ಅರ್ಥ ಕಾಮಗಳನ್ನು ಮನುಷ್ಯನು ಸಾಧಿಸುವನೋ ಅದು ರಾಜಸ ಧೃತಿಯು. ೩೪

ದುರ್ಬುದ್ಧಿಯುಳ್ಳವನು ಯಾವ ಧೃತಿಯ ಮೂಲಕ ನಿದ್ರೆ ಭಯ ಶೋಕ ಖೇದ ಮದಗಳನ್ನು ಬಿಡುವದಿಲ್ಲವೋ ಅದು ತಾಮಸ ಧೃತಿಯು. ೩೫

ಅರ್ಜುನಾ, ಸುಖವಾದರೂ ಮೂರು ಪ್ರಕಾರದ್ದಿರುವದು. ಮನುಷ್ಯನು ಯಾವ ಸುಖದಲ್ಲಿ ಅಭ್ಯಾಸದಿಂದ ಮಗ್ನನಾಗುವನೋ ಯಾವುದರಿಂದ ಎಲ್ಲ ದುಃಖವನ್ನು ಪೂರಾ ನೀಗುವನೋ, ೩೬

ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ |
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ ॥ ೩೭ ॥
ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಂ |
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ೩೮ ॥
ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ |
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಂ ॥ ೩೯ ॥
ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ |
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ |
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥

ಯಾವುದು ಮೊದಲು ವಿಷದಂತೆ ಕಹಿ ಇದ್ದು ಕೊನೆಗೆ ಅಮೃತದಂತಿರುವದೋ ಯಾವುದು ಆತ್ಮನಿಷ್ಠವಿರುವ ಬುದ್ಧಿಯ ಪ್ರಸನ್ನತೆಯಿಂದ ದೊರೆಯುವದೋ ಆ ಸುಖವು ಸಾತ್ವಿಕವು. ೩೭

ಇಂದ್ರಿಯ ಹಾಗೂ ವಿಷಯಗಳ ಸಂಯೋಗದಿಂದ ಸಿಗುವ, ಮೊದಲು ಅಮೃತದಂತಿದ್ದು ಕೊನೆಗೆ ವಿಷದಂತೆ ಪರಿಣಮಿಸುವ ಸುಖವು ರಾಜಸವು. ೩೮

ಯಾವ ಸುಖವು ಕೊನೆಗೂ ಮೊದಲೂ ಮೋಹವನ್ನುಂಟು ಮಾಡುವದೋ ಯಾವದು ನಿದ್ರೆ, ಆಲಸ್ಯ, ತಪ್ಪು ಮುಂತಾದವುಗಳಿಂದ ಉದ್ಭವಿಸುವದೋ ಅದು ತಾಮಸ ಸುಖವು. ೩೯

ಈ ಮೂರು ಪ್ರಕೃತಿಗುಣಗಳಿಂದ ಮುಕ್ತವಿದ್ದ ವಸ್ತುವು ಈ ಪೃಥಿವಿಯಲ್ಲಿಲ್ಲ ಇಷ್ಟೇ ಅಲ್ಲ, ಸ್ವರ್ಗದಲ್ಲಿ, ದೇವತೆಗಳಲ್ಲಿ ಸಹ ಅಂಥ ಪದಾರ್ಥವಿಲ್ಲ. ೪೦

ಅರ್ಜುನಾ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರ ಕರ್ಮಗಳು ಅವರವರ ಸ್ವಾಭಾವಿಕ ಗುಣಗಳನ್ನು ಅನುಸರಿಸಿ ವಿಭಾಗಿಸಲ್ಪಟ್ಟಿವೆ. ೪೧

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ॥೪೨॥
ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ ॥ ೪೩ ॥
ಕೃಷಿಗೋರಕ್ಷ ವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥ ೪೪ ॥
ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥

ಶಮೆ, ದಮೆ, ತಪ, ಪಾವಿತ್ರ್ಯ, ಸರಲತೆ, ಕ್ಷಮೆ, ಜ್ಞಾನ, ವಿಜ್ಞಾನ, ಈಶ್ವರನಲ್ಲಿ ವಿಶ್ವಾಸ, ಇವು ಸ್ವಾಭಾವಿಕವಾಗಿ ಬ್ರಾಹ್ಮಣರ ಲಕ್ಷಣಗಳು. ೪೨

ಶೌರ್ಯ, ತೇಜ, ಧೈರ್ಯ, ದಕ್ಷತೆ, ಯುದ್ಧದಲ್ಲಿ ಓಡಿಹೋಗದಿರೋಣ, ದಾನ, ಪ್ರಜೆಗಳನ್ನಾಳುವ ಭಾವನೆ, ಇವು ಸ್ವಾಭಾವಿಕವಾಗಿ ಕ್ಷತ್ರಿಯ ಧರ್ಮಗಳು. ೪೩

ಒಕ್ಕಲತನ, ಗೋರಕ್ಷಣೆ, ವ್ಯಾಪಾರ, ಇವು ಸ್ವಾಭಾವಿಕವಾಗಿ ವೈಶ್ಯರ ಕರ್ಮಗಳು. ಪರರ ಸೇವೆ ಮಾಡುವದು ಇದು ಸ್ವಾಭಾವಿಕ ಶೂದ್ರ ಕರ್ಮವು. ೪೪

ತನ್ನ ಸ್ವಕರ್ಮದಲ್ಲಿ ನಿರತನಿದ್ದವನು ಸಿದ್ಧಿಯನ್ನು ಪಡೆಯುವದು ನಿಶ್ಚಯವು. ತನ್ನ ಸ್ವಾಭಾವಿಕ ಕರ್ಮದಲ್ಲಿ ನಿರತನಿದ್ದವನು ಸಿದ್ಧಿಯನ್ನು ಹೇಗೆ ಪಡೆಯುವನೆಂಬದನ್ನು ಕೇಳು. ೪೫

ಯಾವನಿಂದ ಈ ಭೂತಗಳ ಉದ್ಭವವೋ ಯಾವನು ಇದನ್ನೆಲ್ಲ ವ್ಯಾಪಿಸಿರುವನೋ ಅವನನ್ನು ತನ್ನ ಸ್ವಭಾವಸಿದ್ಧವಾದ ಕರ್ಮದಿಂದ ಪೂಜಿಸಿ ಮನುಷ್ಯನು ಸಿದ್ಧಿಯನ್ನು ಪಡೆಯುವನು. ೪೬

ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥೪೭॥
ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥
ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥೪೯॥
ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥
ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥

ಚನ್ನಾಗಿ ಆಚರಿಸಲಿಕ್ಕೆ ಬರುವ ಪರಧರ್ಮಕ್ಕಿಂತಲೂ ಸದೋಷವಿರುವ ಸ್ವಧರ್ಮವೇ ಮಿಗಿಲಾದದ್ದು. ಸ್ವಭಾವದಿಂದ ನಿಯಮಿಸಲ್ಪಟ್ಟ ಕರ್ಮವನ್ನಾಚರಿಸುತ್ತಿರುವ ಮನುಷ್ಯನಿಗೆ ಪಾಪದ ಲೇಪವಾಗುವದಿಲ್ಲ. ೪೭

ಅರ್ಜುನನೇ, ಸ್ವಭಾವಸಿದ್ಧ ಕರ್ಮವು ಸದೋಷವಿದ್ದರೂ ತ್ಯಾಜ್ಯವಲ್ಲ. ಯಾಕಂದರೆ ಅಗ್ನಿಯು ಹೊಗೆಯಿಂದ ಮುಚ್ಚಲ್ಪಟ್ಟಿರುವಂತೆ ಎಲ್ಲ ಕರ್ಮಗಳೂ ಸದೋಷವಾದವುಗಳೇ. ೪೮

ಯಾತರಲ್ಲಿಯೂ ಆಸಕ್ತನಾಗದೆ ಮನಸನ್ನು ಗೆದ್ದು ನಿಸ್ಪೃಹನಾದವನು ಸನ್ಯಾಸದಿಂದ ಅಂದರೆ ಕಾಮ್ಯಕರ್ಮಗಳ ತ್ಯಾಗದಿಂದ ನೈಷ್ಕರ್ಮ್ಯ ಸಿದ್ಧಿಯನ್ನು ಅಂದರೆ ನಿಷ್ಕಾಮ ಕರ್ಮಮಾಡುವ ಸ್ಥಿತಿಯನ್ನು ಪಡೆಯುವನು. ೪೯

ಇನ್ನು ಸಿದ್ಧಿಯನ್ನು ಪಡೆದವನಿಗೆ ಜ್ಞಾನದ ಅತ್ಯಂತ ಶ್ರೇಷ್ಠವಾದ ಬ್ರಹ್ಮಪದವು ಹೇಗೆ ಪ್ರಾಪ್ತವಾಗುವದೆಂಬದನ್ನು ಸಂಕ್ಷೇಪದಿಂದ ಹೇಳುವೆನು ಕೇಳು. ೫೦

ಶುದ್ಧಬುದ್ಧಿಯುಕ್ತನಾಗಿ, ದೃಢಮನಸ್ಸಿನಿಂದ ಸಂಯಮ ಮಾಡಿ ಶಬ್ದಾದಿ ವಿಷಯಗಳನ್ನು ತ್ಯಜಿಸಿ, ರಾಗದ್ವೇಷಗಳನ್ನು ಬಿಟ್ಟು, ೫೧

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ |**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ |**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥೫೩॥**

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ |**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ॥ ೫೪ ॥**

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ವತಃ**
**ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥೫೫॥**

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಂ |**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥ ೫೬ ॥**

ಏಕಾಂತವಾಸವನ್ನು ಸೇವಿಸುತ್ತ, ಮಿತಾಹಾರವನ್ನು ಮಾಡುತ್ತ, ಶರೀರ ವಾಣಿ ಮನಗಳನ್ನು ಬಿಗಿಹಿಡಿದು, ವೈರಾಗ್ಯವಂತನಾಗಿ, ನಿತ್ಯವೂ ಧ್ಯಾನಯೋಗದಲ್ಲಿ ನಿರತನಾಗಿ, ೫೨

ಅಹಂಕಾರ, ಬಲ, ಗರ್ವ, ಕಾಮ, ಕ್ರೋಧ, ವಸ್ತುಗಳ ಪಾಶ, ಮುಂತಾದವುಗಳನ್ನು ಬೀಸಾಟಿ ನಿರ್ಮಮನೂ ಶಾಂತನೂ ಆದವನು ಬ್ರಹ್ಮಪದವನ್ನು ಪಡೆಯಲು ಸಮರ್ಥನಾಗುವನು. ೫೩

ಬ್ರಹ್ಮಪದವನ್ನು ಹೊಂದಿದ ಪ್ರಸನ್ನಾತ್ಮನು ಶೋಕಮಾಡುವದಿಲ್ಲ ಏನನ್ನೂ ಆಶಿಸುವದಿಲ್ಲ. ಅವನು ಭೂತಗಳಲ್ಲಿ ಸಮಬುದ್ಧಿಯುಳ್ಳವನಾಗಿ ನನ್ನ ಪರಮ ಭಕ್ತಿಯನ್ನು ಸಂಪಾದಿಸುವನು. ೫೪

ಭಕ್ತಿಯಿಂದ ನಾನು ಎಂಥವನು, ಯಾರು, ಎಂಬದನ್ನು ತತ್ವತಃ ಅರಿತುಕೊಂಡು ಅವನು ಮುಂದೆ ನನ್ನಲ್ಲಿ ಸಾಯುಜ್ಯಮುಕ್ತಿಯನ್ನು ಪಡೆಯುವನು. ೫೫

ನನ್ನನ್ನಾಶ್ರಯಿಸಿ ಯಾವಾಗಲೂ ಎಲ್ಲ ಕರ್ಮಗಳನ್ನು ಮಾಡುತ್ತಿದ್ದರೂ ನನ್ನ ಅನುಗ್ರಹದಿಂದ ಅವನು ಶಾಶ್ವತವಾದ ಅವ್ಯಯಪದವನ್ನು ಪಡೆಯುವನು. ೫೬

ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ |
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥

ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ |
ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥

ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ |
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥

ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ |
ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥ ೬೦ ॥

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧ ॥

ಎಲ್ಲ ಕರ್ಮಗಳನ್ನು ಮನಸಾ ನನಗೆ ಅರ್ಪಿಸಿ ಮತ್ಪರಾಯಣನಾಗಿ ಸ್ಥಿರಮತ್ತು ಸಮಬುದ್ಧಿಯವನಾಗಿಯಾವಾಗಲೂ ನನ್ನಲ್ಲಿ ಚಿತ್ತವನ್ನಿಡು. ೫೭

ನನ್ನಲ್ಲಿ ಚಿತ್ತವನ್ನಿರಿಸಲಾಗಿ ನೀನು ನನ್ನ ಅನುಗ್ರಹದಿಂದ ಎಲ್ಲ ಸಂಕಟಗಳನ್ನು ದಾಟುವಿ. ಆದರೆ ಅಹಂಕಾರದ ಮೂಲಕ ನಾನು ಹೇಳಿದ್ದನ್ನು ಲಕ್ಷಿಸದಿದ್ದರೆ ಮಾತ್ರ ನೀನು ನಾಶಹೊಂದುವಿ. ೫೮

ಅಹಂಕಾರವನ್ನಾಶ್ರಯಿಸಿ ಯುದ್ಧ ಮಾಡಲಿಕ್ಕಿಲ್ಲವೆಂದು ನೀನು ಅನ್ನುವದು ಜೊಳ್ಳುಮಾತು. ನಿನ್ನ ಈ ನಿಶ್ಚಯವು ವ್ಯರ್ಥವು; ಯಾಕಂದರೆ ಪ್ರಕೃತಿಸ್ವಭಾವವು ನಿನ್ನ ಕೈಯಿಂದ ಈ ಕರ್ಮವನ್ನು ಮಾಡಿಸಿಯೇ ಬಿಡುವದು. ೫೯

ಅರ್ಜುನನೇ, ನೀನು ನಿನ್ನ ಸ್ವಾಭಾವಿಕ ಕರ್ಮದಿಂದ ಬದ್ಧನಿರುವಿ. ಮೋಹಿತನಾದುದರಿಂದ ಈಗ ಯಾವುದನ್ನು ಮಾಡಲಿಚ್ಛಿಸುವದಿಲ್ಲವೋ ಅದನ್ನು ಪ್ರಕೃತಿವಶನಾಗಿ ನೀನು ಮಾಡಬೇಕಾಗುವದು. ೬೦

ಅರ್ಜುನಾ, ಯಂತ್ರಕ್ಕೆ ಕಟ್ಟಲ್ಪಟ್ಟ ವಸ್ತುಗಳಂತೆ ಎಲ್ಲ ಭೂತಗಳನ್ನು, ತನ್ನ ಮಾಯಾ ಶಕ್ತಿಯಿಂದ ಸಂಸಾರಚಕ್ರದಲ್ಲಿ ತಿರುಗಿಸುತ್ತ ಈಶ್ವರನು ಎಲ್ಲರ ಹೃದಯದಲ್ಲಿ ವಾಸಿಸುವನು. ೬೧

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥ ೬೨ ॥
ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ |
ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥
ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ |
ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ ॥ ೬೪ ॥
ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥
ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ೬೬ ॥

ಸಂಪೂರ್ಣ ಭಕ್ತಿಭಾವನೆಯಿಂದ ಅವನಿಗೆ ಶರಣಾಗತನಾಗು. ಅವನ ಕೃಪೆಯಿಂದ ಪರಮ ಶಾಂತಿಯನ್ನೂ ಶಾಶ್ವತ ಪದವಿಯನ್ನೂ ಪಡೆಯುವಿ. ೬೨

ಈ ಪ್ರಕಾರವಾಗಿ ಅತ್ಯಂತ ಗೂಢಕ್ಕಿಂತಲೂ ಗೂಢವಾದ ಜ್ಞಾನವನ್ನು ನಾನು ನಿನಗೆ ಹೇಳಿರುವೆನು. ಇದನ್ನು ಪೂರ್ಣ ವಿಮರ್ಶಿಸಿ ನಿನ್ನ ಮನಸಿಗೆ ತೋಚಿದಂತೆ ಮಾಡು. ೬೩

ಎಲ್ಲಕ್ಕೂ ಗೂಢವಾದ ಪರಮ ರಹಸ್ಯವನ್ನು ಪುನಃ ಹೇಳುವೆನು ಕೇಳು. ನೀನು ನನಗೆ ಅತ್ಯಂತ ಬೇಕಾದವನೆಂದು ನಾನು ನಿನ್ನ ಕಲ್ಯಾಣದ ಮಾತನ್ನು ಹೇಳುವೆನು. ೬೪

ನನ್ನಲ್ಲಿ ಮನವನ್ನಿರಿಸು, ನನ್ನ ಭಕ್ತನಾಗು, ಅಂದರೆ ನೀನು ನನ್ನ ಬಳಿಗೆಯೇ ಬರುವಿ. ಇದು ಸತ್ಯವೆಂದು ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವೆನು, ನೀನು ನನಗೆ ಪ್ರಿಯನಿರುವಿ. ೬೫

ಮಿಕ್ಕ ಎಲ್ಲ ಧರ್ಮಗಳನ್ನು ಬಿಟ್ಟು ನನಗೊಬ್ಬನಿಗೆಯೇ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತಮಾಡುವೆನು. ಶೋಕಮಾಡಬೇಡ. ೬೬

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ ೬೭ ॥

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ ॥ ೭೧ ॥

ಈ ಜ್ಞಾನವನ್ನು ತಪಾಚರಣೆಮಾಡದ, ಭಕ್ತಿಯಿಲ್ಲದ, ಕೇಳುವ ಇಚ್ಛೆ ಇಲ್ಲದ, ಹಾಗೂ ನನ್ನನ್ನು ದೂಷಿಸುವ ಯಾವ ಮನುಷ್ಯನಿಗೂ ಹೇಳ ಕೂಡದು. ೬೭

ಯಾವನು ಈ ಶ್ರೇಷ್ಠ ರಹಸ್ಯವನ್ನು ನನ್ನ ಭಕ್ತರಿಗೆ ಹೇಳುವನೋ ಅವನ ಭಕ್ತಿಯು ನನ್ನಲ್ಲಿ ಹೆಚ್ಚಾಗಿ ಅವನು ನನ್ನ ಬಳಿಯಲ್ಲಿಯೇ ಬರುವ ನೆಂಬಲ್ಲಿ ಸಂಶಯವಿಲ್ಲ. ೬೮

ನನಗೆ ಪ್ರಿಯವಾದುದನ್ನು ಮಾಡುವವರಲ್ಲಿ ಅವನಿಗಿಂತಲೂ ಹೆಚ್ಚು ಯಾರೂ ಇಲ್ಲ. ಲೋಕದಲ್ಲಿ ನನಗೆ ಅವನಿಗಿಂತಲೂ ಪ್ರಿಯನಾದರೂ ಯಾರೂ ಇಲ್ಲ. ೬೯

ಯಾವನು ಈ ನಮ್ಮ ಧಾರ್ಮಿಕ ಸಂವಾದದ ಅಧ್ಯಯನವನ್ನು ಮಾಡುವನೋ ಅವನು ನನ್ನನ್ನು ಜ್ಞಾನಯಜ್ಞದಿಂದ ಪೂಜಿಸದಂತೇಯೇ ಸರಿ. ೭೦

ದೋಷಬುದ್ಧಿಯನ್ನು ಬಿಟ್ಟು ಯಾವ ಪುರುಷನು ಶ್ರದ್ಧಾಯುಕ್ತ ನಾಗಿ ಇದನ್ನು ಕೇಳುವನೋ ಅವನಾದರೂ ಮುಕ್ತನಾಗಿ ಪುಣ್ಯವಂತರ ಶುಭಲೋಕಗಳಿಗೆ ಹೋಗುವನು. ೭೧

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ |**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥ ೭೨ ॥**

ಅರ್ಜುನ ಉವಾಚ—

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ |**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ಸಂಜಯ ಉವಾಚ—

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ |**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪ ॥**
**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಂ |**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಂ ॥೭೫॥**
**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಂ |**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬॥**

ಪಾರ್ಥನೇ, ನೀನು ಗೀತೆಯನ್ನು ಏಕಾಗ್ರಚಿತ್ತದಿಂದ ಕೇಳಿರುವಿಯಷ್ಟೇ? ನಿನ್ನ ಅಜ್ಞಾನರೂಪ ಮೋಹವು ನಷ್ಟವಾಯಿತಷ್ಟೇ? ೭೨

**ಅರ್ಜುನನು ಅಂದದ್ದು**— ಕೃಷ್ಣನೇ, ನನ್ನ ಮೋಹವಳಿಯಿತು. ನಿನ್ನ ಪ್ರಸಾದದಿಂದ ನನ್ನ ಕರ್ತವ್ಯದ ಎಚ್ಚರವು ನನಗೆ ಹುಟ್ಟಿತು. ನನ್ನ ಸಂಶಯಗಳ ಪರಿಹಾರವಾಯಿತು. ನಿನ್ನ ಅಜ್ಞೆಯಂತೆ ನಾನು ಮಾಡುವೆನು. ೭೩

**ಸಂಜಯನು ಅಂದದ್ದು**— ಈ ಪ್ರಕಾರವಾಗಿ ಶ್ರೀಕೃಷ್ಣಪಾರ್ಥರಿಗಾದ, ಮೈಮೇಲೆ ಮುಳ್ಳು ಬರುವ, ಅದ್ಭುತವಾದ ಸಂವಾದವನ್ನು ನಾನು ಕೇಳಿದೆನು. ೭೪

ಈ ಶ್ರೇಷ್ಠವಾದ ಗೂಢಜ್ಞಾನವನ್ನು, ಸಾಕ್ಷಾತ್ ಯೋಗೇಶ್ವರನು ಸ್ವತಃ ಹೇಳಿದ ಈ ಯೋಗವನ್ನು, ಶ್ರೀವ್ಯಾಸರ ಅನುಗ್ರಹದಿಂದ ನಾನು ಕೇಳಿದೆನು. ೭೫

ಹೇ ಅರಸನೇ, ಕೃಷ್ಣಪಾರ್ಥರ ಈ ಅದ್ಭುತ, ಪುಣ್ಯಕರವಾದ ಸಂವಾದವು ನನಗೆ ಪುನಃ ಪುನಃ ನೆನಪಾಗಿ ನಾನು ಹರ್ಷಪರವಶನಾಗುತ್ತಿರುವೆನು. ೭೬

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ |**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃಪುನಃ॥೭೭॥**
**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ |**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥**

ಇತಿ ಶ್ರೀಮದ್ಭಗವದ್ಗೀತಾಯಾಂ ಮೋಕ್ಷಸನ್ಯಾಸಯೋಗೋ ನಾಮ ಅಷ್ಟಾದಶೋಧ್ಯಾಯಃ

ಕೃಷ್ಣನ ಆ ಪರಮ ಅದ್ಭುತ ಸ್ವರೂಪವನ್ನು ನೆನೆನೆನೆಸಿ, ಹೇ ರಾಜನೇ, ನನಗೆ ಪುನಃ ಪುನಃ ಸೋಜಿಗವುಂಟಾಗುವದು. ೭೭

ಎಲ್ಲಿ ಯೋಗೇಶ್ವರ ಕೃಷ್ಣನೋ ಎತ್ತ ಧನುರ್ಧಾರಿ ಪಾರ್ಥನೋ ಅತ್ತ ಸಿರಿ, ವಿಜಯ, ವೈಭವ ಹಾಗೂ ನೀತಿಗಳು ನೆಲೆಯಾಗಿ ಇರುವವೆಂದು ನನ್ನ ದೃಢವಾದ ನಂಬಿಗೆಯು. ೭೮

ಶ್ರೀಮದ್ಭಗವದ್ಗೀತೆಯ ಸುಲಭ, ಸರಲ ಕನ್ನಡ ಭಾಷಾಂತರದ ೧೮ ನೆಯ ಅಧ್ಯಾಯವು ಸಮಾಪ್ತವು.



## ಕಠಿನ ಶಬ್ದಗಳ ಅರ್ಥವೂ ಟಿಪ್ಪಣಿಗಳೂ

# ಮೊದಲನೆಯ ಅಧ್ಯಾಯವು.

---

### ಶಬ್ದಾರ್ಥಗಳು.

---

(ಶಬ್ದಾರ್ಥಗಳು ಅಕ್ಷರಾನುಕ್ರಮದಿಂದ ಕೊಡಲಟ್ಟಿವೆ.)

**ಅಯನ—** ಸೈನ್ಯದ ಭಾಗಗಳಲ್ಲಿ ಸೇರುವ ಪ್ರವೇಶದ್ವಾರಗಳು, ವ್ಯೂಹಗಳ ಮುಖಗಳು.

**ಅಪರಾಜಿತ—** ಸೋಲಿಲ್ಲದ, ಸೋಲನ್ನರಿಯದ.

**ಅಪರ್ಯಾಪ್ತ—** ಅಪರಿಮಿತ, ಅಗಣಿತ. ಸಾಕಷ್ಟು ಇಲ್ಲದ ಅಥವಾ ದುರ್ಬಲವಾದ, ಎಂದು ಕೆಲವರು ಈ ಶಬ್ದದ ಅರ್ಥವನ್ನು ಮಾಡುವರು. ಆದರೆ ಪ್ರಚಂಡ ಧೈರ್ಯಶಾಲಿಯೂ ದುರಭಿಮಾನಿಯೂ ಆದ ದುರ್ಯೋಧನನು ತನ್ನ ಸೈನ್ಯವನ್ನು ಕುರಿತು ಹಾಗೆ ಅನ್ನುವದು ಅಶಕ್ಯವು ಎಂಬದನ್ನು ಎಲ್ಲರೂ ತಿಳಿದಿರಬೇಕು.

**ಆತತಾಯಿನ್—** ಮನೆಸುಡುವವರು, ವಿಷಹಾಕುವವರು, ಶಸ್ತ್ರದಿಂದ ಹೊಡೆಯಲುದ್ಯುಕ್ತರಾದವರು, ಸೂರೆಗಾರರು, ಹೆಣ್ಣು ಅಥವಾ ಹೊಲವನ್ನು ಅಪಹರಿಸುವವರು, ಆತತಾಯಿಗಳೆಂದು ವಸಿಷ್ಠಸ್ಮೃತಿಯಲ್ಲಿ ಹೇಳಿರುವರು.

**ಕುರುಕ್ಷೇತ್ರವು—** ಕುರುವಂಶದ ಅರಸರು ನೇಗಿಲಹೊಡೆಯುವ ಸ್ಥಾನವು. ಹಸ್ತಿನಾಪುರದ ಸುತ್ತಲಿನ ಬೈಲು.

**ಕೃಪೆ—** ಕಾರುಣ್ಯ, ದಯೆ.

**ಧರ್ಮಕ್ಷೇತ್ರವು—** ಪುಣ್ಯಭೂಮಿಯು, ಧರ್ಮಸಾಧನಕ್ಕೆ ಯೋಗ್ಯವಾದ ಸ್ಥಾನವು. ಹಸ್ತಿನಾಪುರದ—ಸಧ್ಯಕ್ಕೆ ದಿಲ್ಲೀನಗರದ—ಸುತ್ತಲಿನ ಭಾಗದಲ್ಲಿ ಕುರುರಾಜನು ಇರುತ್ತಿದ್ದನು. ಅಲ್ಲಿ ಸಾಯುವವರಿಗೂ ತಪವನ್ನಾಚರಿಸುವವರಿಗೂ ಸ್ವರ್ಗವು ಸಿಕ್ಕುವುದೆಂದು ಇಂದ್ರನ ವರವಿತ್ತು. ಆದುದರಿಂದ ಅದು ಪುಣ್ಯಭೂಮಿ ಎಂದೆನಿಸಿತು.

**ನಿದರ್ಶನಾರ್ಥವಾಗಿ**— ತೋರಿಸುವುದಕ್ಕಾಗಿ, ತೋರಿಸಿಕೊಡುವುದು ಕ್ಕಾಗಿ.

**ಪಿಂಡೋದಕ**— ಶ್ರಾದ್ಧಾದಿ ವಿಧಿಗಳಲ್ಲಿ ಪಿತೃಗಳ ಹೆಸರಿಸಿಂದ ಕೊಡತಕ್ಕ ಅನ್ನ ಮತ್ತು ಬಿಡತಕ್ಕ ನೀರು.

**ಮಹಾರಥಿಯು**— ಹತ್ತುಸಾವಿರ ಬಿಲ್ಲಾಳುಗಳನ್ನು ಒಬ್ಬನೇ ತಡೆದು ಹಿಡಿಯುವ ಶಸ್ತ್ರವಿದ್ಯಾವಿಶಾರದನು.

**ವರ್ಣಸಂಕರವು**— ವರ್ಣಗಳ ಅಶಾಸ್ತ್ರೀಯವಾದ ಮಿಶ್ರಣವು, ಮಿಶ್ರ ವಿವಾಹ ಭೋಜನಾದಿಗಳಾಗುವದು. ಜಾತಿನಿರ್ಬಂಧಗಳ ನಾಶವು.

**ವ್ಯೂಹರಚನೆ**— ಸೈನ್ಯವನ್ನು ವ್ಯವಸ್ಥೆಯಿಂದ ಭದ್ರವಾಗಿ ನಿಲ್ಲಿಸುವದು.

## ೧ನೆಯ ಅಧ್ಯಾಯ— ಟಿಪ್ಪಣಿಗಳು.

**ಆರಂಭವು**— ಕುರುಕುಲೋದ್ಭವರಾದ ಕುರು ಪಾಂಡವರ ಯುದ್ಧವೇ ಮಹಾಭಾರತದ ಮುಖ್ಯವಿಷಯವು. ಭೀಷ್ಮಪರ್ವದಲ್ಲಿ ಯುದ್ಧಾರಂಭ ದಲ್ಲಿ 'ನೀನು ಈ ಸಂಗ್ರಾಮವನ್ನು ನೋಡಲಿಚ್ಛಿಸಿದರೆ ನಿನಗೆ ದೃಷ್ಟಿಯನ್ನು ಕೊಡುವೆನು' ಎಂದು ಹುಟ್ಟುಗುರುಡನಾದ ಧೃತರಾಷ್ಟ್ರನಿಗೆ ವ್ಯಾಸ ಮುನಿಗಳು ಹೇಳಿದರು. 'ನಾನು ಈ ಜ್ಞಾತಿವಧವನ್ನು ಕಣ್ಣಾರೆ ನೋಡ ಲಾರೆ, ಯುದ್ಧದಲ್ಲಿ ಏನು ನಡೆಯುವದೆಂಬದನ್ನು ಕೇಳಿದರೆ ಸಾಕು' ಎಂದು ಧೃತರಾಷ್ಟ್ರನು ಅನ್ನಲಾಗಿ, ವ್ಯಾಸರು ಸಂಜಯನಿಗೆ ದಿವ್ಯದೃಷ್ಟಿಯನ್ನು ಕೊಟ್ಟು 'ಈತನು ನಿನಗೆ ಯುದ್ಧದ ಸಮಗ್ರ ಸಂಗತಿಯನ್ನು ಹೇಳುವನು' ಎಂದು ಆಶೀರ್ವದಿಸಿದರು. ಹೋಗುವಾಗ 'ಈ ಮಹಾ ಯುದ್ಧವನ್ನು ತಡೆಯುವದು ಅಶಕ್ಯವು; ಎತ್ತ ಧರ್ಮವೋ ಅತ್ತ ಜಯವಾಗುವದು' ಎಂದು ನುಡಿದು ಹೊರಟು ಹೋದರು. ಆ ಮೇಲೆ, 'ಕೌರವರೂ ಪಾಂಡ ವರೂ ಕೂಡಿ ಹಸ್ತಿನಾಪುರದ ಮಹಾ ರಣಕ್ಷೇತ್ರದಲ್ಲಿ ಏನು ಮಾಡಿದರು' ಎಂದು ಧೃತರಾಷ್ಟ್ರನು ಸಂಜಯನನ್ನು ಕೇಳಿದನು. ಅದೇ ಶ್ರೀಮದ್ಭಗವ ದ್ಗೀತೆಯ ಪ್ರಾರಂಭವು.

**ಗೀತೆಯ ಸಂಕಲ್ಪವು**— ಯಾವದೇ ಗ್ರಂಥದ ಕೊನೆಗೆ ಕೊಟ್ಟಿರುವ ಗ್ರಂಥದ ಹೆಸರು, ಗ್ರಂಥಕರ್ತನ ಹೆಸರು, ಗ್ರಂಥೋದ್ದೇಶ ಮುಂತಾದವು ಗಳೆಲ್ಲ ಕೂಡಿ ಸಂಕಲ್ಪವೆಂದೆನಿಸುವದು. 'ಇತಿ ಶ್ರೀಮದ್ಭಗವದ್ಗೀತಾ

ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ............' ಎಂಬುದು ಗೀತೆಯ ಸಂಕಲ್ಪವು. ಈ ಸಂಕಲ್ಪದಲ್ಲಿಯ ಪ್ರತಿಯೊಂದು ಶಬ್ದವು ಅರ್ಥಪೂರ್ಣವಿರುವದು. 'ಶ್ರೀಭಗವಂತನು ಸ್ವತಃ ಹೇಳಿದ ಹಾಡು. ಇದು ಸಾಮಾನ್ಯವಾದ ಹಾಡಲ್ಲ, ಇದು ಮೋಕ್ಷದಾಯಿಯಾದ ಕಾವ್ಯವು. ಇದರಲ್ಲಿ ತತ್ವವಿದ್ಯೆಯು, ಎಲ್ಲಕ್ಕೂ ಹೆಚ್ಚಿನ ಜ್ಞಾನವು ಹೇಳಲ್ಪಟ್ಟಿದೆ. ಆ ಜ್ಞಾನವನ್ನು ಮತ್ತು ಆ ಶ್ರೇಷ್ಠವಾದ ಜ್ಞಾನಿಗಳ ಸ್ಥಿತಿಯನ್ನು ಹೇಗೆ ದೊರಕಿಸಬೇಕೆಂಬ ಸಾಧನಮಾರ್ಗವಾದರೂ ಇಲ್ಲಿ ಹೇಳಿರುವುದು. ಇದೆಲ್ಲ ಶ್ರೀಕೃಷ್ಣಾರ್ಜುನರ ಸಂವಾದದ್ವಾರಾ ಹೇಳಲಾಗಿದೆ' ಎಂದು ಇದರ ತಾತ್ಪರ್ಯವಿರುವದು.

**ಯೋಗ**— ಯೋಗವೆಂಬ ಶಬ್ದಕ್ಕೆ ಗೀತೆಯಲ್ಲಿ ಅನೇಕಾರ್ಥಗಳಿರುವವು. ಎಲ್ಲ ಕಡೆಗೂ ಒಂದೇ ಅರ್ಥವಿರುವದೆಂದು ತಿಳಿಯುವದು ತಪ್ಪು. ಸಂದರ್ಭ ನೋಡಿ ಅರ್ಥವನ್ನು ಹಚ್ಚುವದೇ ಜಾಣತನವು. ಯೋಗ ಇದರ ಅರ್ಥಗಳು (೧) ಮೋಕ್ಷವು, ಬ್ರಹ್ಮಸಾಯುಜ್ಯವು, (೨) ಮೋಕ್ಷಮಾರ್ಗವು, (೩) ಸಮಾಧಿ ಸ್ಥಿತಿಯು, (೪) ಧ್ಯಾನವು (೫) ಪಾತಂಜಲ ಯೋಗವು, (೬) ಕರ್ಮಯೋಗವು, (೭) ಇಲ್ಲದುದನ್ನು ದೊರಕಿಸುವದು, (೮) ಸೃಷ್ಟಿಯನ್ನು ಹುಟ್ಟಿಸುವ ಮತ್ತು ನಾಶಿಸುವ ಶಕ್ತಿಯು, (೯) ಯುಕ್ತಿಯು, (೧೦) ಜ್ಞಾನವು, (೧೧) ಸಮತ್ವವು, ಹೀಗೆ ಇರುವವು. ಆದರೆ ಪ್ರಾಧಾನ್ಯವಾಗಿ ಗೀತೆಯಲ್ಲಿ ಬಹಳ ಕಡೆಗೆ ಯೋಗವೆಂದರೆ ಕರ್ಮಯೋಗವೆಂದೇ ಅರ್ಥವಿರುವದು.



# ಎರಡನೆಯ ಅಧ್ಯಾಯವು.

---

## ಶಬ್ದಾರ್ಥಗಳು.

**ಅನಾರ್ಯಜುಷ್ಟ**— ಆರ್ಯರಲ್ಲದವರು ಅಂದರೆ ಹೀನಜನರು ಆಚರಿಸುವಂತಹದು. ಆರ್ಯರು ಅಂದರೆ ಶ್ರೇಷ್ಠರು, ಯೋಗ್ಯರು.

**ಕಿಂಕರ್ತವ್ಯಮೂಢನಾಗು**— ಏನು ಮಾಡಬೇಕು ಏನು ಬಿಡಬೇಕು ಇದು ತಿಳಿಯದಂತಾಗುವದು.

**ದ್ವಂದ್ವ**— ಸುಖದುಃಖ, ಲಾಭಾಲಾಭ, ಜಯಾಜಯ, ಶೀತೋಷ್ಣ ಇವೇ ಮುಂತಾದವುಗಳು. ಪರಸ್ಪರ ವಿರುದ್ಧವಾಗಿ ಎರಡು ಪದಾರ್ಥಗಳಿರುವುದರಿಂದ ಅವು ದ್ವಂದ್ವವೆನಿಸುವವು.

**ಬುದ್ಧಿಯೋಗ**— ಬುದ್ಧಿಯ ಸಮಾವಸ್ಥೆ—ಸಮಸ್ಥಿತಿ, ದ್ವಂದ್ವಗಳಿಂದ ಚಲಿಸದೇ ಇರುವ ಸ್ಥಿತಿ.

**ಬ್ರಹ್ಮನಿರ್ವಾಣ**— ಸಾಯುಜ್ಯ ಮುಕ್ತಿಯು, ಬ್ರಹ್ಮನಲ್ಲಿ—ಪರಮಾತ್ಮನಲ್ಲಿ ಸಾಯುಜ್ಯವು, ಒಂದಾಗೋಣವು.

**ಬ್ರಾಹ್ಮೀ ಸ್ಥಿತಿಯು**— ನಿಷ್ಕಾಮ ಮತ್ತು ನಿರ್ಮಮನಾಗಿ ಬ್ರಹ್ಮನಲ್ಲಿ ಚಿತ್ತವನ್ನು ಸ್ಥಿರವಿಡುವದು.

**ಭಾವ, ಅಭಾವ**— ಇರುವಿಕೆ, ಇಲ್ಲದಿರುವಿಕೆ. ಇದ್ದ ಪದಾರ್ಥಗಳು ಪಲ್ಲಟಿಸಿ ಬೇರೆ ರೂಪಗಳನ್ನು ತಾಳುವವು, ಆದರೆ ಅವುಗಳಿಗೆ ಸಂಪೂರ್ಣ ನಾಶವಿಲ್ಲ. ಹೀಗೆ ಯಾವದೇ ರೂಪದಲ್ಲಿ ಇರುವಿಕೆಯು ಭಾವವು. ಯಾವ ರೂಪದಲ್ಲಿಯೂ ಇಲ್ಲದ ವಸ್ತುಗಳು ಹೊಸದಾಗಿ ಎಂದಿಗೂ ಹುಟ್ಟಲಾರವು. ಅದೇ ಅಭಾವವು.

**ಮಾತ್ರಾಸ್ಪರ್ಶವು**— ಇಂದ್ರಿಯಗಳ ಸ್ಪರ್ಶವು, ಅಂದರೆ ವಿಷಯಗಳ ಕೂಡ ಆಗುವ ಇಂದ್ರಿಯಗಳ ಸಂಯೋಗವು.

**ಯೋಗಕ್ಷೇಮ**— ಇಲ್ಲದುದನ್ನು ದೊರಕಿಸುವದು ಯೋಗವು, ಇದ್ದುದನ್ನು ರಕ್ಷಿಸುವುದು ಕ್ಷೇಮವು. ಇವೆರಡೂ ಸಂಸಾರಕ್ಕೆ ಅವಶ್ಯವಾದವುಗಳು. ಇವುಗಳ ಬಂಧನದಲ್ಲಿ ಬೀಳಬೇಡವೆಂದು ಕೃಷ್ಣನು ಹೇಳುವನು.

**ರಸವು**— ವಿಷಯಗಳಲ್ಲಿಯ ಇಂದ್ರಿಯಗಳನ್ನು ಆಕರ್ಷಿಸುವ ಶಕ್ತಿ. ರುಚಿ.

**ವಿಷಮ**— ಕಠಿಣ ಸಮಯವು, ಸಂಕಟ ಪ್ರಸಂಗವು.

**ವೇದವಾದರತರು**— ವೇದದಲ್ಲಿಯ ಕರ್ಮಕಾಂಡದಿಂದಲೂ ಕರ್ಮಗಳ ಫಲಶ್ರುತಿಯಿಂದಲೂ ಮೋಹಿತರಾದವರು.

**ವ್ಯವಸಾಯಾತ್ಮಿಕೆ ಬುದ್ಧಿ**— ಇದಕ್ಕೆ ನಿಶ್ಚಯಾತ್ಮಿಕಾ ಬುದ್ಧಿ ಎಂದೆನ್ನುವರು. ಇದನ್ನು ಮಾಡಬೇಕು ಇದನ್ನು ಮಾಡಬಾರದು ಎಂಬದನ್ನು ನಿರ್ಣಯಿಸುವ ಬುದ್ಧಿಯು.

**ಶ್ರೇಯಸ್ಸು**— ಕಲ್ಯಾಣವು, ಒಳಿತು, ಹಿತವು. ಇದು ಪಾರಮಾರ್ಥಿಕ, ಪಾರಲೌಕಿಕ ಅಥವಾ ಆಂತರಿಕ ಹಿತವೆಂದೇ ಅರ್ಥವು. ತದ್ವಿರುದ್ಧವಾಗಿ ಪ್ರೇಯಸ್ಸು ಅಂದರೆ ವಿಷಯಸುಖವು, ಇಂದ್ರಿಯಾರಾಮವು.

**ಸಮಾಧಿ**— ಏಕಾಗ್ರವಾದ ಸರ್ವಚಿಚ್ಛಕ್ತಿಗಳ ಲಯವು, ಪರಮಾತ್ಮನಲ್ಲಿ ತಲ್ಲೀನತೆಯು.

**ಸ್ಥಿತಪ್ರಜ್ಞ, ಸ್ಥಿತಧೀ**— ಸ್ಥಿರಬುದ್ಧಿಯುಳ್ಳವನು, ಅತ್ತಿತ್ತ ಹರಿದಾಡದಂತೆ ಮನಸ್ಸನ್ನು ಕಟ್ಟಿದವನು.

## ೨ನೆಯ ಅಧ್ಯಾಯ—ಟಿಪ್ಪಣಿಗಳು.

**ಸಾಂಖ್ಯ ಮತ್ತು ಯೋಗ**— ಇಲ್ಲಿ 'ಸಾಂಖ್ಯ' ವೆಂದರೆ ಜ್ಞಾನಯೋಗವು. 'ಯೋಗ' ವೆಂದರೆ ಕರ್ಮಯೋಗವು. ಆತ್ಮನು ಅವಿನಾಶಿಯು ಮತ್ತು ದೇಹವು ವಿನಾಶಿಯು ಎಂಬದನ್ನು ತಿಳಿದು ಸುಖದುಃಖಗಳೂ ಲಾಭಾಲಾಭಗಳೂ ಸಮವೆಂದು ಭಾವಿಸಿ ನಿನ್ನ ಧರ್ಮದಂತೆ ಯುದ್ಧ ಮಾಡು, ಎಂದು ಕೃಷ್ಣನು ಹೇಳಿದ ಉಪದೇಶವು ಸಾಂಖ್ಯ ಅಥವಾ ಜ್ಞಾನಯೋಗವನ್ನನುಸರಿಸಿರುವದು. ಇದರ ಮುಂದೆ ಹೇಳಿದ ಯೋಗವು ಕರ್ಮಯೋಗವು, ಕರ್ಮಬಂಧನದಿಂದ ಅಲಿಪ್ತವಿರುವ ಯುಕ್ತಿಯನ್ನುಪದೇಶಿಸುವದು. ಆದಷ್ಟು ಕರ್ಮದ ಗೊಂದಲದಲ್ಲಿ ಬೀಳದೆ ಯಾವಾಗಲೂ ಜ್ಞಾನರತವಿರುವದು ಜ್ಞಾನಯೋಗಿಗಳ ಧ್ಯೇಯವು. ಆದರೆ ಕರ್ಮದ ಗೊಂದಲಕ್ಕೆ ಅಂಜದೆ ಅದನ್ನೇ ಆಧ್ಯಾತ್ಮಿಕ ಸಾಧನಮಾಡಿಕೊಂಡು ಅಲಿಪ್ತವಿದ್ದು ಸ್ವಧರ್ಮದಂತೆ ಶ್ರೇಷ್ಠಕರ್ಮಗಳನ್ನು ಮಾಡುತ್ತಲೇ ಇರುವದು ಕರ್ಮಯೋಗವು. ಬುದ್ಧಿಯೋಗವು ಅಂದರೆ ಬುದ್ಧಿಯನ್ನು ಸಮಸ್ಥಿತಿಯಲ್ಲಿಡುವದು ಕರ್ಮಯೋಗದ ಒಂದು ಅಂಗವು.

**ತ್ರೈಗುಣ್ಯವಿಷಯಾವೇದಾಃ**— ವೇದದಲ್ಲಿಯ ಕರ್ಮಕಾಂಡವು ಸತ್ವ

ರಜ ತಮವೆಂಬ ಮೂರು ಗುಣಗಳನ್ನು ದಾಟಿಲ್ಲ. ಆದುದರಿಂದ ನೀನು ಭೋಗಾದಿಗಳ ಇಚ್ಛೆಯಿಂದ ಶ್ರೌತಸ್ಮಾರ್ತ ಕರ್ಮಕಾಂಡದ ಬೆನ್ನುಹತ್ತದೆ ನಿಷ್ಕಾಮನಾಗು, ತ್ರಿಗುಣಾತೀತನಾಗು, ಎಂದು ಕೃಷ್ಣನ ಉಪದೇಶವಿರು ವದು. ಕರ್ಮಗಳನ್ನು ಬಿಡು ಎಂದು ಹೇಳುವದಕ್ಕಿಂತಲೂ ಇಲ್ಲಿ ಕಾಮ್ಯ ಬುದ್ಧಿಯನ್ನು ಬಿಡು ಎಂದು ಹೇಳುವುದೇ ಕೃಷ್ಣನ ಉದ್ದೇಶವಿರುವದು.

**ಯಾ ನಿಶಾ ಸರ್ವಭೂತಾನಾಂ—** ಯಾರಿಗೂ ಕಾಣದ ಪರತತ್ವವನ್ನು ಯೋಗಿಯು ಕಂಡವನಾದುದರಿಂದಲೂ ಎಲ್ಲರೂ ಇದೇ ಶ್ರೇಷ್ಠವೆಂದು ಭಾವಿಸುವ ಬಾಹ್ಯ ಜಗತ್ತನ್ನು ಕಃಪದಾರ್ಥವೆಂದು ಎಣಿಸುತ್ತಿರುವದ ರಿಂದಲೂ ಎಲ್ಲರಿಗೂ ಕತ್ತಲೆಯಂತಿರುವ ಪರತತ್ವವು ಅವನಿಗೆ ಬೆಳಕಿನಂತೆ ನಿಚ್ಚಳವಾಗಿರುವದು, ಎಲ್ಲರಿಗೂ ಬೆಳಕಿನಂತಿರುವ ಈ ವಿಶ್ವವು ಅವನಿಗೆ ಮಸಕುಮಸಕಾಗಿ ಕತ್ತಲೆಯಂತಿರುವುದು.

**ಉಪದೇಶದ ರೀತಿಯು—** ಮೊದಲನೆಯ ಅಧ್ಯಾಯದಲ್ಲಿ ಅರ್ಜುನನು ವಿಷಣ್ಣನಾಗಿ ಕುಳಿತನೆಂದು ವರ್ಣನೆಯಿರುವದು. ಅವನ ವಿಷಣ್ಣತೆ ಯನ್ನು ಕಳೆದು, ಆ ವಿಷಣ್ಣತೆಗೆ ಕಾರಣವಾದ ಅವನ ಮನಸಿನಲ್ಲಿಯ ಕಲ್ಪ ನೆಗಳನ್ನು ಕಿತ್ತಿಹಾಕಿ, ಶ್ರೇಷ್ಠವಾದ ನಿಷ್ಕಾಮಕರ್ಮಕ್ಕೆ ಅವನನ್ನು ಎಳೆದು ಹಚ್ಚುವದೇ ಶ್ರೀಕೃಷ್ಣನ ಉದ್ದೇಶವಾಗಿತ್ತು. ಅದನ್ನು ಮಾಡು ವಾಗ ಅರ್ಜುನನ ಮನಸ್ಸಿನಲ್ಲಿ ಹುಟ್ಟಿದ ಅನೇಕ ಸಂಶಯಾದಿಗಳನ್ನು ಖಂಡಿಸಿ ಅವುಗಳಿಗೆ ಸಮಾಧಾನ ಹೇಳಿ ಅವನನ್ನು ಮನಗಾಣಿಸಬೇಕಾ ಯಿತು. ಕೃಷ್ಣನ ಉಪದೇಶದ ರೀತಿಯು ಆ ತರಹದ್ದಿರುವುದು. ‘ ಏನು ಮಾಡಿದರೂ ಯುದ್ಧ ಮಾಡುವದು ನಿನಗೆ ಬಿಟ್ಟದ್ದಲ್ಲ. ಆ ಕರ್ಮದಿಂದ ಲಿಪ್ತನಾಗದಂತೆಯೂ ಆ ಕರ್ಮ ಮಾಡುವಾಗ ಸಹ ಅತ್ಯಂತ ಶಾಂತಿಯು ನೆಲೆಸುವಂತೆಯೂ ನೀನು ಯುದ್ಧಮಾಡು. ಆ ಬಗೆಯ ಆಧ್ಯಾತ್ಮಿಕ ಜ್ಞಾನವನ್ನು ನಿನಗೆ ಹೇಳುವೆನು ’ ಎಂದು ಶ್ರೀಕೃಷ್ಣನು ಅವನ ಮನವನ್ನು ಒಲಿಸಿರುವನು. ಈ ರೀತಿ ಆಧ್ಯಾತ್ಮಿಕ ಜೀವನದ ತಿರುಳನ್ನು ತಿಳಿಸಿ ಆ ಜ್ಞಾನದಿಂದ ಮಾನವೀ ಜೀವನವು ತೇಜಸ್ವಿಯೂ ಆನಂದಮಯವೂ ಆಗುವಂತೆ ಮಾಡುವದೇ ಶ್ರೀಕೃಷ್ಣನ ಉದ್ದೇಶವು.

---

# ಮೂರನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಅರ್ಥವ್ಯಪಾಶ್ರಯವು—** ಪುರುಷಾರ್ಥಕ್ಕಾಗಿ ಅಥವಾ ಇಷ್ಟಾರ್ಥಕ್ಕಾಗಿ ಪರಾವಲಂಬನವು. ತನಗೆ ಬೇಕಾದುದನ್ನು ದೊರಕಿಸುವದಕ್ಕಾಗಿ ಎರಡನೆಯವರ ಅವಶ್ಯಕತೆ.

**ಅನಸೂಯೆ—** ದೋಷದೃಷ್ಟಿ ಇಲ್ಲದಿರುವಿಕೆ, ತದ್ವಿರುದ್ಧ ಅಸೂಯೆ ಅಂದರೆ ದೋಷೈಕದೃಷ್ಟಿ.

**ಅಕ್ಷರ—** ಅವ್ಯಕ್ತ ಪರಮಾತ್ಮನು, ಪುರುಷೋತ್ತಮನು.

**ಇಂದ್ರಿಯಾಣಿ ಪರಾಣಿ—** ಮೊದಲು ವಿಷಯಗಳು ಗೋಚರವಾಗುವವು. ಜ್ಞಾನೇಂದ್ರಿಯಗಳು ಅವುಗಳನ್ನು ತಿಳಿದುಕೊಳ್ಳುವವು. ಆದುದರಿಂದ ಅವು ವಿಷಯಗಳಿಗಿಂತ ಹೆಚ್ಚಿನವು. ಹೀಗೆ ಏರುತ್ತೇರುತ್ತ ಬುದ್ಧಿಯ ಆಚೆಗೆ ಅತೀಂದ್ರಿಯವಿದ್ದ ಆತ್ಮವೇ ಶ್ರೇಷ್ಠವೆಂದು ಅರ್ಥವು.

**ಕಾರ್ಯಂ ಕರ್ಮ—** ಮಾಡತಕ್ಕ ಕಾರ್ಯವು, ಕರ್ತವ್ಯಕರ್ಮವು.

**ಚಕ್ರ—** ಸೃಷ್ಟಿಯ ಗಾಲಿಯು ಅಥವಾ ಸಂಸಾರಚಕ್ರವು. ಯಾವಾಗಲೂ ತಿರುಗುತ್ತಿರುವುದರಿಂದ ಇದು ಚಕ್ರವೆನಿಸುವದು.

**ಗುಣ—** ಸಮಾವಸ್ಥೆಯಲ್ಲಿದ್ದ ವಿಶ್ವಶಕ್ತಿಗಳಲ್ಲಿ ಚಲನವಲನವು ಪ್ರಾರಂಭವಾಗಿ ಸೃಷ್ಟಿಯಾಗಬೇಕಾದರೆ ಸತ್ವ ರಜ ತಮ ಎಂಬ ಗುಣಗಳ ಅವಶ್ಯಕತೆ ಇರುವದು. ಅವು ಒಂದೇ ಪ್ರಕೃತಿಯ ವಿಶೇಷಣಗಳಿದ್ದರೂ ಅವುಗಳ ಕಾರ್ಯಗಳು ಭಿನ್ನಭಿನ್ನವಾದವುಗಳಿರುವವು. ಎಲ್ಲ ಆಟವು ಆ ಗುಣಗಳದೇ.

**ದೇವತೆ—** ನಿಸರ್ಗಶಕ್ತಿಗಳಲ್ಲಿ ಅಧಿಷ್ಠಿತವಿರುವವೆಂದು ಕಲ್ಪಿಸಲ್ಪಟ್ಟ ಸಗುಣ ವ್ಯಕ್ತಿವಿಶೇಷಗಳು.

**ನಿಗ್ರಹ—** ಬಲಾತ್ಕಾರವು, ಹಟವು.

**ನಿಷ್ಠೆ—** ನಂಬಿಗೆಯ ಮಾರ್ಗವು, ಧ್ಯೇಯವನ್ನು ಸಾಧಿಸುವ ಪಂಥವು. (ಇದಕ್ಕೆ ಬೇರೆ ಸಂದರ್ಭಗಳಲ್ಲಿ ಅಂತಿಮಸ್ಥಿತಿ, ಭಕ್ತಿ, ದೃಢಸಂಕಲ್ಪ ಎಂಬ ಅರ್ಥಗಳಿರುವವು.)

**ನೈಷ್ಕರ್ಮ್ಯವು**— ಕರ್ಮಮಾಡಿ ಆದರಿಂದ ಅಲಿಪ್ತವಿರುವ ಚಿತ್-ಸ್ಥಿತಿಯು. ಇದಕ್ಕೆ ಮನುಸ್ಮೃತಿಯಲ್ಲಿ ಹೇಳಿದ 'ನಿವೃತ್ತ ಕರ್ಮ' ವೆಂದೂ ಅನ್ನಬಹುದು.

**ಪ್ರಕೃತಿ**— ನಿಯಮದಿಂದ ನಡೆಯುವ ಈ ವಿಶ್ವವೆಲ್ಲ 'ಪ್ರಕೃತಿ' ಯೆನಿಸುವದು. ಇದನ್ನನುಭವಿಸುವವನು ಪುರುಷನು. ಪ್ರಕೃತಿಯು ತನ್ನ ತ್ರಿಗುಣಗಳದ್ವಾರಾ ಕರ್ಮಮಾಡುವದು. ಇದು ಒಂದು ಅರ್ಥವು. ಸ್ವಭಾವವೆಂಬುದು ಎರಡನೆಯ ಅರ್ಥವು.

**ಬ್ರಹ್ಮ**— ವ್ಯಕ್ತಸೃಷ್ಟಿಯು. ಸಾಂಖ್ಯರು ಇದಕ್ಕೆಯೇ ಪ್ರಕೃತಿಯೆನ್ನುವರು. ಬ್ರಹ್ಮ ಶಬ್ದಕ್ಕೆ ಅನೇಕಾರ್ಥಗಳಿರುವವು. ಇದು ಇಲ್ಲಿಯ ಅರ್ಥವು.

**ಬುದ್ಧಿಭೇದವು**— ಬುದ್ಧಿಯ ಚಂಚಲತೆಯು, ಸಂಶಯವೃತ್ತಿಯು.

**ರಾಗದ್ವೇಷ**— ಪ್ರೀತಿ ದ್ವೇಷಗಳು, ರುಚಿ ಅರುಚಿಗಳು.

**ಲೋಕಸಂಗ್ರಹವು**— ಲೋಕಗಳನ್ನು ಸುಸಂಘಟಿತವಾಗಿ ನಡೆಸುವದು.

**ಸಂಸಿದ್ಧಿ**— ಸಿದ್ಧಿ, ಅಂತಿಮ ಧ್ಯೇಯಪ್ರಾಪ್ತಿ, ಪರಮಗತಿ.

**ಜ್ಞಾನ ವಿಜ್ಞಾನ**— ಅಧ್ಯಾತ್ಮಜ್ಞಾನವೂ ವಸ್ತುಗಳ ವಿಶಿಷ್ಟಜ್ಞಾನವೂ.

## ೩ನೆಯ ಅಧ್ಯಾಯ— ಟಿಪ್ಪಣಿಗಳು.

**ಯಜ್ಞ**— ಮೊದಲು 'ದೇವತೆಗಳಿಗೆ ಆಹುತಿಗಳನ್ನರ್ಪಿಸುವದು' ಇಷ್ಟೇ ಈ ಶಬ್ದದ ಅರ್ಥವಿತ್ತು. ಮುಂದೆ ಯೋಗರೂಢಿಯಿಂದಲೂ ಅರ್ಥವಿಕಾಸದಿಂದಲೂ ಇದಕ್ಕೆ ಅನೇಕಾರ್ಥಗಳಾದವು. ಆದರೂ ಆ ಎಲ್ಲ ಅರ್ಥಗಳಲ್ಲಿಯೂ ಒಂದು ಸಾಮಾನ್ಯ ಸೂತ್ರವಿರುವದು. ಅದೇನೆಂದರೆ, ಹೀನ ವಸ್ತುಗಳನ್ನು ಶ್ರೇಷ್ಠವಾದ ವಸ್ತುಗಳಿಗಾಗಿ ತ್ಯಜಿಸುವದು; ಇದು ಎಲ್ಲ ಯಜ್ಞಗಳಲ್ಲಿಯೂ ಆಗುವ ಸಾಮಾನ್ಯ ಕ್ರಿಯೆಯು. ವಿಶ್ವದಲ್ಲಿ ಅನೇಕ ವಸ್ತುಗಳ ನಾಶವು ನಡೆದಿರುವದು. ಆದರೆ ಅಷ್ಟೇ ಹೊಸ ವಸ್ತುಗಳ, ಶ್ರೇಷ್ಠ ವಸ್ತುಗಳ ಸೃಷ್ಟಿಯು ನಡೆದಿರುವದು. ಈ ಪ್ರಚಂಡವಾದ ಯಜ್ಞದಲ್ಲಿ ನಾವು ಭಾಗಿಗಳಾಗಲಿಕ್ಕೆ ಬೇಕೆಂದೂ ಕ್ರಿಯೆಗಳನ್ನು ಯಜ್ಞವೆಂದು ಮಾಡಿದರೆ ಬಂಧನವಿಲ್ಲೆಂದೂ ಮುಕ್ತಸಂಗರಾಗಿ ಅವುಗಳನ್ನು ಮಾಡಿಯೇ ತೀರಬೇಕೆಂದೂ ಶ್ರೀಕೃಷ್ಣನು ಹೇಳಿರುವನು.

**ಎರಡು ನಿಷ್ಠೆಗಳು**— ಸಾಂಖ್ಯ ಮತ್ತು ಯೋಗನಿಷ್ಠೆಗಳ ಅಥವಾ ಜ್ಞಾನ ಮತ್ತು ಕರ್ಮಮಾರ್ಗಗಳ ನಿರ್ದೇಶವು ೨ನೆಯ ಅಧ್ಯಾಯದಲ್ಲಿಯೇ

ಆಗಿದೆ. ಇಲ್ಲಿ ಅದು ಹೆಚ್ಚು ಸ್ಪಷ್ಟವಿರುವದು. ಕರ್ಮವು ಬಿಟ್ಟದ್ದಲ್ಲ. ಅಂದಮೇಲೆ ಅದನ್ನು ಬಂಧಕವಾಗದಿರುವಂತೆ ಮಾಡುವದಷ್ಟೇ ನಮ್ಮ ಕೈಯಲ್ಲಿರುವುದು. ಈ ಸೃಷ್ಟಿಚಕ್ರವು ಸಾಗಬೇಕೆಂದು, ಲೋಕಸಂಗ್ರಹವಾಗಬೇಕೆಂದು ಮೂಢರಲ್ಲಿ ಬುದ್ಧಿಭೇದವಾಗಬಾರದೆಂದು ಜ್ಞಾನಿಗಳು ತಮ್ಮ ವೈಯ್ಯಕ್ತಿಕ ಇಷ್ಟಾರ್ಥವೇನೂ ಇಲ್ಲದಿದ್ದರೂ ನಿಷ್ಕಾಮರಾಗಿ ಕರ್ಮಮಾಡಬೇಕೆಂದು ಇಲ್ಲಿ ಉಪದೇಶವಿರುವದು. ಇದೇ ಜ್ಞಾನಕರ್ಮಗಳ ಸಮನ್ವಯವು.

**ಸದೃಶಂ ಚೇಷ್ಟತೇ—** ಜ್ಞಾನವಂತನು ಸಹ ಪ್ರಕೃತಿಗುಣದಂತೆ ನಡೆಯಬೇಕಾಗುವದು. ಅಂದಮೇಲೆ ನಿಸರ್ಗವು, ಸ್ವಭಾವವು ಎಲ್ಲಕ್ಕೂ ಬಲವತ್ತರವೆಂದು ಅರ್ಥವಾಯಿತು. ಹೀಗೆ ಸ್ವಭಾವವು ಸರ್ವಶಕ್ತಿವಾನ್ ಇದ್ದರೂ ನಾವು ರಾಗದ್ವೇಷಗಳನ್ನು ಬಿಟ್ಟು ಅಲಿಪ್ತವಾಗಬೇಕೆಂಬ ಉಪಾಯವನ್ನು ಶ್ರೀಕೃಷ್ಣನು ಸೂಚಿಸಿರುವನು. ಪ್ರಕೃತಿಯನ್ನು ಗೆಲ್ಲಲಿಕ್ಕೆ ಇದೊಂದೇ ಉಪಾಯವು. ನಾವು ಅಲಿಪ್ತರಿದ್ದು ಸಾಕ್ಷಿಯಾಗಿ ವರ್ತಿಸಬೇಕು. ಅಂದರೆ ನಿಜಶಾಂತಿಯುಳಿಯುವದು. ಅದೇ ಸ್ಥಿರಸುಖವು.

**ಸ್ವಧರ್ಮ—** ಯಾವ ತಾಯಿತಂದೆಗಳಿಂದ ಹುಟ್ಟಿರುವೆವೋ ಅವರ ಧರ್ಮವು, ಜಾತಿಧರ್ಮವು. ಇದು ಸಂಕುಚಿತ ಅರ್ಥವು. 'ನಮ್ಮ ಜೀವನಗುಣಕ್ಕನುಸರಿಸಿರುವ ಪ್ರಗತಿಯ ಮಾರ್ಗವು' ಎಂಬುದು ಎರಡನೆಯ ಅರ್ಥವು. ಎರಡನೆಯ ಅರ್ಥವೇ ಇಲ್ಲಿ ಹೆಚ್ಚು ಸಮಂಜಸವು.

---

# ನಾಲ್ಕನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಅಕರ್ಮ—** ಕರ್ಮ ಮಾಡದಿರೋಣ, ವಿಕರ್ಮವೆಂದರೆ ನಿಷಿದ್ಧಕರ್ಮ.
**ಅಧಿಷ್ಠಾಯ—** ಅದೇ ಒಂದು ಸ್ಥಾನವೆಂದು ತಿಳಿದು, ಅದನ್ನು ಆಶ್ರಯಿಸಿ.
**ಮಾಯಾ—** ಪರಮಾತ್ಮನ ಸೃಷ್ಟಿನಿರ್ಮಾಣಶಕ್ತಿಯು, ಯೋಗಶಕ್ತಿಯು.
**ಮುಮುಕ್ಷು—** ಮೋಕ್ಷವನ್ನು ಪಡೆಯಲಿಚ್ಛಿಸುವವನು.

**ಯಜ್ಞ**— ಇಲ್ಲಿ ಯಜ್ಞ ಶಬ್ದವು ಲಕ್ಷಣಾರ್ಥದಲ್ಲಿ ಉಪಯೋಗಿಸಲ್ಪಟ್ಟದೆ. ೩ನೆಯ ಅಧ್ಯಾಯದ ಟಿಪ್ಪಣಿಗಳನ್ನು ನೋಡಬೇಕು.

**ಸ್ವಾಧ್ಯಾಯ**—ಪರಂಪರೆಯಿಂದ ಅಭ್ಯಾಸಕ್ಕಾಗಿ ನೇಮಿಸಿದ ವೇದಭಾಗವು.

## ೪ನೆಯ ಅಧ್ಯಾಯ—ಟಿಪ್ಪಣಿಗಳು.

**ಪ್ರಕೃತಿಂ ಸ್ವಾಮಧಿಷ್ಠಾಯ**— ಪರಮಾತ್ಮನು ಅವತಾರಗಳನ್ನು ಹೇಗೆ ಮತ್ತು ಯಾಕೆ ತಾಳುವನೆಂಬುದನ್ನು ಶ್ರೀಕೃಷ್ಣನು ಇಲ್ಲಿ ಹೇಳುವನು. 'ಇದುವರೆಗೆ ಅನೇಕ ಅವತಾರಗಳನ್ನು ತಾಳಿರುವೆನು. ನನ್ನ ಪ್ರಕೃತಿಯನ್ನೇ ಅಂದರೆ ವ್ಯಕ್ತಸೃಷ್ಟಿಯನ್ನೇ ಅಧಿಷ್ಠಾನ ಮಾಡಿಕೊಂಡು ಅಂದರೆ ಅದನ್ನೇ ಆಶ್ರಯಿಸಿ ತದ್ವಾರಾ ನನ್ನ ಸೃಷ್ಟಿನಿರ್ಮಾಣಶಕ್ತಿಯಿಂದ ಧರ್ಮಸ್ಥಾಪನೆಗಾಗಿ ಜನ್ಮವನ್ನು ತಾಳುವೆನು,' ಎಂದು ಪರಮಾತ್ಮನ ವಚನವಿರುವದು.

**ಮದ್ಭಾವಮಾಗತಾಃ**— ನನ್ನ 'ಭಾವ' ವನ್ನು ಹೊಂದಿರುವರು, ಅಂದರೆ ನನ್ನಲ್ಲಿ ಸಾಯುಜ್ಯವನ್ನು ಹೊಂದಿರುವರು.

**ತಸ್ಯಕರ್ತಾರಮಪಿ ಮಾಂ**— ಪರಮಾತ್ಮನು ಕರ್ತೃನಿದ್ದು ಅಕರ್ತನು. ಯಾಕಂದರೆ ಅವನು ಸ್ವತಂತ್ರನು ಮತ್ತು ಕರ್ಮದಿಂದ ಅಲಿಪ್ತನು. ಕರ್ತೃತ್ವದ ಯಾವದೇ ಬಂಧನವಿಲ್ಲದ್ದರಿಂದ ಅವನು ಅಕರ್ತನೆನಿಸುವನು.

**ಕರ್ಮಣ್ಯಕರ್ಮ**— ಕರ್ಮವು ಯಾರಿಗೂ ಬಿಟ್ಟದ್ದಲ್ಲ. ಅಂದಮೇಲೆ ಸಂಪೂರ್ಣ 'ಅಕರ್ಮವು' ಅಸಾಧ್ಯವು. ಇದನ್ನು ತಿಳಿದುಕೊಳ್ಳುವದೆಂದರೇ 'ಅಕರ್ಮಣಿ ಚ ಕರ್ಮ' ಎಂಬುದನ್ನು ತಿಳಿದುಕೊಳ್ಳುವದು. ಇನ್ನು ಫಲಾಶೆಬಿಟ್ಟು ಕರ್ಮ ಮಾಡಿದರೆ ಕರ್ಮಬಂಧನವೇ ಇಲ್ಲ. ಅದೇ ನಿಜವಾದ 'ಅಕರ್ಮ' ಅದೇ 'ಕರ್ಮಣ್ಯಕರ್ಮ'ವು.

**ಬ್ರಹ್ಮಕರ್ಮಸಮಾಧಿ**— ಬ್ರಹ್ಮಾರ್ಪಣ ಬುದ್ಧಿಯಿಂದ ಮಾಡುತ್ತಿರುವ ಕರ್ಮದಲ್ಲಿ ಸಂಪೂರ್ಣ ಚಿತ್ತಲಯವಾಗುವದೇ ಈ ಬ್ರಹ್ಮಕರ್ಮಸಮಾಧಿಯು; ಕರ್ಮದಲ್ಲಿ ಕೂಡ ಚಿತ್ತಲಯವು ಶಕ್ಯವೆಂಬುದನ್ನು ಇಲ್ಲಿ ಗೀತೆಯು ಹೇಳುವದು.

**ನಾಯಂಲೋಕೋಽಸ್ತಿ**- ಈ ಲೋಕದ ವಿಚಾರ ಮಾಡದೇ ಪರಲೋಕವನ್ನು ಗೆದೆಯಲಿಕ್ಕೆ ಹೋಗುವ ಮೂರ್ಖರಿಗೆ ಇದು ಅಂಜನವು. ಈ

ಲೋಕವನ್ನು ಗೆದ್ದೇ ಮುಂದಿನ ವಿಚಾರವು. ಯಾವ ತರದ್ದೇ ಆಗಲಿ, ಯಜ್ಞವು ಅವಶ್ಯವೆಂದು ಗೀತೆಯ ಅಭಿಪ್ರಾಯವು.

---

# ಐದನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ನಿರ್ದ್ವಂದ್ವ**— ಸುಖದುಃಖ, ಶೀತೋಷ್ಣ ಮುಂತಾದ ಪರಸ್ಪರವಿರುದ್ಧ ಕಾಣಿಸುವ ವಸ್ತುಗಳೇ ದ್ವಂದ್ವ. ಅವುಗಳ ಆಘಾತದಿಂದ ಚಲಿಸದಂತೆ ಮನಸನ್ನು ಸ್ಥಿರವಿಡುವದೇ ನಿರ್ದ್ವಂದ್ವ ಅಥವಾ ದ್ವಂದ್ವಾತೀತ ಅವಸ್ಥೆಯು.

**ಬ್ರಹ್ಮಯೋಗ**— 'ಯೋಗ' ಅಂದರೆ ಒಂದಾಗೋಣವು, ಕೂಡೋಣವು. ಇಲ್ಲಿ ಬ್ರಹ್ಮಯೋಗವು ಅಂದರೆ ಪರಮಾತ್ಮಸಾಯುಜ್ಯವು. ಅವನಲ್ಲಿ ತಲ್ಲೀನವಾಗಿರುವ ಸ್ಥಿತಿಯು.

## ೫ ನೆಯ ಅಧ್ಯಾಯ-ಟಿಪ್ಪಣಿಗಳು.

**ಕರ್ಮಯೋಗೋ ವಿಶಿಷ್ಯತೇ**–ಸಾಂಖ್ಯವೂ ಯೋಗವೂ ಅಥವಾ ಜ್ಞಾನಮಾರ್ಗವೂ ಕರ್ಮಮಾರ್ಗವೂ ಅಥವಾ ಕರ್ಮಸನ್ಯಾಸವೂ ಕರ್ಮಯೋಗವೂ ಒಂದೇ ಕೊನೆಯ ಸ್ಥಿತಿಯನ್ನು ಪ್ರಾಪ್ತ ಮಾಡಿಕೊಡುವವಾದುದರಿಂದ ಎರಡೂ ಅಷ್ಟೇ ಯೋಗ್ಯತೆಯುಳ್ಳವುಗಳು, ಅವೆರಡೂ ಒಂದೇ ಎಂದು ತಿಳಿಯುವವನೇ ನಿಜವಾದ ಜ್ಞಾನಿಯು, ಎಂದು ಶ್ರೀಕೃಷ್ಣನು ಇದೇ ಅಧ್ಯಾಯದಲ್ಲಿ ಹೇಳಿದ್ದರೂ ಇಲ್ಲಿ 'ಕರ್ಮಯೋಗೋ ವಿಶಿಷ್ಯತೇ' ಅಂದರೆ ಕರ್ಮಯೋಗವು ಹೆಚ್ಚಿನದು ಎಂದು ಏಕೆ ಹೇಳಿದನು, ಎಂಬುದೊಂದು ಪ್ರಶ್ನೆಯು. ಶ್ರೀಕೃಷ್ಣನು ಇದಕ್ಕೆ ಎರಡು ಕಾರಣಗಳನ್ನು ಹೇಳಿರುವನು. ಸನ್ಯಾಸವು ಕಠಿನವು ಮತ್ತು ಕರ್ಮಯೋಗದಲ್ಲಿ ಸನ್ಯಾಸದ ಮುಖ್ಯ ತತ್ವವಾದ ಸಂಕಲ್ಪಸನ್ಯಾಸವು ಅವಶ್ಯವಿರುವದರಿಂದ, ಕರ್ಮಯೋಗವು ಸಾಂಖ್ಯ ಮತ್ತು ಯೋಗಮಾರ್ಗಗಳ ಸಮುಚ್ಚಯರೂಪವಿರುವದು. ಇದಲ್ಲದೆ ಅರ್ಜುನನು ಯುದ್ಧಕ್ಕೆ ಪ್ರವರ್ತಿಸುವದು ಶ್ರೀಕೃಷ್ಣನ ಮನಸಿನಲ್ಲಿರುವದರಿಂದಲೂ ಅರ್ಜುನನ ಪ್ರಕೃತಿಗೆ ಕರ್ಮಯೋಗವೇ

ಯೋಗ್ಯವಾದುದರಿಂದಲೂ ಕರ್ಮಯೋಗವು ಶ್ರೇಷ್ಠವು ಎಂದು ಶ್ರೀಕೃಷ್ಣನು ಇಲ್ಲಿ ಹೇಳಿರುವನು.

**ಸ್ವಭಾವಸ್ತು ಪ್ರವರ್ತತೇ**— ಸೃಷ್ಟಿಯನ್ನು ನಾನು ಮಾಡುವದಿಲ್ಲ, ಯಾಕಂದರೆ ಮಾಡಿಯೂ ನಾನು ಅಲಿಪ್ತನು ಎಂದು ಶ್ರೀಕೃಷ್ಣನು ಹೇಳಿರುವನು. ಇಲ್ಲಿ ಪ್ರಕೃತಿಯೇ ನಿಜವಾದ ಕರ್ತೃವೆಂದು ಪ್ರತಿಪಾದನವಿರುವದು. ಪರಮಾತ್ಮನೇ ಸೃಷ್ಟಿಕರ್ತನಿದ್ದರೂ ಅವನು ಪ್ರಕೃತಿಯ ಮುಖಾಂತರವೇ ನಿರ್ಮಿಸುವನು. ಅವನು ಕೇವಲ ಅಧ್ಯಕ್ಷನು ಅಥವಾ ಸಾಕ್ಷಿಯು.

**ಇಹೈವ ತೈರ್ಜಿತಃ ಸರ್ಗಃ**— ಅಂಥ ಯೋಗ್ಯತೆಯ ಯೋಗಿಗಳು ಜೀವನ್ಮುಕ್ತರಾಗುವರು. ಪರಲೋಕಕ್ಕೆ ತೆರಳಿದಮೇಲೆ ಮೋಕ್ಷವು ದೊರೆಯುವದಿದೆ ಎಂದು ತಿಳಿಯುವವರು ಇತ್ತಕಡೆಗೆ ಲಕ್ಷಕೊಡಬೇಕು. ಇಲ್ಲಿ ಜೀವನ್ಮುಕ್ತಿ ದೊರೆಯದೆ ಪರಲೋಕದಲ್ಲಿ ಮೋಕ್ಷವು ದೊರೆಯದು, ಇಲ್ಲಿಯೇ ಮುಕ್ತಿ ದೊರೆಯುವದು ಶಕ್ಯವು ಎಂದು ಶ್ರೀಕೃಷ್ಣನ ಆಶ್ವಾಸನವಿರುವದು.

**ಸರ್ವಭೂತ ಹಿತೇ ರತಃ** — ಯೋಗಿಗಳ ಮುಖ್ಯ ಲಕ್ಷಣಗಳಲ್ಲಿ ಸರ್ವಭೂತಗಳ ಹಿತವನ್ನು ಸಾಧಿಸುವ ಬುದ್ಧಿಯೊಂದು ಅವಶ್ಯವಾಗಿರುವುದು. ಈ ಲಕ್ಷಣವಿಲ್ಲದವರು, ಕೇವಲ ತಮ್ಮಷ್ಟಕ್ಕೆ ತಾವೇ ಮುಕ್ತರಾದರಾಯಿತು ಎಂದು ಚಿಂತಿಸುವವರು ನಿಜವಾದ ಯೋಗಿಗಳಲ್ಲ. ಅವರೊಂದು ಬಗೆಯ ಸ್ವಾರ್ಥಿಗಳೇ ಸೈ.

**ಅಭಿತೋ ಬ್ರಹ್ಮನಿರ್ವಾಣಂ**—ಯೋಗಿಗೆ ಕೂತಲ್ಲಿಯೇ ಬ್ರಹ್ಮಸಾಯುಜ್ಯವು ದೊರೆಯುವದು. ಇಲ್ಲಿಂದ ಎಲ್ಲಿಯೋ ಹೋಗಿ ಯಾವದೋ ಜನ್ಮದಲ್ಲಿ ಮೋಕ್ಷವನ್ನು ಪಡೆಯುವದಿದೆ ಎಂದು ತಿಳಿಯಬೇಡಿರಿ, ನೀವು ಆತ್ಮಜ್ಞಾನಿಗಳಾಗಿರಿ, ಕಾಮಕ್ರೋಧಗಳನ್ನು ಬಿಡಿರಿ, ಅಂದರೆ ಇಲ್ಲಿಯೇ ನಿಮಗೆ ಮುಕ್ತಿಯು ದೊರೆಯುವದೆಂದು ಶ್ರೀಕೃಷ್ಣನ ಅಭಿವಚನವಿರುವದು.

# ಆರನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಕೂಟಸ್ಥ—** ಕೂಟವೆಂದರೆ ಮೂಲವು. ಕೂಟಸ್ಥ ಆತ್ಮನು ಅಂದರೆ ಸರ್ವಮೂಲವಾದ ಆತ್ಮನು, ಅಂತರಾತ್ಮನು.

**ಶಬ್ದಬ್ರಹ್ಮ—** ಇದು ಪಾರಿಭಾಷಿಕ ಶಬ್ದವು. 'ಶಬ್ದ' ಅಂದರೆ ವೇದವು. ಶಬ್ದಬ್ರಹ್ಮವೆಂದರೆ ವೇದಗಳಲ್ಲಿ ಹೇಳಿದ ಕರ್ಮಕಾಂಡವು ಮತ್ತು ಅವುಗಳ ಆಚರಣೆಯಿಂದ ಪ್ರಾಪ್ತವಾಗುವ ಸ್ವರ್ಗಾದಿ ಭೋಗಗಳು. ತದ್ವಿರುದ್ಧ ಪರಬ್ರಹ್ಮನ ಶಾಶ್ವತಪದವು.

## ೬ನೆಯ ಅಧ್ಯಾಯ-ಟಿಪ್ಪಣಿಗಳು.

**ಸ ಸನ್ಯಾಸೀಚ ಯೋಗೀಚ—** ಗೀತೆಯು ಯೋಗಮಾರ್ಗಗಳನ್ನು ಸಮನ್ವಯಿಸುವ ಗ್ರಂಥವು. ಆದುದರಿಂದ ಇಲ್ಲಿ ಮತ್ತೆ ಸನ್ಯಾಸವೂ ಯೋಗವೂ ಒಂದೇ ಎಂದು ಪ್ರತಿಪಾದಿಸಲಿರುವದು. ಬರಿಯ ಕರ್ಮಗಳನ್ನು ಬಿಟ್ಟವನು ಸನ್ಯಾಸಿಯಲ್ಲವೆಂದೂ ಕರ್ಮಫಲಗಳ ಆಶೆ ಬಿಟ್ಟವನೇ ನಿಜವಾದ ಸನ್ಯಾಸಿಯೂ ಆಹುದು ನಿಜವಾದ ಯೋಗಿಯೂ ಆಹುದು ಎಂದೂ ಇಲ್ಲಿ ಶ್ರೀಕೃಷ್ಣನು ಹೇಳಿರುವನು.

**ಶಮಃ ಕಾರಣಮುಚ್ಯತೇ—** ಕರ್ಮಯೋಗದಲ್ಲಿ ಕರ್ಮವೇ ಆತ್ಮೋನ್ನತಿಯ ಸಾಧನವಿರುವದು. ಈ ಸಾಧನದಿಂದ ಸಿದ್ಧವಾದ ಮೇಲೆ ಆ ಸಿದ್ಧಸ್ಥಿತಿಯಲ್ಲಿ ಸ್ಥಿರನಾಗಿರಬೇಕಾದರೆ ಯೋಗಿಗೆ ಶಮವು ಅಥವಾ ಶಾಂತಿಯು ಆವಶ್ಯಕವು. ಆಮೇಲೆ ಕರ್ಮವು ಸಾಧನರೂಪವಾಗಿರದೇ ಕೇವಲ ಸರ್ವಭೂತಹಿತದ ಸಲುವಾಗಿ, ಲೋಕಸಂಗ್ರಹದೃಷ್ಟಿಯಿಂದ ಲೀಲಾರೂಪವಾಗಿರುವದು.

**ಶ್ಲೋಕಗಳು ೧೦ ರಿಂದ ೧೭—** ಎಲ್ಲ ಯೋಗಿಗಳಿಗೆ ಸಾಧನವೆಂದು ಪಾತಂಜಲ ಮುನಿಗಳು ಹೇಳಿದ ರಾಜಯೋಗದ ಮುಖ್ಯ ತತ್ವಗಳು ಬಹಳೇ ಸಂಕ್ಷೇಪದಿಂದಲೂ ಸುಲಭವಾಗಿಯೂ ಇಲ್ಲಿ ಹೇಳಲ್ಪಟ್ಟಿರುವವು.

**ಶ್ಲೋಕಗಳು ೨೦ ರಿಂದ ೨೩—** ಈ ಶ್ಲೋಕಗಳಲ್ಲಿ ಆತ್ಯಂತಿಕ ಮೋಕ್ಷಸು ಖದ ವರ್ಣನೆಯಿರುವದು. ಗೀತೆಯಲ್ಲಿ 'ಆನಂದ' ಶಬ್ದವು ಒಂದೆಡೆಗೂ ಬಂದಿಲ್ಲ. ಇದು ಸ್ವಲ್ಪ ಆಶ್ಚರ್ಯಕಾರಕವೇ ಸೈ. ಆದರೂ ಈ ಶ್ಲೋಕ ಗಳಲ್ಲಿ ಆತ್ಮಾನಂದದ ಅಥವಾ ಬ್ರಹ್ಮಾನಂದದ ವರ್ಣನೆಯೇ ಇರುವದು.
**ಯೋಗಯುಕ್ತನು—** ಯೋಗಯುಕ್ತನ ಮುಖ್ಯಲಕ್ಷಣಗಳನ್ನು ಹೀಗೆ ಹೇಳಬಹುದು; ಅವನು ಆಶಾರಹಿತನು, ದ್ವಂದ್ವಾತೀತನು, ಆತ್ಮಜ್ಞಾ ನಿಯು, ಸುಖಿಯು, ಸಮದೃಷ್ಟಿಯುಳ್ಳವನು ಮತ್ತು ಸರ್ವಭೂತಹಿತ ವನ್ನು ಸಾಧಿಸುವದರಲ್ಲಿ ನಿತ್ಯನಿರತನು.

---

# ಏಳನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಅಪರಾ-ಪರಾ—** ಕನಿಷ್ಠ ಮತ್ತು ಶ್ರೇಷ್ಠ ಎಂಬ ಅರ್ಥದಲ್ಲಿ ಈ ಶಬ್ದ ಗಳು ವೇದಾಂತಗ್ರಂಥಗಳಲ್ಲಿ ಮೇಲಿಂದ ಮೇಲೆ ಉಪಯೋಗಿಸಲ್ಪಡು ವವು. ಪರಾವಿದ್ಯೆ-ಅಪಾರವಿದ್ಯೆ ಎಂಬ ಪ್ರಯೋಗವು ಮುಂಡಕ ಛಾಂದೋಗ್ಯಾದಿಗಳಲ್ಲಿರುವದು.
**ಅಹಂಕಾರ—** 'ನಾನು' 'ನನ್ನ' ಎಂಬ ಭಾವನೆಯು. 'ಅಸ್ಮಿತೆ' ಎಂಬ ಪ್ರಯೋಗವೂ ಸಂಸ್ಕೃತದಲ್ಲಿರುವದು. 'ಹಮ್ಮು' ಎಂಬ ಕನ್ನಡ ಶಬ್ದ ವನ್ನುಪಯೋಗಿಸಬಹುದು.
**ಬುದ್ಧಿ—** ಸಾಂಖ್ಯರು ಇದಕ್ಕೆ 'ಮಹತ್' ತತ್ವವೆಂದೆನ್ನುವರು. ಒಳಿತು ಕೆಡಕುಗಳನ್ನು ವಿಮರ್ಶಿಸುವ ಮತ್ತು ನಿಶ್ಚಯ ಮಾಡುವ ಶಕ್ತಿಯು ವ್ಯಕ್ತಿ ಯಲ್ಲಿರುವಂತೆ ವಿಶ್ವದಲ್ಲಿರುವುದು. ಅದೇ ಬುದ್ಧಿತತ್ವವು.
**ಮನ—** ಸಂಕಲ್ಪ ವಿಕಲ್ಪಗಳನ್ನು ಹುಟ್ಟಿಸುವ ಶಕ್ತಿಯು ವ್ಯಕ್ತಿಯಲ್ಲಿರು ವಂತೆ ವಿಶ್ವದಲ್ಲಿರುವುದು. ಅದೇ 'ಮನ'ವೆಂಬ ತತ್ವವು.
**ಸಿದ್ಧಿ—** ಪರಮ ಆಧ್ಯಾತ್ಮಿಕಸ್ಥಿತಿಯು, ಜೀವನ್ಮುಕ್ತಿಯು, ಮುಕ್ತಿಯು.
**ಜ್ಞಾನವಿಜ್ಞಾನ—** ಈ ಶಬ್ದಗಳು ಗೀತೆಯಲ್ಲಿ ಮೇಲಿಂದ ಮೇಲೆ ಬರು

ವವು. ಪರಮಾತ್ಮನ ಸಂಪೂರ್ಣ ಜ್ಞಾನವಾಗಬೇಕಾದರೆ ಜ್ಞಾನವಿಜ್ಞಾನಗಳ ಅವಶ್ಯಕತೆ ಇರುವದು.

ಜ್ಞಾನವೆಂದರೆ ಪರಮಾತ್ಮನ ಜ್ಞಾನವು; ವಿಜ್ಞಾನವೆಂದರೆ ಪರಮಾತ್ಮನ ಮತ್ತು ಈ ವಿಶ್ವದ ಸಂಬಂಧವು ಏನು ಇರುವದೆಂಬ ವಿಶಿಷ್ಟಜ್ಞಾನವು. ಯಾವದೇ ಜ್ಞಾನವು ಸಂಪೂರ್ಣವಾಗಬೇಕಾದರೆ ಅದು ಸಂಶಯರಹಿತವಿರಬೇಕು ಮತ್ತು ವ್ಯಾಪಕವಿರಬೇಕು.

## ೭ನೆಯ ಅಧ್ಯಾಯ-ಟಿಪ್ಪಣಿಗಳು.

**ಪರಾ-ಅಪರಾ**— ಅಪರಾಪ್ರಕೃತಿ, ಪರಾಪ್ರಕೃತಿ ಮತ್ತು ಸ್ವತಃ ಪರಮಾತ್ಮನು ಹೀಗೆ ಮೂರು ಎಂದು ಶ್ರೀಕೃಷ್ಣನು ಇಲ್ಲಿ ಹೇಳುವನು. ಅಪರಾಪ್ರಕೃತಿಯಿಂದ ಪಂಚಭೂತಗಳು, ಮನಸು, ಬುದ್ಧಿ ಮತ್ತು ಅಹಂಕಾರ ಇವುಗಳ ಉತ್ಪತ್ತಿಯು. ಜೀವವೇ ಪರಾಪ್ರಕೃತಿಯು. ಇವೆಲ್ಲವುಗಳಿಗೆ ಅಧ್ಯಕ್ಷನಾದ ಶಕ್ತಿಯೇ ಪರಮಾತ್ಮನು. ಇದೇರೀತಿ ೧೫ ನೆಯ ಅಧ್ಯಾಯದಲ್ಲಿ ಕ್ಷರ, ಅಕ್ಷರ ಮತ್ತು ಪುರುಷೋತ್ತಮನು, ಎಂದು ಶ್ರೀಕೃಷ್ಣನ ವಚನವಿರುವದು.

**ಧರ್ಮಾವಿರುದ್ಧೋ ಕಾಮಃ**— ಈ ಜಗತ್ತೆಂದರೆ ಭಯಂಕರವಾದ ದುಃಖಕೂಪವು ಎಂದು ತಿಳಿಯುವ ಹಲವು ಸನ್ಯಾಸವಾದಿಗಳು 'ಕಾಮ' ವೆಂದ ಕೂಡಲೇ ಕಿವಿಯ ಮೇಲೆ ಕೈ ಇಟ್ಟುಕೊಳ್ಳುವರು. ಆದರೆ 'ಧರ್ಮಕ್ಕೆ ಸಮ್ಮತವಿರುವ ಕಾಮನು ನಾನೇ' ಎಂದು ಶ್ರೀಕೃಷ್ಣನು ಹೇಳುವದನ್ನು ಇವರು ಕಣ್ಣೆತ್ತಿ ನೋಡಬೇಕು.

**ನ ತ್ವಹಂ ತೇಷು ತೇ ಮಯಿ**— ಪರಮಾತ್ಮನು ಎಲ್ಲ ವಸ್ತುಗಳಲ್ಲಿ ವ್ಯಾಪಿಸಿಲ್ಲವೆಂದು ಇದರ ಅರ್ಥವಲ್ಲ. ವಸ್ತುಗಳಲ್ಲಿ ಅವನ ಸಮಗ್ರಸ್ವರೂಪವಿಲ್ಲ. ಅವನು ವಸ್ತುಗಳಲ್ಲಿ ಬರಿಯ ಅಂಶರೂಪದಿಂದ ಇರುವನು, ಅವನಲ್ಲಿ ಮಾತ್ರ ಸಕಲ ವಸ್ತುಗಳೂ ಪೂರ್ಣವಾಗಿರುವವು ಎಂಬುದೇ ಇದರ ಅರ್ಥವು.

---

# ಎಂಟನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಅಧಿಭೂತ—** ಸಕಲ ಕ್ಷರ ಸೃಷ್ಟಿಯು ಅಧಿಭೂತವೆನಿಸುವದು.

**ಅಧಿದೈವ—** ಶರೀರಿಗಳಲ್ಲಿರುವ ಮತ್ತು ಸುಖದುಃಖಹೇತುವಾದ ಚೇತನ ಪುರುಷನು.

**ಅಧಿಯಜ್ಞ—** ಶರೀರದಲ್ಲಿದ್ದು ಯಜ್ಞಗಳನ್ನು ಭೋಗಿಸುವ ಪರಮಾತ್ಮನು.

**ಅಧ್ಯಾತ್ಮ—** ಯಾವದೇ ವಸ್ತುವಿನ ಮೂಲರೂಪವು-ತಾತ್ವಿಕಸ್ವರೂಪವು.

**ಭೂ, ಭೂತ, ಭವ, ಭಾವ—** ಈ ಶಬ್ದಗಳು ಮಹತ್ವವುಳ್ಳವುಗಳು ಇದ್ದು ಮೇಲಿಂದ ಮೇಲೆ ಗೀತೆಯಲ್ಲಿ ಬರುವವು. 'ಭೂ' ಈ ಧಾತುವು 'ಇರು' ಮತ್ತು 'ಆಗು' ಈ ಎರಡೂ ಅರ್ಥಗಳನ್ನು ಸೂಚಿಸುವದು. 'ಭೂತ' ಅಂದರೆ ಆದದ್ದು ಮತ್ತು ಇದ್ದದ್ದು ಅಂದರೆ ಚರಾಚರ ಸೃಷ್ಟಿಯು. 'ಭವ' ಅಂದರೆ ಈ ಸಂಸಾರವು, ಆಗುತ್ತಿರುವ ಕ್ರಿಯೆಯು ನಡೆದೇ ಇರುವದರಿಂದ ಇದು ಭವವೆನಿಸುವದು. 'ಭಾವ' ಎಂಬುದಕ್ಕೆ ಇರುವಿಕೆ ಅಥವಾ ಆಗುವಿಕೆ ಎಂದು ಎರಡು ಅರ್ಥಗಳು. 'ಮದ್ಭಾವ' ಅಂದರೆ 'ನನ್ನ ಇರುವಿಕೆ, ನನ್ನ ಸ್ಥಾನ, ನನ್ನ ಸ್ಥಿತಿ' ಎಂದು ಅರ್ಥವು.

## ೮ನೆಯ ಅಧ್ಯಾಯ— ಟಿಪ್ಪಣಿಗಳು.

**ಯಂ ಯಂ ಸ್ಮರನ್ ಭಾವಂ—** ಸಾಯುವ ಕಾಲಕ್ಕೆ ಯಾವ ಸ್ಥಿತಿಯನ್ನು ಧ್ಯಾನಿಸುವನೋ ಅದೇ ಸ್ಥಿತಿಯನ್ನು ಮನುಷ್ಯನು ಪಡೆಯುವನೆಂದು ತಿಳುವಳಿಕೆಯಿರುವದು. ಆದರೆ ಮರಣ ಸಮಯದಲ್ಲಿ ತನ್ನ ಸಂಸ್ಕಾರಗಳಿಗೆ ಕೇವಲ ವಿರುದ್ಧವಾದುದರ ಸ್ಮರಣವು ಎಂದಿಗೂ ಆಗದು ಎಂಬುದನ್ನು ನಾವು ತಿಳಿದಿರಬೇಕು. ಆದುದರಿಂದ ಯಾವಾಗಲೂ ಒಳ್ಳೇ ಧ್ಯಾನವನ್ನು ಮಾಡುತ್ತಿರಬೇಕು.

**ಯೋಗಧಾರಣೆ—** ಯೋಗದಲ್ಲಿ ಸ್ಥಿರವಾದ ಸ್ಥಿತಿಯು. ಧ್ಯಾನವು ಬಹು ಕಾಲ ನಿಶ್ಚಲವಾಯಿತೆಂದರೆ ಅದು 'ಧಾರಣೆ'ಯೆನಿಸುವದು.

**ಮಾಮುಪೇತ್ಯ ನ ಪುನರ್ಜನ್ಮ**— ನನ್ನೆಡೆಗೆ ಬಂದು ಮುಟ್ಟುವವರೆಗೆ ಪುನರ್ಜನ್ಮದ ಚಕ್ರವು ಬಿಟ್ಟಿದ್ದಲ್ಲ, ಆಮೇಲೆ ಅದನ್ನು ನಾನು ಬಿಡಿಸುವೆನೆಂದು ಭಗವಂತನು ಇಲ್ಲಿ ಆಶ್ವಾಸನ ಕೊಡುವನು. ಅದೇ ಸಿದ್ಧಿಯು, ಸಂಸಿದ್ಧಿಯು.

**ಶುಕ್ಲಕೃಷ್ಣೇಗತೀ ಹ್ಯೇತೇ**— ಮರಣಪಾಶ್ಚಾತ್ ಜೀವಾತ್ಮನಿಗೆ ಇವೆರಡು ಗತಿಗಳೆಂದು ವೇದಾಂತ ಗ್ರಂಥಗಳಲ್ಲಿ ವರ್ಣನೆಯಿರುವದು. ಕಾಮ್ಯಕರ್ಮಗಳಿಂದ ಒಂದು, ಫಲಾಶಾರಹಿತ ಕರ್ಮಯೋಗದಿಂದ ಅಥವಾ ಜ್ಞಾನಮಾರ್ಗದಿಂದ ಇನ್ನೊಂದು, ದೊರೆಯುವದೆಂದು ವರ್ಣನೆಯಿರುವದು. ಇದರಲ್ಲಿಯ ಮಿಕ್ಕ ಎಲ್ಲ ವರ್ಣನೆಯು ಸಾಂಕೇತಿಕವಿರುವದು. ಈ ಮಾರ್ಗಗಳಿಗೆ ಅರ್ಚಿರಾದಿ, ಧೂಮ್ರಾದಿ ಮತ್ತು ದೇವಯಾನ, ಪಿತೃಯಾನ ಎಂಬ ಹೆಸರುಗಳೂ ಇರುವವು.

---

# ಒಂಭತ್ತನೆಯ ಅಧ್ಯಾಯವು.

---

## ಶಬ್ದಾರ್ಥಗಳು.

**ಪ್ರಕೃತಿಮವಷ್ಟಭ್ಯ**— ಪ್ರಕೃತಿಯ ಮೇಲೆ ಆನಿಕೊಂಡು ಅಂದರೆ ಅದನ್ನಾಶ್ರಯಿಸಿ, ಪ್ರಕೃತಿಯ ಸಹಾಯದಿಂದ.

**ತ್ರಯೀಧರ್ಮ**— ಋಕ್ ಯಜಸ್ಸಾಮಗಳಲ್ಲಿ ಹೇಳಿದ ಕರ್ಮಕಾಂಡವು.

**ತ್ರೈವಿದ್ಯಾ**— ಮೂರು ವೇದಗಳಲ್ಲಿ ಹೇಳಿದ ಮೀಮಾಂಸಕರ ಕರ್ಮಮಾರ್ಗವು.

## ೯ನೆಯ ಅಧ್ಯಾಯ—ಟಿಪ್ಪಣಿಗಳು.

**ಪ್ರಕೃತಿಂ ಸ್ವಾಮವಷ್ಟಭ್ಯ**— ತಾನು ಸ್ವತಃ ಅವತಾರವನ್ನು ತಾಳಬೇಕಾದಾಗ 'ಪ್ರಕೃತಿಂ ಸಾಮಧಿಷ್ಠಾಯ' ಅಂದರೆ ತನ್ನ ಪ್ರಕೃತಿಯೇ ಸ್ಥಾನವೆಂದು ತಿಳಿದು ಆದರಲ್ಲಿ ಪರಮಾತ್ಮನು ಸಂಭವಿಸುವನೆಂದು ೪ನೆಯ ಅಧ್ಯಾಯದಲ್ಲಿ ವರ್ಣನೆಯಿರುವದು. ಸೃಷ್ಟಿಯನ್ನು ನಿರ್ಮಿಸುವಾಗ

ಪ್ರಕೃತಿಯದ್ವಾರಾ ಆ ಕಾರ್ಯವನ್ನು ತಾನು ಅಧ್ಯಕ್ಷನಾಗಿ ನಿಂತು ಮಾಡಿಸುವನು.

**ಭೂತಭೃನ್ನ ಚಭೂತಸ್ಥೋ**—ದೇವರು ಭೂತಸ್ಥನಲ್ಲ ಎಂದರೆ ಭೂತಗಳಲ್ಲಿ ವ್ಯಾಪ್ತನಿಲ್ಲವೆಂದರ್ಥವಲ್ಲ. ಆದರೆ ಅವನ ಸಮಗ್ರರೂಪವು ಭೂತಗಳಲ್ಲಿ ಇಲ್ಲ, ಅವನು ಇವೆಲ್ಲವುಗಳನ್ನು ತುಂಬಿ ಹೆಚ್ಚಾಗಿರುವನು, ಇವುಗಳಲ್ಲಿ ಕೇವಲ ಅಂಶರೂಪನಾಗಿರುವನು, ಎಂದು ಅರ್ಥವು.

**ಅಪಿಚೇತ್ ಸುದುರಾಚಾರೋ**— ಪರಮಾತ್ಮನ ರಾಜ್ಯದಲ್ಲಿ ಯಾರೂ ನಿರಾಶರಾಗುವ ಕಾರಣವಿಲ್ಲ. ಅನನ್ಯಭಕ್ತಿ ಎಂಬ ಕಾಣಿಕೆಯೊಂದನ್ನು ತಂದರೆ ಸಾಕು, ಇವನು ತನ್ನ ಪಟ್ಟವನ್ನೇ ಕೊಟ್ಟುಬಿಡುವನು. ಆದುದರಿಂದ, ಇನ್ನೇನು ನಾನು ಪಾಪಾತ್ಮನು, ನನಗೆ ಮುಕ್ತಿಯೇ ಇಲ್ಲ, ಎಂದು ಯಾರೂ ಅನ್ನಕೂಡದು. ಭಕ್ತಿರಸಾಯನದಿಂದ ಮನಸಿನ ರೋಗಗಳೆಲ್ಲ ಹೋಗಿ ಭವದುಃಖಗಳ ಬಂಧನವೇ ಕಡಿಯುವದು.

**ದೈವೀ ಮತ್ತು ಆಸುರೀಪ್ರಕೃತಿ**— ೧೬ನೆಯ ಅಧ್ಯಾಯದಲ್ಲಿ ದೈವ ಮತ್ತು ಆಸುರ ಜೀವಗಳ ವರ್ಣನೆಯಿದ್ದಂತೆ ಇಲ್ಲಿ ದೈವೀ ಮತ್ತು ಆಸುರೀ ಸ್ವಭಾವಗಳ ಉಲ್ಲೇಖವಿರುವದು. ಪರಮಾತ್ಮನ ಜ್ಞಾನಮಾಡಿಕೊಳ್ಳುವ ಪ್ರವೃತ್ತಿ ಇರುವದೇ ದೈವೀಸ್ವಭಾವವು. ತದ್ವಿರುದ್ಧ ಅಜ್ಞಾನಮೋಹಿತರಾಗಿ ನಿಜಸ್ವರೂಪವನ್ನು ತಿಳಿಯಲಿಚ್ಛಿಸದೆ ಇರುವದು ಆಸುರೀ ಸ್ವಭಾವವು.

**೨೭—೨೮ ಮಂತ್ರಗಳು**— ಕೃಷ್ಣಾರ್ಪಣಬುದ್ಧಿಯ ಪರಮಾವಧಿಯು ಇಲ್ಲಿ ವಿವರಿಸಲ್ಪಟ್ಟಿದೆ. ಪ್ರತಿಕರ್ಮವನ್ನು ಪರಮಾತ್ಮನಿಗೆ ಅರ್ಪಿಸು ಎಂದು ಇಲ್ಲಿ ಉಪದೇಶವಿರುವದು. ಅಂದರೆ ಭಕ್ತನು ಫಲಾಶೆಯನ್ನು ಬಿಟ್ಟವನಾಗಿ 'ಸನ್ಯಾಸಯೋಗಯುಕ್ತ'ನಾಗುವನು. ಈ ಶಬ್ದ ಪ್ರಯೋಗವು ಮಹತ್ವದ್ದಿರುವದು. ಜ್ಞಾನಕರ್ಮಗಳ ಸಮುಚ್ಚಯವನ್ನು ಮಾಡಿ ನಮ್ಮ ಸರ್ವಭಾವಗಳಿಂದ ನಾವು ಪರಮಾತ್ಮಯೋಗವನ್ನು ಸಾಧಿಸಬೇಕು ಎಂಬುದಕ್ಕೆ ಗೀತೆಯು ಎಲ್ಲಕ್ಕೂ ಹೆಚ್ಚು ಮಹತ್ವವನ್ನು ಕೊಡುವದು.

**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ**— ಸ್ತ್ರೀ ವೈಶ್ಯ ಶೂದ್ರಾದಿಗಳನ್ನು ಎರಡನೆಯ ಗ್ರಂಥಗಳು ಎಷ್ಟೇ ಹೀಯಾಳಿಸಿರಲಿ. ಗೀತೆಯು ಗುಟ್ಟನ್ನರಿತು

ಗೀತಾಧರ್ಮವನ್ನಾಚರಿಸಿದರೆ ಅವರಿಗೆ ಸಹ ಪರಮಗತಿಯನ್ನು ಕೊಡುವೆನೆಂದು ಇಲ್ಲಿ ಪರಮಾತ್ಮನ ಆಶ್ವಾಸನವಿರುವದು.

---

# ಹತ್ತನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಅಧ್ಯಾತ್ಮವಿದ್ಯೆ—** ಆತ್ಮನನ್ನು ಸಂಬಂಧಿಸಿದ್ದು ಅಧ್ಯಾತ್ಮವು. ಅಧ್ಯಾತ್ಮವಿದ್ಯೆಯೆಂದರೆ ಬ್ರಹ್ಮವಿದ್ಯೆಯು, ತತ್ವಜ್ಞಾನವು.

**ತಪಸ್ಸು—** ಶಕ್ತಿಯ ಶುದ್ಧೀಕರಣ ಮತ್ತು ಏಕೀಕರಣದಿಂದ ಅಥವಾ ಏಕಾಗ್ರೀಕರಣದಿಂದ ಅದನ್ನು ಬೆಳೆಸುವದು. ಇದು ಮೂಲಾರ್ಥವು. ತಪಸ್ಸು ಶಾರೀರಿಕ, ವಾಚಿಕ, ಮಾನಸಿಕ, ಆತ್ಮಿಕ ಹೀಗೆ ವಿವಿಧವಿರುವದು.

**ದಮ ಮತ್ತು ಶಮ—** ಇಂದ್ರಿಯ ಸಂಯಮನವು ದಮವೆನಿಸುವದು, ಮನಃಸಂಯಮವು ಶಮವೆನಿಸುವದು.

**ಸಾಮವೇದ—** ಇದು ಗೀತಮಯವಿರುವದರಿಂದ ಅನ್ನಲಿಕ್ಕೂ ಕೇಳಲಿಕ್ಕೂ ಸುಂದರವೂ ರಮ್ಯವೂ ಇರುವದು. ಬಹುತರ ಋಗ್ವೇದದ ಮಂತ್ರಗಳನ್ನೇ ಗೀತರೂಪವಾಗಿ ಅನ್ನುವುದಕ್ಕೆ ಸಾಮವೇದವೆನ್ನುವರು.

## ೧೦ನೆಯ ಅಧ್ಯಾಯ—ಟಿಪ್ಪಣಿಗಳು.

**ಮಹರ್ಷಯಃ ಸಪ್ತ—** ಈ ವಿಷಯವು ವೈದಿಕ ಧರ್ಮದ ಕಾಲಗಣನೆಗೆ ಸಂಬಂಧಿಸಿದ್ದು. ಬ್ರಹ್ಮದೇವರ ಒಂದು ಕಲ್ಪದಲ್ಲಿ ಹದಿನಾಲ್ಕು ಮನ್ವಂತರಗಳು. ಪ್ರತಿಯೊಂದು ಮನ್ವಂತರದ ಅಧ್ಯಕ್ಷನಾದ ಮನುವು, ದೇವರು ಮತ್ತು ಸಪ್ತರ್ಷಿಗಳು ಬೇರೆ ಬೇರೆ ಇರುವರು. ಗೀತೆಯ ಕಾಲದಲ್ಲಿಯೂ ಈಗ್ಯೂ ನಡೆದಿದ್ದು ವೈವಸ್ವತ ಮನ್ವಂತರವು. ಇದರಲ್ಲಿಯ ಋಷಿಗಳು ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠರು.

**ಪೂರ್ವೇ ಚತ್ವಾರಃ—** ಎಲ್ಲಕ್ಕೂ ಪೂರ್ವದಲ್ಲಿಯ ನಾಲ್ವರೆಂದರೆ ಚತುರ್ವ್ಯೂಹ ನಾರಾಯಣನ ಸ್ವರೂಪಗಳಾದ ವಾಸುದೇವ, ಸಂಕರ್ಷಣ,

ಪ್ರದ್ಯುಮ್ನ ಮತ್ತು ಅನಿರುದ್ಧ ಇವರು. ಇದು ಭಾಗವತ ಧರ್ಮದ ಪರಂಪರೆಯು.

**ಮನವಃ—** ಪ್ರತಿ ಮನ್ವಂತರಕ್ಕೆ ಅಧ್ಯಕ್ಷರಾಗಿರುವ ಮನುದೇವತೆಗಳು. ಪರಮಾತ್ಮನ ಮಾನಸಪುತ್ರರಾದ ಇವರೆಲ್ಲರಿಂದ ಮುಂದೆ ಸೃಷ್ಟಿಯು ಹುಟ್ಟಿತು ಎಂದು ಅರ್ಥವು. ಭಾಗವತಧರ್ಮದ ಪ್ರಕಾರವೇ ಇವೆಲ್ಲವುಗಳ ಅರ್ಥವನ್ನು ನಾವು ಹಚ್ಚಲಿಕ್ಕೆ ಬೇಕು. ಆ ಪ್ರಕಾರ ನೋಡಿದರೆ ಪರಮಾತ್ಮನಿಂದ ಮೊದಲು ಚತುರ್ವ್ಯೂಹ ಮೂರ್ತಿಗಳು, ಆ ಮೇಲೆ ಅನಿರುದ್ಧನಿಂದ ಸಪ್ತರ್ಷಿಗಳು ಹೀಗೆ ಸೃಷ್ಟಿಕ್ರಮವು ಮಹಾಭಾರತದಲ್ಲಿದೆ.

**ವಿಭೂತಿಂ ಯೋಗಂ ಚ—** ಪರಮಾತ್ಮನ ಸೃಷ್ಟಿಶಕ್ತಿ ಅಥವಾ ಆವಿರ್ಭಾವಶಕ್ತಿಯೇ ಇಲ್ಲಿ ಯೋಗವೆಂದೆನಿಸುದದು. ಆ ಯೋಗಸಾಮರ್ಥ್ಯವನ್ನೂ ಅದರಿಂದ ಅವನು ಧರಿಸಿದ ವಿಶೇಷ-ಭೂತಿ ಅಂದರೆ ಮಹತ್ವದ ರೂಪಗಳನ್ನೂ ಇಲ್ಲಿ ವರ್ಣಿಸಿದ್ದಾರೆ.

**ಮಾರ್ಗಶೀರ್ಷೋಽಹಂ—** ಈಗ ನಮ್ಮ ವರ್ಷಾರಂಭವು ಚೈತ್ರಾದಿ ಇದ್ದರೂ ಗೀತೆಯ ಕಾಲದಲ್ಲಿ ಅದು ಮಾರ್ಗಶೀರ್ಷದಿಂದ ಆರಂಭಿಸುತ್ತಿತ್ತು. ಮಹಾಭಾರತ, ರಾಮಾಯಣ ಮತ್ತು ಭಾಗವತ ಗ್ರಂಥಗಳಲ್ಲಿ ಈ ಬಗ್ಗೆ ಉಲ್ಲೇಖಗಳು ದೊರೆಯುವವು. ಮೃಗಶಿರ ನಕ್ಷತ್ರಕ್ಕೆ ಅಗ್ರಹಾಯಣಿ ಎಂಬ ಪರ್ಯಾಯ ಶಬ್ದವಾದರೂ ಇರುವದು.

**ಏಕಾಂಶೇನ ಸ್ಥಿತೋ ಜಗತ್—** ಪರಮಾತ್ಮನ ಅಗಾಧ ಶಕ್ತಿಯು ಅನಂತವಿರುವದರಿಂದ ಕೇವಲ ಒಂದೇ ಅಂಶದಿಂದ ಈ ಸೃಷ್ಟಿಯನ್ನು ವ್ಯಾಪಿಸಿ ತಾನು ಅನಂತನಾಗಿ ಹಾಗೆಯೇ ಉಳಿದಿರುವನು. ಋಗ್ವೇದದಲ್ಲಿ 'ಅತ್ಯತಿಷ್ಠದ್ದಶಾಂಗುಲಂ' ಎಂಬ ವಚನವೂ ಇದನ್ನೇ ವ್ಯಕ್ತಮಾಡುವದು.

---

# ಹನ್ನೊಂದನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಆದಿತ್ಯಾನ್ ವಸೂನ್ ರುದ್ರಾನ್—** ಇವೆಲ್ಲ ದೇವತೆಗಳು. ೧೨ ಆದಿತ್ಯರು, ೮ ವಸುಗಳು, ೧೧ ರುದ್ರರು ಮುಂತಾದವರು. ಎಲ್ಲ ದೇವತೆಗಳೂ ವಿಶ್ವರೂಪದಲ್ಲಿ ಅರ್ಜುನನಿಗೆ ಕಂಡರು.

**ಮಾನುಷಂ ರೂಪಂ—** ಸಾಮಾನ್ಯ ಮನುಷ್ಯರಂತೆ ಇದ್ದ ಶ್ರೀಕೃಷ್ಣನ ಸ್ವರೂಪವನ್ನು.

**ಯೊಗೇಶ್ವರ—** ಶ್ರೀಕೃಷ್ಣನಿಗೆ ಯೋಗೇಶ್ವರನೆಂಬ ಹೆಸರು ಗೀತೆಯಲ್ಲಿ ನಾಲ್ಕಾರು ಸಾರೆ ಕೊಡಲ್ಪಟ್ಟಿದೆ. ಇಲ್ಲಿ ಯೋಗವೆಂದರೆ ವಿಶ್ವನಿರ್ಮಾಣ ಮತ್ತು ಉಪಸಂಹಾರ ಶಕ್ತಿಯು. ಶ್ರೀಕೃಷ್ಣನು ಅಂಥ ಶಕ್ತಿಯ ಅಧೀಶ್ವರನು ಎಂದು ಅರ್ಥವಿರುವದು.

**ಸದಸತ್—** ಸತ್ ಅಂದರೆ ಇರುವಂತಹದೆಲ್ಲ. ಅಸತ್ ಅಂದರೆ ಇಂದ್ರಿಯಗೋಚರವಿದ್ದ ಯಾವ ವಸ್ತುವೂ ಇಲ್ಲದಂತಹ ಸ್ಥಿತಿಯಲ್ಲಿದ್ದ ಅವ್ಯಕ್ತ ವಿಶೇಷವು.

## ೧೧ ನೆಯ ಅಧ್ಯಾಯ— ಟಿಪ್ಪಣಿಗಳು.

**ವಿಭೂತಿ–ವಿಶ್ವರೂಪ—** ಪರಮಾತ್ಮನ ನಿಜಸ್ವರೂಪದ ಸಾಕ್ಷಾತ್ಕಾರವೇ ವಿಶ್ವರೂಪದರ್ಶನವು. ಹೋದ ಅಧ್ಯಾಯದಲ್ಲಿ ವಿಭೂತಿಗಳನ್ನು ಹೇಳಿದ್ದಾಯಿತು. ಆದರೆ ಅಷ್ಟರಿಂದ ಅರ್ಜುನನ ಸಮಾಧಾನವಾಗಲಿಲ್ಲ. ಸಂಪೂರ್ಣ ವಿಶ್ವರೂಪವನ್ನು ನೋಡುವ ಇಚ್ಛೆಯು ಅವನಿಗಾಯಿತು. ಮನುಷ್ಯಶಕ್ತಿಯು ಮರ್ಯಾದಿತವಿರುವದರಿಂದ ಒಂದು ಸಾಮಾನ್ಯವಸ್ತುವಿನ ಅಂಗೋಪಾಂಗಗಳನ್ನು ಸಹ ಮನುಷ್ಯನು ಒಮ್ಮೆಲೆ ನೋಡಲಾರನು. ಅಂದಮೇಲೆ ಅವನು ಪರಮಾತ್ಮನ ಅನಂತಾನಂತ ರೂಪಗಳನ್ನೂ ಅವನ ವಿಸ್ತಾರವನ್ನೂ ವ್ಯಾಪಕತ್ವವನ್ನೂ ಒಮ್ಮೆಲೆ ನೋಡುವ ಬಗೆ ಹೇಗೆ? ರಾಮಕೃಷ್ಣಾದಿಗಳು ಅವತಾರ ರೂಪಗಳು. ಇಲ್ಲಿ ತೋರಿಸಿದ್ದು ಪರಮಾತ್ಮನ ಸಮಗ್ರರೂಪವು.

**ದಿವ್ಯದೃಷ್ಟಿ**— ಪರಮಾತ್ಮನ ದಿವ್ಯಸ್ವರೂಪವು ಈ ನಮ್ಮ ಕಣ್ಣುಗಳಿಂದ ಕಾಣುವದು ಅಶಕ್ಯವು. ಇವುಗಳಲ್ಲಿ ಆ ಸಾಮರ್ಥ್ಯವಿಲ್ಲ. ಆದುದರಿಂದ ಒಳಗಣ್ಣಿನಿಂದ ಅಂದರೆ ಆಂತರಿಕ ಸಾಮರ್ಥ್ಯದಿಂದ ವಿಶ್ವರೂಪವನ್ನು ನೋಡುವಂತೆ ಆ ಪರಮಾತ್ಮನು ಅರ್ಜುನನನ್ನು ಅನುಗ್ರಹಿಸಿದನು. ಸ್ಫೂರ್ತಿಗೊಂಡಾಗ ಕವಿಗಳು, ಭಕ್ತಿಪರವಶರಾದಾಗ ಭಕ್ತರು, ಧ್ಯಾನಸ್ಥರಾದಾಗ ಯೋಗಿಗಳು, ಯಾವ ದೃಷ್ಟಿಯಿಂದ ನೋಡುವರೋ ಅದೇ ದಿವ್ಯದೃಷ್ಟಿಯು.

**ಕಾಲೋಽಸ್ಮಿ ಲೋಕಕ್ಷಯಕೃತ್**— ವಿಶ್ವರೂಪವನ್ನು ತೋರಿಸುವಾಗ ಕೊನೆಗೆ ಶ್ರೀಕೃಷ್ಣನು ಭಯಾನಕವಾದ ಅಕ್ರಾಳವಿಕ್ರಾಳ ರಾಕ್ಷಸೀ ಸ್ವರೂಪವನ್ನು ತೋರಿದ ಕೂಡಲೇ ಅರ್ಜುನನು ಗಾಬರಿಗೊಂಡು, ಇದೇನು ಎಂದು ಕೇಳಿದನು. ಆಗ ಶ್ರೀಪರಮಾತ್ಮನು ಅಂದದ್ದು, 'ಇದು ನನ್ನ ತ್ರಿಲೋಕ ಸಂಹಾರಿಯಾದ ಕಾಲಸ್ವರೂಪವು; ಈಗ ಈ ಸೈನ್ಯಗಳಲ್ಲಿ ನಿಂತ ವೀರರನ್ನು ಕೊಲ್ಲುವದಿದೆ ಆದುದರಿಂದ ಈ ಪ್ರಚಂಡ ಸ್ವರೂಪವನ್ನು ತಾಳಿರುವೆನು.' ಅರ್ಥಾತ್ ಪರಮಾತ್ಮನ ಸರ್ವಸಂಗ್ರಾಹಕ ಸಾಮಾನ್ಯ ರೂಪ ಮತ್ತು ಆಯಾ ಕಾಲದಲ್ಲಿ ಅವನ ಸಂಕಲ್ಪದಂತೆ ಕಾರ್ಯಗಳಾಗಲಿಕ್ಕೆ ಅವಶ್ಯವಿದ್ದ ವಿಶೇಷರೂಪ, ಹೀಗೆ ಎರಡೂ ಇಲ್ಲಿ ತೋರಿಸಲ್ಪಟ್ಟವೆ. ಇವುಗಳ ಹೊರತು ಸೂತ್ರಧಾರನಂತೆ ಪ್ರತ್ಯಕ್ಷ ಕಾರ್ಯ ಮಾಡುವ ಶ್ರೀಕೃಷ್ಣ ಸ್ವರೂಪವೊಂದು ಮೂರನೆಯದು. ಹೀಗೆ ರೂಪಭೇದಗಳಿವೆ. ಸಾಮಾನ್ಯವಾದ ವಿಶ್ವರೂಪವು ದ್ವಂದ್ವಾತೀತವು, ಸಂಕಲ್ಪಾತೀತವು. ವಿಶೇಷವಾದ ಸ್ವರೂಪವು ಆಯಾ ಕಾಲಕ್ಕೆ ಆಗತಕ್ಕ ಕಾರ್ಯಗಳನ್ನು ಕೈಗೂಡಿಸಲಿಕ್ಕೆ ಅವಶ್ಯವಿದ್ದ ಶಕ್ತಿರೂಪವು. ಆ ಕಾರ್ಯಗಳನ್ನು ಸೃಷ್ಟಿಯಲ್ಲಿ ಪ್ರತ್ಯಕ್ಷ ಮಾಡಲಿಕ್ಕೆ ಅಥವಾ ಮಾಡಿಸಲಿಕ್ಕೆ ಮನುಷ್ಯ ದೇಹಧಾರಿಯಾಗಿ ಬಂದುದು ಅವತಾರ ರೂಪವು.

**ಭಕ್ತ್ಯಾತ್ವನನ್ಯಯಾ ಶಕ್ಯಂ ದ್ರಷ್ಟುಂ**— ಪರಮಾತ್ಮನ ವಿಶ್ವರೂಪವಾಗಲಿ, ಕಾಲಸ್ವರೂಪವಾಗಲಿ ಅನನ್ಯ ಭಕ್ತಿ ಎಂಬ ಒಂದೇ ಸಾಧನದಿಂದ ಕಾಣಬಲ್ಲದು. ಮಿಕ್ಕ ಎಲ್ಲ ಸಾಧನಗಳಿಂದ ಅದರ ಬೌದ್ಧಿಕಜ್ಞಾನವಾಗಬಹುದು, ಆದರೆ ಪ್ರತ್ಯಕ್ಷ ದರ್ಶನವಾಗಬೇಕಾದರೆ ಭಕ್ತಿಯು ಅವಶ್ಯವು. ಯಾಕೆಂದರೆ ಸಂಪೂರ್ಣ ಆತ್ಮಸಮರ್ಪಣೆಯೂ ತನ್ಮಯತೆಯೂ ಭಕ್ತಿ

ಯಿಂದಲೇ ಸಾಧ್ಯವು. ನಿಜಸ್ವರೂಪದ ಸಾಕ್ಷಾತ್ಕಾರವು ಇನ್ನಾವ ಸಾಧನಗಳಿಂದಲೂ ಸಾಧ್ಯವಿಲ್ಲ.

---

# ಹನ್ನೆರಡನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಅಭ್ಯಾಸಯೋಗ—** ಅಭ್ಯಾಸದಿಂದ ಪರಮಾತ್ಮನಲ್ಲಿ ಚಿತ್ತವನ್ನು ಸ್ಥಿರವಿಡುವ ಮಾರ್ಗವು.

**ಯೋಗವಿತ್ತಮ—** ಎಲ್ಲಕ್ಕೂ ಹೆಚ್ಚು ಯೋಗಜ್ಞಾನವುಳ್ಳವನು. ಇಲ್ಲಿ ಯೋಗವೆಂದರೆ ಪರಮಾತ್ಮಜ್ಞಾನವನ್ನು ಮಾಡಿಕೊಳ್ಳುವ ಮಾರ್ಗವು.

**ಸರ್ವಾರಂಭ—** ಆರಂಭವೆಂದರೆ ಯಾವದೇ ಉದ್ಯೋಗವು, ವ್ಯವಸಾಯವು, ಪ್ರಯತ್ನವು.

## ೧೨ನೆಯ ಅಧ್ಯಾಯ—ಟಿಪ್ಪಣಿಗಳು.

**ಅವ್ಯಕ್ತಾ ಹಿ ಗತಿರ್ದುಃಖಂ—** ಇಲ್ಲಿ ಸಗುಣೋಪಾಸನೆಯು ಹೆಚ್ಚಿನದೊ ನಿರ್ಗುಣೋಪಾಸನೆಯು ಹೆಚ್ಚಿನದೊ ಎಂಬ ಪ್ರಶ್ನೆಯನ್ನು ಅರ್ಜುನನು ಕೇಳಿದ್ದಾನೆ. ಶ್ರದ್ಧೆಯಿಂದ ಸ್ಥಿರವಾದ ಭಕ್ತಿಮಾರ್ಗವೆ ಹೆಚ್ಚಿನದೆಂದು ಇಲ್ಲಿ ಶ್ರೀಕೃಷ್ಣನು ಹೇಳಿರುವನು. ಸಗುಣೋಪಾಸನೆಯು ಸುಲಭವಿರುವದರಿಂದಲೂ ನಮ್ಮ ಎಲ್ಲ ಇಂದ್ರಿಯಶಕ್ತಿಗಳನ್ನು ಏಕೀಕರಿಸಿ ಸಗುಣಮೂರ್ತಿಯಲ್ಲಿ ಅಥವಾ ಸಗುಣಪರಮಾತ್ಮನ ಕಲ್ಪನೆಯಲ್ಲಿ ಬೇಗನೆ ಸ್ಥಿರೀಕರಿಸುವದು ಶಕ್ಯವಿರುವುದರಿಂದಲೂ ಅದೇ ಮಾರ್ಗವು ಶ್ರೇಷ್ಠವೆಂದು ಶ್ರೀಕೃಷ್ಣನು ಹೇಳಿರುವನು. ಅವ್ಯಕ್ತೋಪಾಸಕರಿಗಾದರೂ ಪರಮಗತಿಯು ಸಿಕ್ಕೇಸಿಗುವದು. ಆದರೆ ಆ ಮಾರ್ಗವು ಸ್ವಲ್ಪ ಕಠಿನವು.

**ಶ್ರೇಯೋ ಹಿ ಜ್ಞಾನಮಭ್ಯಾಸಾತ್—** ಯಾವಾಗಲೂ ಪರಮಾತ್ಮನಲ್ಲಿ ಚಿತ್ತವನ್ನಿಡು, ಅದಾಗದಿದ್ದರೆ ಅದನ್ನು ಸಾಧಿಸಲಿಕ್ಕೆ ಯಾವಾಗಲೂ ಪ್ರಯ

ತ್ತಿಸು, ಅದಾಗದಿದ್ದರೆ ಎಲ್ಲ ಕರ್ಮಗಳು ಪರಮಾತ್ಮನವೆಂದು ಮಾಡು, ಅದೂ ಆಗದಿದ್ದರೆ ಪ್ರಯತ್ನಪೂರ್ವಕವಾಗಿ ಕರ್ಮಗಳ ಫಲಾಶೆಯನ್ನು ಬಿಟ್ಟುಬಿಡು. ಹೀಗೆ ಒಂದಕ್ಕೊಂದು ಸುಲಭವೆಂದು ಶ್ರೀಕೃಷ್ಣನು ನಾಲ್ಕು ಮಾರ್ಗಗಳನ್ನು ಹೇಳಿರುವನು. ಪರಮಾತ್ಮಯೋಗವು ಅಥವಾ ನಮ್ಮ ಚಿತ್ತಸರ್ವಸ್ವವು ಯಾವಾಗಲೂ ಪರಮಾತ್ಮನಲ್ಲಿರಬೇಕೆಂಬುದೆ ಧ್ಯೇಯವು. ಮುಂದೆ ಯಾವುದು ಯಾವುದಕ್ಕಿಂತ ಹೆಚ್ಚಿನದೆಂದು ಹೇಳುವಾಗ, ಬರಿಯ ಅಭ್ಯಾಸಕ್ಕಿಂತ ನಿಶ್ಚಿತವಾದ ಜ್ಞಾನವು ಹೆಚ್ಚಿನದು; ಅದಕ್ಕಿಂತ ಆ ಜ್ಞಾನದಲ್ಲಿ ಸ್ಥಿರವಾಗಿರುವದು ಅಂದರೆ ಧ್ಯಾನಸ್ಥಿತಿಯು ಹೆಚ್ಚಿನದು; ಅದಕ್ಕಿಂತಲೂ ಕೃಷ್ಣಾರ್ಪಣಪೂರ್ವಕ ಕರ್ಮಫಲತ್ಯಾಗ ಮಾಡುತ್ತಿರುವದು ಹೆಚ್ಚಿನದೆಂದು ಶ್ರೀಕೃಷ್ಣನು ಅಂದಿರುವನು.

---

# ಹದಿಮೂರನೆಯ ಅಧ್ಯಾಯವು.

---

## ಶಬ್ದಾರ್ಥಗಳು.

**ಅವ್ಯಕ್ತ**— ಇಲ್ಲಿ ಪ್ರಕೃತಿಯು ಅವ್ಯಕ್ತವೆಂದು ಸಂಬೋಧಿಸಲ್ಪಟ್ಟಿದೆ.

**ಇಂದ್ರಿಯಾಣಿ ದಶೈಕಂ ಚ**— ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಮತ್ತು ಮನಸು ಹೀಗೆ ಒಟ್ಟು ಹನ್ನೊಂದು.

**ಇಂದ್ರಿಯಗೋಚರ**— ಪಂಚ ಜ್ಞಾನೇಂದ್ರಿಯಗಳ ವಿಷಯಗಳಾದ ಶಬ್ದ, ರೂಪ, ರಸ, ಗಂಧ ಮತ್ತು ಸ್ಪರ್ಶ ಇವೈದು.

**ಕ್ಷೇತ್ರ-ಕ್ಷೇತ್ರಜ್ಞ**— ಕ್ಷೇತ್ರ ಅಂದರೆ ಹೊಲವು, ಆತ್ಮನು ಅಥವಾ ಚೈತನ್ಯನು ಇರುವ ಸ್ಥಾನವು. ದೇಹ ದೇಹೀ, ಶರೀರ ಶರೀರಿ ಇದ್ದಂತೆ ಕ್ಷೇತ್ರ ಮತ್ತು ಕ್ಷೇತ್ರಜ್ಞವೆಂಬ ಹೆಸರುಗಳಿರುವವು.

**ಸಂಘಾತ**— ಇವೆಲ್ಲವುಗಳ ಕೂಡೋಣವು, ಸಂಯೋಗವು.

**ಪ್ರಕೃತಿ ಮತ್ತು ಪುರುಷ**— ಸುಖದುಃಖಗಳನ್ನರಿಯುವ ಅಥವಾ ಅನು

ಭವವನ್ನು ಪಡೆಯುವ ಚೈತನ್ಯವೊಂದನ್ನುಳಿದು ಎಲ್ಲವೂ ಪ್ರಕೃತಿಯೆ. ಸೃಷ್ಟಿಯು ಯಾವಾಗ್ಗೆ ಆರಂಭಿಸಿತು ಏನು ಇದನ್ನು ಹೇಳಲಿಕ್ಕೆ ಬಾರದ್ದ ರಿಂದ ಪ್ರಕೃತಿ ಪುರುಷಗಳೆರಡೂ ಅನಾದಿಯೆ ಇರುವವೆಂದು ಶ್ರೀಕೃಷ್ಣನು ಹೇಳಿರುವನು.

## ೧೩ ನೆಯ ಅಧ್ಯಾಯ-ಟಿಪ್ಪಣಿಗಳು.

**ಅನಾದಿಮತ್**— ಜ್ಞೇಯದ ಅಂದರೆ ಆತ್ಮವಸ್ತುವಿನ ವರ್ಣನೆಯಿದು. ಇದು ಸದಸತ್, ಗ್ರಸಿಷ್ಣು ಪ್ರಭವಿಷ್ಣು, ನಿರ್ಗುಣ-ಗುಣಿ ಈ ಮುಂತಾದ ವಿರೋಧಾಭಾಸಗಳಿಂದ ಕೂಡಿರುವದು. ಉಪನಿಷತ್ತುಗಳಲ್ಲಿಯಾದರೂ ಆತ್ಮವಸ್ತುವು ಇದೇ ರೀತಿ ವರ್ಣಿಸಲ್ಪಟ್ಟಿರುವದು. ವಸ್ತುತಃ ದ್ವಂದಗಳಾ ಚೆಗಿರುವುದರಿಂದಲೂ ನಿರಪೇಕ್ಷವಿರುವುದರಿಂದಲೂ ಆ ಪರತತ್ವದ ವರ್ಣನೆ ಯನ್ನು ಹೀಗೆಯೆ ಮಾಡಬೇಕಾಗುತ್ತಿದೆ. ಯಾಕಂದರೆ ಭಾಷೆಯು ಯಾವಾಗಲೂ ಸಾಪೇಕ್ಷಭೂಮಿಕೆಯಲ್ಲಿಯೆ ಇರುವದು. ಪರತತ್ವವು ಅನುಭವದ ವಿಷಯವು. ಅದನ್ನು ಬರಿಯ ಶಬ್ದಗಳಿಂದ ಬಣ್ಣಿಸಲಾಗದು. ಏನೋ ನಿದರ್ಶನಾರ್ಥವಾಗಿ ವರ್ಣನೆ ಮಾಡುವದು ಅವಶ್ಯವೆಂದು ಈ ರೀತಿ ವರ್ಣಿಸುವದು.

**ಧ್ಯಾನೇನಾತ್ಮನಿ**—೨೪ ಮತ್ತು ೨೬ ನೆಯ ಮಂತ್ರಗಳಲ್ಲಿ ಪರಮಾತ್ಮಜ್ಞಾನ ವನ್ನು ಮಾಡಿಕೊಳ್ಳುವ ಮಾರ್ಗಗಳು ಹೇಳಲ್ಪಟ್ಟಿವೆ. ಧ್ಯಾನ ಸಾಂಖ್ಯ (ಜ್ಞಾನ) ಕರ್ಮಯೋಗಗಳೆಂಬ ಮೂರು ಯೋಗಗಳನ್ನೂ ಶ್ರವಣವೆಂಬ ಸಾಧನವನ್ನೂ ಇಲ್ಲಿ ಹೇಳಿದ್ದಾರೆ. ಈ ಮಾರ್ಗಗಳಲ್ಲಿ ಯಾವುದರಿಂದ ಹೋದರೂ ಜನರು ಮೋಕ್ಷಭಾಗಿಗಳಾಗುವರು, ಮೃತ್ಯುವನ್ನು ದಾಟುವ ರೆಂದು ಸ್ಪಷ್ಟವಾದ ಉಲ್ಲೇಖವಿದೆ. ಇವೆಲ್ಲ ಭಿನ್ನ ಭಿನ್ನ ಮಾರ್ಗಗಳೆಂದು ಎನಿಸಿಕೊಂಡರೂ ಇವು ಒಂದೇ ಒಂದು ಅಮೃತಪದವಿಯನ್ನು ದೊರಕಿಸಿ ಕೊಡುವಂತಹವು.

---

# ಹದಿನಾಲ್ಕನೆಯ ಅಧ್ಯಾಯವು.

## ಶಬ್ದಾರ್ಥಗಳು.

**ಮಹದ್ಬ್ರಹ್ಮ—** ಮೂಲಪ್ರಕೃತಿಗೆ ಬೇರೆ ಬೇರೆ ಹೆಸರುಗಳಿವೆ. ಅವು ಗಳಲ್ಲಿ ಇದೊಂದು.

**ಸರ್ಗ—** ಸರ್ಗವೆಂದರೆ ಸೃಷ್ಟಿನಿರ್ಮಾಣವು. ವಿಸರ್ಗವೆಂದರೂ ಅದೇ. ತದ್ವಿರುದ್ಧ ಪ್ರಲಯವು ಅಂದರೆ ಸೃಷ್ಟಿಯ ನಾಶವು.

**ಸಾಧರ್ಮ್ಯ—** ಪರಮಾತ್ಮನ ಗುಣಗಳನ್ನು ಅಥವಾ ಅಮೃತತ್ವಾದಿ ಅವನ ಧರ್ಮಗಳನ್ನು ಪಡೆಯುವದು. ಹೀಗೆ ಪಡೆದವರು ಪುನಃ ಹುಟ್ಟುವದಿಲ್ಲ.

## ೧೪ನೆಯ ಅಧ್ಯಾಯ—ಟಿಪ್ಪಣಿಗಳು.

**ನಿಬಧ್ನಂತಿ—** ಸತ್ವ ರಜ ತಮಗಳೆಂಬ ಮೂರೂ ಗುಣಗಳು ಬಂಧನಕಾರಿ ಗಳೇ. ಮುಕ್ತನಾಗಬೇಕಾದರೆ ಈ ಮೂರೂ ಗುಣಗಳನ್ನು ದಾಟಿ ಹೋಗ ಲಿಕ್ಕೆಬೇಕು, ಅಂದರೆ ತ್ರಿಗುಣಾತೀತಾವಸ್ಥೆಯನ್ನು ಹೊಂದಲಿಕ್ಕೆಬೇಕು. ಪ್ರಕೃತಿಯ ಈ ಮೂರು ಗುಣಗಳೆ ಈ ಸೃಷ್ಟಿಯ ಮೂಲಕಾರಣಗಳು. ಇವುಗಳ ಸಮಸ್ಥಿತಿಯೇ ಸೃಷ್ಟಿಯ ಲಯಸ್ಥಿತಿಯು. ಇವುಗಳ ಚಲನ ವಲನವೆ ಸೃಷ್ಟಿಯ ಹುಟ್ಟಿಗೆ ಮತ್ತು ಬಾಳ್ವೆಗೆ ಕಾರಣವು.

**ಗುಣಾವರ್ತಂತ ಇತ್ಯೇವ—** ಈ ಮೂರೂ ಗುಣಗಳ ಲಕ್ಷಣಗಳನ್ನು ಉತ್ತಮವಾಗಿ ಇಲ್ಲಿ ಹಾಗೂ ೧೮ನೆಯ ಅಧ್ಯಾಯದಲ್ಲಿ ವರ್ಣಿಸಿದ್ದಾರೆ. ಆದರೆ ಇವುಗಳ ಆಚೆಗೆ ಹೋಗುವ ಬಗೆ ಹೇಗೆ? ಈ ಎಲ್ಲ ಸೃಷ್ಟಿವ್ಯಾಪಾ ರವೂ ತನ್ನ ದೇಹದಲ್ಲಿಯು, ಮನಸಿನಲ್ಲಿಯು, ಬುದ್ಧಿಯಲ್ಲಿಯು ವ್ಯಾಪಾರ ಗಳೂ ಕೇವಲ ಗುಣಗಳ ಚಲನವಲನದಿಂದ ನಡೆದಿರುವವು ಎಂದು ತಾನು ಸಾಕ್ಷೀರೂಪನಾಗಿರುವುದೆ ತ್ರಿಗುಣಾತೀತನಾಗುವುದಕ್ಕೆ ಸಾಧನವು. ಹೀಗೆ ಸಾಕ್ಷಿರೂಪನಿದ್ದು ಯಾವಾಗಲೂ ಪರಮಾತ್ಮಧ್ಯಾನ ಮಾಡುವ ವನು ಬ್ರಹ್ಮಪದವಿಯನ್ನು ಪಡೆಯುವನು.

**ಸರ್ವಾರಂಭಪರಿತ್ಯಾಗೀ—** ಇದರರ್ಥವು ಜಡನಂತೆ ಕೂಡಬೇಕಂದಲ್ಲ.

ತನ್ನದು ಅಥವಾ ತಾನು ಏನಾದರೂ ಮಾಡುವದಿದೆ ಎಂಬ ಬುದ್ಧಿಯಿಂದ ಯಾವುದನ್ನೂ ಮಾಡದೆ ಇರುವುದೇ ಕರ್ಮಪರಿತ್ಯಾಗವೆನಿಸುವದು. ಆದರೆ ಪರಮಾತ್ಮಸಂಕಲ್ಪದಿಂದ ಆಗತಕ್ಕ ಕಾರ್ಯಗಳಲ್ಲಿ ನಿರಹಂಕಾರ ಬುದ್ಧಿಯಿಂದ ಭಾಗಿಯಾಗುವದು ಎಂದಿಗೂ ಬಂಧಕವಾಗಲಾರದೆಂದು ಶ್ರೀಕೃಷ್ಣನು ಪದೇ ಪದೇ ಹೇಳುತ್ತಬಂದಿರುವನು.

**ಗುಣೇಭ್ಯಶ್ಚ ಪರಂ ವೇತ್ತಿ**— ಗುಣಗಳಾಚೆಗಿರುವ ಆತ್ಮನ ಸಾಕ್ಷಾತ್ಕಾರ ವಾಯಿತೆಂದರೆ ಮನುಷ್ಯನು ಪರಮಾತ್ಮಭಾವವನ್ನು ಪಡೆಯುವದು ನಿಶ್ಚಯವು.

---

# ಹದಿನೈದನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಅಶ್ವತ್ಥ**— ಅರಳೆಯ ಮರವು. ಈ ವಿಶ್ವದ ವಿಸ್ತಾರಕ್ಕೆ ಅಥವಾ ಸಂಸೃತಿಗೆ ಈ ಬಗೆಯ ಉಪಮೆಯನ್ನು ಕೊಟ್ಟದ್ದು ಎಷ್ಟೋ ರಾಷ್ಟ್ರಗಳ ಪುರಾಣಗಳಲ್ಲಿ ನೋಡಬಹುದು.

**ಛಂದಾಂಸಿ ಪರ್ಣಾನಿ**— ವೇದಗಳು ಆ ವೃಕ್ಷವನ್ನು ವರ್ಣಿಸುತ್ತಿರುವುದರಿಂದ ಅವೇ ಅದನ್ನು ಆಚ್ಛಾದಿಸುವ ಎಲೆಗಳು. ಆ ವರ್ಣನೆಯನ್ನು ತಿಳಿದುಕೊಂಡವರು ವೇದವೇತ್ತರು.

**ಕ್ಷರ-ಅಕ್ಷರ**— ಪ್ರತಿಕ್ಷಣಕ್ಕೆ ಬದಲಾಗುತ್ತಿರುವ ನಶ್ವರವಾದ ಗೋಚರ ಅಥವಾ ವ್ಯಕ್ತಸೃಷ್ಟಿಯು 'ಕ್ಷರ' ವೆನಿಸುವದು. ಇದಕ್ಕೆ ಆಧಾರವಾಗಿರುವ ಅವ್ಯಕ್ತಪ್ರಕೃತಿಯು 'ಅಕ್ಷರ' ಅಂದರೆ ನಾಶರಹಿತವೆನಿಸುವದು. ಅದು ಕೂಟಸ್ಥ ಅಂದರೆ ಮೂಲದಲ್ಲಿರುವುದು ಎಂದೆನಿಸುವದು.

**ಪುರುಷೋತ್ತಮ**— ಎಲ್ಲ ಪುರುಷರಲ್ಲಿ ಉತ್ತಮನು, ಶ್ರೇಷ್ಠನು. ಪರಮಾತ್ಮನು, ಪರಬ್ರಹ್ಮನು, ಅಕ್ಷರಬ್ರಹ್ಮನು. ಇವನೇ ಎಲ್ಲಕ್ಕೂ ಅಧ್ಯಕ್ಷನು, ಸಾಕ್ಷಿಯು.

### ೧೫ನೆಯ ಅಧ್ಯಾಯ — ಟಿಪ್ಪಣಿಗಳು.

**ಮಮೈವಾಂಶೋ—** ಪುರುಷೋತ್ತಮನಿಂದಲೆ ಸಕಲ ಸೃಷ್ಟಿಯು. 'ಜೀವಭೂತ' ಅಂದರೆ ಜೀವರೂಪವಾಗಿ ವ್ಯಕ್ತವಾದದ್ದು ತನ್ನ ಪರಾಪ್ರಕೃತಿಯೆಂದು ಹಿಂದಕ್ಕೆ ಏಳನೆಯ ಅಧ್ಯಾಯದಲ್ಲಿ ಹೇಳಿದ್ದಾನೆ. ಹಾಗೆ ಇಲ್ಲಿ ಜೀವವು ತನ್ನ ಅಂಶವೆ ಎಂದು ವಚನವಿರುವದು.

**ಪುರುಷೋತ್ತಮಯೋಗ—** ಈ ಅಧ್ಯಾಯವು ಪುರುಷೋತ್ತಮಯೋಗವೆನಿಸುವದು. ವ್ಯಕ್ತಪ್ರಕೃತಿ, ಅವ್ಯಕ್ತಪ್ರಕೃತಿ ಮತ್ತು ಅವುಗಳಾಚೆಗಿದ್ದು ಅವುಗಳನ್ನು ನಿಯಮಿಸುವ ಪರಮಾತ್ಮನು ಹೀಗೆ ಮೂರು ಕಲ್ಪನೆಗಳನ್ನು ಇಲ್ಲಿ ಸ್ಪಷ್ಟವಾಗಿ ಶ್ರೀಕೃಷ್ಣನು ಹೇಳಿರುವನು. ಸರ್ವಾಂತರ್ಯಾಮದಲ್ಲಿದ್ದು ಸರ್ವೇಶ್ವರನಾದ, ಸರ್ವಜ್ಞಾನವಿಷಯನಾದ, ಅವನನ್ನೆ ಭಜಿಸುವದು ಅವಶ್ಯವು.

---

## ಹದಿನಾರನೆಯ ಅಧ್ಯಾಯವು.

---

### ಶಬ್ದಾರ್ಥಗಳು

**ಅಪೈಶುನ—** ಕ್ಷುದ್ರಭಾವವಿಲ್ಲದಿರುವಿಕೆಯು, ಔದಾರ್ಯವು.

**ಕಾಮಕಾರ—** ಯಾವದೊಂದು ಇಂದ್ರಿಯ ಸುಖಕ್ಕಾಗಿ ಮಾಡಿದ ಕಾರ್ಯವು.

**ದೈವೀ ಮತ್ತು ಆಸುರೀ ಸಂಪತ್ತು—** ಸಂಪತ್ತಿ ಅಂದರೆ ಸ್ವಭಾವ, ಗುಣ, ಕರ್ಮ ಇವು ಮೂರೂ. ಸ್ವಲ್ಪದರಲ್ಲಿ ದೈವೀ ಮತ್ತು ಆಸುರೀ ಅಥವಾ ರಾಕ್ಷಸೀ ಸ್ವಭಾವಗಳ ವರ್ಣನೆಯು ೯ನೆಯ ಅಧ್ಯಾಯದಲ್ಲಿ ಬಂದಿದೆ. ದೈವೀ ಸಂಪತ್ತು ಮೋಕ್ಷದಾಯಕವು ಆಸುರೀ ಸಂಪತ್ತು ಬಂಧನಕಾರಿಯು. ಇಲ್ಲಿ ಎರಡೂ ಸಂಪತ್ತುಗಳ ಲಕ್ಷಣಗಳು ಬಹಳೇ ವಿಸ್ತಾರವಾಗಿ ಕೊಡಲ್ಪಟ್ಟಿರುವವು.

**ತ್ರಿವಿಧಂ ನರಕಸ್ಯೇದಂ**— ಕಾಮ, ಕ್ರೋಧ, ಲೋಭ, ಇವೇ ನರಕಕ್ಕೆ ಅಂದರೆ ದುಃಖದಾಯಕ ಅವಸ್ಥೆಗೆ ನಮ್ಮನ್ನು ಒಯ್ಯುವವು. ಅತ್ಯಂತ ದುಃಖದಿಂದ ಕೂಡಿದ ಚಿದವಸ್ಥೆಯೆ ನರಕವು.

**ತಸ್ಮಾತ್ ಶಾಸ್ತ್ರಂ ಪ್ರಮಾಣಂ**— ನಮ್ಮ ಕರ್ತವ್ಯವು ಯಾವುದು ಇದನ್ನು ತಿಳಿದುಕೊಳ್ಳಲಿಕ್ಕೆ ಶಾಸ್ತ್ರಗಳು ಮಾರ್ಗದರ್ಶಕವಾಗಿರುವವು. ಶಾಸ್ತ್ರವೆಂದರೆ ಯಾವುದೆ ವಿಷಯದಲ್ಲಿ ಯಥಾರ್ಥಜ್ಞಾನಪೂರ್ವಕ ಶ್ರೇಷ್ಠರು ಮಾಡಿದ ನಿಯಮಗಳು.

---

# ಹದಿನೇಳನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಶ್ರದ್ಧೆ**— 'ಇದು ಹೀಗೆಯೆ ಇದೆ' ಎಂಬ ನಿಶ್ಚಿತಜ್ಞಾನಪೂರ್ವಕ ಯಾವುದೊಂದು ತತ್ವದಲ್ಲಿ ಅಥವಾ ವಿಷಯದಲ್ಲಿ ಮನುಷ್ಯನು ಇಟ್ಟ ವಿಶ್ವಾಸವು, ನಂಬಿಗೆಯು.

**ಸತ್ವ**—ಜೀವ, ವಸ್ತು, ಭೂತ, ಸ್ವಭಾವ ಹೀಗೆ ಅರ್ಥಗಳಿರುವವು.

**ಯಾಮ**— ಒಂದು ಪ್ರಹರ, ಮೂರು ತಾಸು, ಏಳೂವರಿ ಘಟಿಕಾ.

## ೧೭ ನೆಯ ಅಧ್ಯಾಯ— ಟಿಪ್ಪಣಿಗಳು.

**ಶ್ರದ್ಧೆ ಮತ್ತು ಶಾಸ್ತ್ರ**— ಶಾಸ್ತ್ರ ಮತ್ತು ಶ್ರದ್ಧೆ ಇವೆರಡೂ ಕೂಡಿದಲ್ಲಿ ಯಾವ ಪ್ರಶ್ನೆಯೆ ಇಲ್ಲ. ಆದರೆ ಶಾಸ್ತ್ರ ಬಿಟ್ಟು ಶ್ರದ್ಧೆಯಿಂದ ನಡೆದರೆ ಹೇಗೆ ಎಂದು ಅರ್ಜುನನ ಪ್ರಶ್ನೆಯು. ಅದಕ್ಕೆ ಶಾಸ್ತ್ರ ಬಿಟ್ಟು ಎಂದೂ ನಡೆಯಕೂಡದು ಎಂದು ಶ್ರೀಕೃಷ್ಣನ ಸ್ಪಷ್ಟವಾದ ಆಜ್ಞೆಯು.

**ಶ್ರದ್ಧಾಮಯೋಽಯಂ**— ಮನುಷ್ಯನ ಜೀವನಕ್ರಮದಲ್ಲಿ ಶ್ರದ್ಧೆಯ ಬಲವು ಹೆಚ್ಚಿನದು. ಅದು ಮನುಷ್ಯನ ಆಯುಷ್ಯಕ್ಕೆ ರೂಪುಗೊಡುವ ಅಸಾಧಾರಣ ಅಂತಃಶಕ್ತಿಯು. ಆಯಾ ಮನುಷ್ಯನ ಶ್ರದ್ಧೆಯು–ಇದಕ್ಕೆ ಕ್ರತು ಎಂದು ಉಪನಿಷತ್ತಿನಲ್ಲಿ ಹೆಸರಿದೆ—ಹೇಗೋ ಹಾಗೆ ಅವನು ಆಗುವನು.

**ಓಂ ತತ್ ಸತ್**— ನಿರ್ದೇಶವೆಂದರೆ ಗುರ್ತು, ಚಿನ್ಹವು, ಸಂಕೇತವು. ಇದು ಬ್ರಹ್ಮನ ಶಬ್ದರೂಪ ನಿರ್ದೇಶವು. ಓಂ ಎಂಬುದು ಛಾಂದೋಗ್ಯ ಕಠ ಮುಂಡಕ ಮಾಂಡೂಕ್ಯಾದಿ ಉಪನಿಷತ್ತುಗಳಲ್ಲಿ ಪರಮಾತ್ಮನ ನಿರ್ದೇಶವೆಂದು ಹೇಳಲ್ಪಟ್ಟಿದೆ. ತತ್ ಅಂದರೆ 'ಆ ಪರತತ್ವವು', ಇಂದ್ರಿಯ ಗೋಚರವಾಗಿರುವ 'ಇದಲ್ಲ', ಎಂದು 'ತತ್ವಮಸಿ' ಎಂಬ ಛಾಂದೋಗ್ಯದಲ್ಲಿಯ ಮಂತ್ರದ ಮೇಲಿಂದ ತಿಳಿದುಬರುವದು. ಸತ್ ಅಂದರೆ ಯಾವಾಗಲೂ ಇರುವಂತಹದು. ಅನಾದಿ ಅನಂತ ಅಜರ ಅಮರವಾದುದು. ಓಂ ತತ್ ಸತ್ ಇದು ವೇದೋಪನಿಷತ್ತುಗಳ ಕಾಲದಲ್ಲಿ ರೂಢವಿದ್ದ ಬ್ರಹ್ಮನಿರ್ದೇಶವು. ಈಗ ಸತ್ ಚಿತ್ ಆನಂದವೆಂಬ ನಿರ್ದೇಶವು ಹೆಚ್ಚು ರೂಢವಿದೆ.

---

# ಹದಿನೆಂಟನೆಯ ಅಧ್ಯಾಯವು.

---

## ಶಬ್ದಾರ್ಥಗಳು.

---

**ಅಧಿಷ್ಠಾನ**— ಕಾರ್ಯಮಾಡತಕ್ಕ ಸ್ಥಾನವು, ಯಾವುದೇ ಕಾರ್ಯಕ್ಕೆ ಅವಶ್ಯವಿರುವ ಪಂಚಕಾರಣಗಳಲ್ಲಿ ಮೊದಲನೆಯದು.

**ಕರ್ಮಸಂಗ್ರಹ**— ಕರ್ಮವನ್ನು ಕೈಗೂಡಿಸುವಿಕೆ. ಇದಕ್ಕೆ ಕರ್ಮ, ಕರಣ ಮತ್ತು ಕರ್ತೃಗಳು ಅವಶ್ಯ.

**ಗುಣಸಂಖ್ಯಾನ**—ಸಾಂಖ್ಯಶಾಸ್ತ್ರವು. ಗುಣಗಳನ್ನು ಅಥವಾ ವಸ್ತುಗಳನ್ನು ಎಣಿಸಿ ಹೇಳುವುದರಿಂದ ಈ ಶಾಸ್ತ್ರಕ್ಕೆ ಈ ಹೆಸರುಗಳು ಬಂದಿರುವವು.

**ತ್ಯಾಗ**— ನಾವು ಮಾಡುವ ಎಲ್ಲ ಕರ್ಮಗಳ ಫಲಾಶೆ ಬಿಡುವುದೇ ತ್ಯಾಗವು.

**ದೀರ್ಘಸೂತ್ರ**— ಮಂದ, ಬಹಳೇ ನಾವಕಾಶವಾಗಿ ಕೆಲಸಮಾಡುವವ.

**ದೈವ**— ಸೃಷ್ಟಿಶಕ್ತಿಗಳು. ಇದು ಯಾವದೇ ಕಾರ್ಯದ ಐದನೆಯ ಅಥವಾ ಕೊನೆಯ ಕಾರಣವು.

**ಧೃತಿ**— ಧಾರಣಮಾಡುವ ಶಕ್ತಿ. ಧಾರಣಾಶಕ್ತಿ.

**ಸನ್ಯಾಸ**— ಕಾಮ್ಯಕರ್ಮಗಳನ್ನು ಮಾತ್ರ ಬಿಡುವದು.

## ೧೮ನೆಯ ಅಧ್ಯಾಯ—ಟಿಪ್ಪಣಿಗಳು.

**ಸನ್ಯಾಸ ಮತ್ತು ತ್ಯಾಗ**— ಯಜ್ಞ, ದಾನ, ತಪ ಈ ಮೂರು ಕರ್ಮಗಳನ್ನು ಎಂದಿಗೂ ಬಿಡಕೂಡದು ಮತ್ತು ಇವುಗಳನ್ನು ಯಾವ ಫಲಕಾಮನೆ ಇಲ್ಲದೆ ಮಾಡತಕ್ಕದ್ದು ಎಂದು ಶ್ರೀಕೃಷ್ಣನ ಸಿದ್ಧಾಂತವಿರುವದು. ನಿಜವಾದ ತ್ಯಾಗವೂ ಸನ್ಯಾಸವೂ ಸಮಾನಾರ್ಥಕವಾದವುಗಳೆಂಬುದನ್ನು ೧೨ನೆಯ ಮಂತ್ರದ ಮೇಲಿಂದ ತಿಳಿಯಬಹುದು. ಕರ್ಮ ಮತ್ತು ಸನ್ಯಾಸ ಇವುಗಳ ಸಮನ್ವಯ ಮಾಡುವದು ಗೀತಾಗ್ರಂಥದ ವಿಶೇಷವಿರುವುದರಿಂದ ಕೇವಲ ಎಲ್ಲ ಕರ್ಮಗಳನ್ನು ಬಿಡುವುದಕ್ಕೆ ಅದು ಎಂದಿಗೂ ಸನ್ಯಾಸವೆಂದು ಅನ್ನುವದಿಲ್ಲ. ಸಂಕಲ್ಪವನ್ನು ಬಿಡುವದು ಅಥವಾ ಕಾಮ್ಯಕರ್ಮವನ್ನು ಬಿಡುವುದೇ ಸನ್ಯಾಸವು.

**ಯಸ್ಯ ನಾಹಂ ಕೃತೋ ಭಾವಃ ಬುದ್ಧಿರ್ಯಸ್ಯ ನ ಲಿಪ್ಯತೇ**— ಮನುಷ್ಯನ ಅಹಂಕಾರವಳಿದು ಬುದ್ಧಿಯು ಅಲಿಪ್ತವಾಗಿರಲಾರಂಭಿಸಿತೆಂದರೆ ಅವನು ಪಾಪಪುಣ್ಯಗಳಾಚೆಗೆ ಅತೀತಾವಸ್ಥೆಗೆ ಹೋಗಿ ಮುಟ್ಟುವನು. ಅವನು ತತ್ವತಃ 'ಅಕರ್ತಾರ' ನಾಗುವನು. ನೀರಿನಲ್ಲಿರುವ ಕಮಲಪತ್ರದಂತೆ ಅವನ ಸ್ಥಿತಿಯು.

**ಸಾತ್ವಿಕಂ ಸುಖಂ**— ಅತೀಂದ್ರಿಯ ಸುಖವೆ ಸಾತ್ವಿಕ ಸುಖವು. ಆತ್ಮಾನಂದವು, ಪರಮಾನಂದವು.

**ಸ್ವಕರ್ಮ, ಸಹಜ, ಸ್ವಭಾವನಿಯತ, ಸ್ವಧರ್ಮ**—ಇವು ಒಂದೇಬಗೆಯ ವಿಚಾರಗಳನ್ನು ವ್ಯಕ್ತಮಾಡುವವು. ಪ್ರತಿಯೊಬ್ಬನು ತನ್ನ ಜನ್ಮ, ಗುಣ, ಸಂಸ್ಕಾರ ಇವುಗಳಿಗನುಸರಿಸಿ ಕರ್ಮವನ್ನು ಮಾಡಬೇಕು ಮತ್ತು ಅದನ್ನು ಪರಮಾತ್ಮನಿಗೆ ಅರ್ಪಿಸಬೇಕು ಎಂದು ಇಲ್ಲಿ ಪ್ರತಿಪಾದನವಿರುವದು.

**ತತೋ ಮಾಂ ತತ್ವತೋ ಜ್ಞಾತ್ವಾ**— ಮೊದಲು ಶುದ್ಧಬುದ್ಧಿಯಾಗಬೇಕು. ಆಮೇಲೆ ಆತ್ಮನಿಯಮನ ಮತ್ತು ವೈರಾಗ್ಯ ಇವುಗಳ ಬಲದಿಂದ ಧ್ಯಾನಯೋಗವನ್ನು ಸಾಧಿಸಬೇಕು. ಆದರಿಂದ ಮನುಷ್ಯನು 'ಬ್ರಹ್ಮಭೂತ' ನಾಗಿ ಅವನಿಗೆ ಪರಮಾತ್ಮಭಕ್ತಿಯು ಪ್ರಾಪ್ತವಾಗುವದು ಎಂದು ಜ್ಞಾನನಿಷ್ಠೆಯ ವರ್ಣನೆಯು ೪೯ ರಿಂದ ೫೫ ವರೆಗಿನ ಮಂತ್ರಗಳಲ್ಲಿರುವದು.

**ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ**— ಸ್ವಭಾವವು, ಪ್ರತಿಯೊಬ್ಬನ ಮೂಲ

ಬಲವು, ಪ್ರವೃತ್ತಿಯು ಬಲವತ್ತರವಿರುವದು. ಈಶ್ವರಾರ್ಪಣಬುದ್ಧಿಯಿಂದ ನಾವು ಕರ್ಮ ಮಾಡಿ ಅದನ್ನು ಗೆದೆಯಬೇಕೇ ಹೊರ್ತು ಅದನ್ನು ನಿರೋಧಿಸಿ, ನಿಗ್ರಹಿಸಿ ಕಾರ್ಯವು ಆಗದು, ಶಾಂತಿಯು ದೊರಕದು.

**ಮನ್ಮನಾ–೬೫ ಮತ್ತು ೬೬—** ಈ ಮಂತ್ರಗಳು ಗೀತೆಯಲ್ಲಿ ಅತ್ಯಂತ ಮಹತ್ವವುಳ್ಳವುಗಳು. ಇವು ಗೀತೆಯಲ್ಲಿಯ ಮಹಾವಾಕ್ಯಗಳು. ಅಧ್ಯಾತ್ಮ ಮಾರ್ಗದ ತಿರುಳನ್ನೇ ಇಲ್ಲಿ ಈ ಮಂತ್ರಗಳು ಹೇಳುವವು. ಯಥಾರ್ಥವಾಗಿ ಇಲ್ಲಿ ಇವುಗಳಿಗೆ ಶ್ರೀಕೃಷ್ಣನು 'ಗುಹ್ಯತಮಃ' ಎಂದಿರುವನು. ಇಲ್ಲಿ ಪರಮಾತ್ಮಯೋಗವನ್ನು ಅಥವಾ ಸ್ವಾತ್ಮಾರ್ಪಣ ಯೋಗವನ್ನು ಶ್ರೀಕೃಷ್ಣನು ಪ್ರತಿಪಾದಿಸಿರುವನು. 'ವಾಸುದೇವಃ ಸರ್ವಮಿತಿ' ಎಂಬ ಪ್ರತೀತಿಯನ್ನು ಪಡೆದು ಕೃಷ್ಣಾರ್ಪಣ ಬುದ್ಧಿಯಿಂದ ವರ್ತಿಸು ಎಂದು ಇಲ್ಲಿ ಉಪದೇಶವಿರುವದು.

**ಇದಂ ತೇ ನಾತಪಸ್ಕಾಯ—** ಅಧಿಕಾರ ನೋಡಿ ಜ್ಞಾನವನ್ನು ಹೇಳಬೇಕು. ತಪಸ್ಸು ಮಾಡುವವನು, ಭಕ್ತನು, ಕೇಳಲಿಚ್ಛಿಸುವವನು, ದೋಷೈಕಬುದ್ಧಿ ಇಲ್ಲದವನು ಈ ವಿದ್ಯೆಗೆ ಅಧಿಕಾರಿಯು. ಜಾತಿ ವರ್ಣಗಳ ನಿರ್ಬಂಧವಿಲ್ಲ.

**ನಷ್ಟೋ ಮೋಹಃ—**ಗೀತಾಮೃತವನ್ನು ಸವಿದು ಅರ್ಜುನನು ಕೃತಕೃತ್ಯನಾದನು. ಎಲ್ಲ ಸಂಶಯದ ಗಂಟುಗಳು ಒಡೆದು ಅವನು ಜ್ಞಾನಿಯಾದನು. ಪರಮಾತ್ಮ ಪ್ರೇರಣೆಯಂತೆ ಮಾಡಲಿಕ್ಕೆ ಸಿದ್ಧನಾದನು.

**ಯತ್ರ ಯೋಗೇಶ್ವರಃ ಕೃಷ್ಣಃ—** ಯೋಗೇಶ್ವರ ಕೃಷ್ಣನೂ ಧನುರ್ಧರನಾದ ಪಾರ್ಥನೂ ಇರುವಲ್ಲಿ ಶ್ರೀ, ವಿಜಯ, ಸ್ಥಿರವಾದ ನೀತಿ ಮತ್ತು ಭೂತಿ ಅಂದರೆ ಐಶ್ವರ್ಯ, ಗೆಲವು ಮತ್ತು ಅಭ್ಯುದಯ ಇವು ಕಟ್ಟಿಟ್ಟಂತೆ. ಕೃಷ್ಣಾರ್ಜುನರಿದ್ದಲ್ಲಿ ಬರಿಯ ಪಾರಲೌಕಿಕ ಸುಖವೊಂದೇ ಅಲ್ಲ, ಅದರ ಜೊತೆಗೆ ಸಕಲ ಸಿದ್ಧಿಗಳು ಕೈಜೋಡಿಸಿ ನಿಲ್ಲುವವು, ಎಂದು ಸಂಜಯನು ಹೇಳಿರುವನು.

ಶ್ರೀಕೃಷ್ಣಾರ್ಪಣಮಸ್ತು.

# ತಿದ್ದುಪಡಿ.

## ಗೀತಾವಿವೇಚನೆಯು.

(ಅರ್ಥವು ಕೆಡುವಂತಿದ್ದಲ್ಲಿ ಮಾತ್ರ ತಿದ್ದಿದೆ.)

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೭ | ೭–೮ | ಮಹಾರಾಷವೃತ್ರವು | ಮಹಾರಾಷ್ಟ್ರವು |
| ೨೯ | ೨೧ | ದ್ವೆದೀಪ್ಯವಾನವಾದ | ದೈದೀಪ್ಯಮಾನವಾ |
| ೪೧ | ೧೨ | ಆದರಲ್ಲಿ | ಅವರಲ್ಲಿ |
| ೪೭ | ೧೯ | ಕಾಲ ನಿರ್ಣ | ಕಾಲನಿರ್ಣಯ |
| ೬೫ | ೮ | ಪುನರುಜಾರವು | ಪುನರುಜ್ಜಾರವು |
| ೭೧ | ೧೫ | ದ್ರಶ್ಯಸೃಷ್ಟಿಯ | ದೃಶ್ಯಸೃಷ್ಟಿಯ |
| ೭೫ | ೧೨ | ಅವತಾರಕನಿಂದು | ಅವತಾರಿಕನಿಂದ |
| ೮೪ | ೯ | ಹೆಚು | ಹೆಚ್ಚು |

## (ಮಂತ್ರಗಳೂ ಅರ್ಥವೂ)

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ | ೪ | ಶಂಖಾನ್ | ಶಂಖಂ |
| ೫ | ೪ | ಹೃಷಿಕೆಶೋ | ಹೃಷೀಕೇಶೋ |
| ೭ | ೧೫ | ಯಾರಗೋಸ್ಕರ | ಯಾರಿಗೋಸ್ಕರ |
| ೮ | ೯ | ರೆತ್ಯೈಃ | ರೇತ್ಯೈಃ |
| ೧೭ | ೨೧ | ಹೆಚು | ಹೆಚ್ಚು |
| ೨೫ | ೧೫ | ಪಟರೆ | ಪಟ್ಟರೆ, |
| ೨೭ | ೧೯ | ಕರ್ವವ್ಯ | ಕರ್ತವ್ಯ |
| ೫೧ | ೨ | ಸಥಾ | ಸ್ತಥಾ |
| ೫೧ | ೧೨ | ಸಂಗ್ರದ | ಸಂಗ್ರಹದ |
| ೪೨ | ೪ | ಜ್ಞಾನಾಗಿಃ | ಜ್ಞಾನಾಗ್ನಿಃ |
| ೪೩ | ೭ | ಜಾನ್ನಂ | ಜ್ಞಾನಂ |
| ೪೨ | ೭ | ತತ್ಪರಃ | ಮತ್ಪರಃ |

| | | | |
|---|---|---|---|
| ೪೪ | ೬ | ತಯೋವಸ್ತು | ತಯೋಽಸ್ತು |
| ೪೬ | ೧೦ | ೧೯ | ೧೪ |
| ೪೬ | ೨೫ | ೪೧ | ೧೪ |
| ೫೨ | ೫ | ಜಿತೇಂದ್ರಿಯ | ಚಿತ್ತೇಂದ್ರಿಯ ಕ್ರಿಯಃ |
| ೫೯ | ೧ | ಹ್ರಿಯತೆ | ಹ್ರಿಯತೇ |
| ೬೨ | ೧ | ಬಲವಂತಾಂ | ಬಲವತಾಂ |
| ೬೩ | ೯ | ಕಾವ್ಯೈಸ್ಯೈ | ಕಾವ್ಯೈಸ್ತ್ರೈ |
| ೭೫ | ೧೪ | ನಾನ | ನಾನು |
| ೮೧ | ೩ | ಯೊಗೇನ | ಯೋಗೇನ |
| ೮೫ | ೧೨ | ಸಾವರ | ಸ್ಥಾವರ |
| ೯೪ | ೧೩ | ಪ್ರವೇಸಿಸುತ್ತಲಿವೆ | ಪ್ರವೇಶಿಸುತ್ತಲಿವೆ |
| ೯೮ | ೧೪ | ಆದುವರಿಂದ | ಆದುದರಿಂದ |
| ೧೦೫ | ೩ | ನಿರ್ವೈರನಾದವನು | ನಿರ್ವೈರನಾದವನು |
| ೧೦೯ | ೩ | ಕೇನ ಚಿತ್ | ಕೇನಚಿತ್ |
| ೧೧೨ | ೨೨ | ಇಂದ್ರಿಯ ಗುಣಗಳ | ಇಂದ್ರಿಯಗುಣಗಳ |
| ೧೧೨ | ೨೨ | ಭಾಸವಾದರೂ ಇದ್ದು | ಭಾಸವಿದ್ದರೂ |
| ೧೧೩ | ೧೩ | ಹೆಚು | ಹೆಚ್ಚು |
| ೧೧೯ | ೧೪ | ಕತ್ತಲೆ | ಅಜ್ಞಾನ |
| ೧೨೮ | ೨ | ಜರ್ಾನಯೋಗ | ಜ್ಞಾನಯೋಗ |
| ೧೩೬ | ೧೨ | ಪರಿಕಿಷ್ಟಂ | ಪರಿಕ್ಲಿಷ್ಟಂ |
| ೧೪೦ | ೬ | ಪರಿತ್ಯಾಗಸಾಮಸಃ | ಪರಿತ್ಯಾಗಸ್ತಾಮಸಃ |
| ೧೪೨ | ೩ | ಪರಿಜಾತಾ | ಪರಿಜ್ಞಾತಾ |
| ೧೪೪ | ೨೪ | ಪ್ರವೃತ್ತಿ | ಪ್ರವೃತ್ತಿ |
| ೧೬೮ | ೧೩ | ಅಪಾರವಿದ್ಯೆ | ಅಪರಾವಿದ್ಯೆ |
| ೧೬೮ | ೨೪ | ಜಾನ | ಜ್ಞಾನ |
| ೧೭೪ | ೧೦ | ಯೋಗವೆಂದಿನಿಸುದದು | ಯೋಗವೆಂದೆನಿಸು |

---

ವದು